# ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ : ಭಾಷಿಕ ಅಧ್ಯಯನ

(ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)


ಸಂಶೋಧಕರು

ಕಲಯಾಣಿ ವೈ.

ಮಾರ್ಗದರ್ಶಕರು

ಡಾ. ಅಶೋಕಕುಮಾರ ರಂಜೇರೆ

ಪ್ರಾಧ್ಯಾಪಕರು






ಭಾಷಾ ನಿಕಾಯ

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬


೨೦೧೯

# ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ : ಭಾಷಿಕ ಅಧ್ಯಯನ

(ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)

ಸಂಶೋಧಕರು

**ಕಲಯಾಣಿ ವೈ.**

ಮಾರ್ಗದರ್ಶಕರು

**ಡಾ.ಅಶೋಕಕುಮಾರ ರಂಜೇರೆ**

ಪ್ರಾಧ್ಯಾಪಕರು



ಭಾಷಾ ನಿಕಾಯ

ಕನ್ನಡ ಭಾಷಾಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೧೯

# ಮಾರ್ಗದರ್ಶಕರ ಪ್ರಮಾಣ ಪತ್ರ

ಶ್ರೀಮತಿ **ಕಲಯಾಣಿ ವೈ.** ಅವರು **"ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ : ಭಾಷಿಕ ಅಧ್ಯಯನ"** (ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : 15-02-2019
ಸ್ಥಳ : ವಿದ್ಯಾರಣ್ಯ

15/02/19

**ಡಾ. ಅಶೋಕಕುಮಾರ ರಂಜೇರೆ**
ಪ್ರಾಧ್ಯಾಪಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

## ಸಂಶೋಧಕರ ಪ್ರಮಾಣ ಪತ್ರ

**"ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ : ಭಾಷಿಕ ಅಧ್ಯಯನ" (ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ)** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಅಶೋಕಕುಮಾರ ರಂಜೇರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 15/2/2019
ಸ್ಥಳ : ವಿದ್ಯಾರಣ್ಯ

Kalayani.y
(ಕಲಯಾಣಿ ವೈ)
ಸಂಶೋಧಕರು
ಕನ್ನಡ ಭಾಷಾಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

೧.೧. ಪ್ರಸ್ತಾವನೆ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವ್ಯಾಪ್ತಿ

೧.೪. ಅಧ್ಯಯನದ ವಿಧಾನ

೧.೫. ಅಧ್ಯಯನದ ಸ್ವರೂಪ

ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

## ೧.೧ ಪ್ರಸ್ತಾವನೆ

ಭಾಷೆ ಮನುಷ್ಯನ ದಿನನಿತ್ಯದ ವ್ಯವಹಾರಕ್ಕಾಗಿ ಇರುವ ಸಂವಹನ ಮಾಧ್ಯಮ. ಮನುಷ್ಯ ತನ್ನ ಬುದ್ಧಿವಂತಿಕೆಯಿಂದ ಭಾಷೆಯನ್ನು ಸೃಷ್ಟಿಸಿಕೊಂಡನು. ನಂತರ ಭಾಷೆಯನ್ನು ತನ್ನ ವಿಚಾರವಂತಿಕೆ ಹಾಗೂ ವಿಕಾಸದ ಸಾಧನವಾಗಿ ಬಳಸಿಕೊಂಡನು. ಭಾಷೆಯು ಮನುಷ್ಯನನ್ನು ಮನುಷ್ಯನನ್ನಾಗಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ ಮತ್ತು ನಾಗರೀಕತೆಯ ಬೆಳವಣಿಗೆಯಲ್ಲಿ ಜೀವನದ ಪ್ರಮುಖ ಅವಶ್ಯಕತೆಯಾಗಿ ಬೆಳೆದು ಬಂದಿದೆ. ಭಾಷೆ ದೈನಂದಿನ ವ್ಯವಹಾರಕ್ಕಷ್ಟೇ ಸೀಮಿತವಾಗಿರದೆ ಮುಂದುವರೆದಂತೆ ಜಗತ್ತಿನ ನಾಗರೀಕತೆ, ಸಂಸ್ಕೃತಿ ಮತ್ತು ಶಿಕ್ಷಣದ ಸರ್ವಾಂಗೀಣ ಅಭಿವೃದ್ಧಿಯಾಗುವಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತದೆ. ಭಾಷೆಯ ಅಭಿವೃದ್ಧಿಯಿಂದ ಶೈಕ್ಷಣಿಕ ಬೆಳವಣಿಗೆಯಾಗಿರುವುದನ್ನು ತಿಳಿಯಬಹುದು. ಹಾಗೆಯೇ ಭಾರತದ ಶಿಕ್ಷಣ ಇತಿಹಾಸವು ಭಾರತೀಯ ನಾಗರೀಕತೆಯ ಇತಿಹಾಸದಂತೆಯೇ ಪ್ರಾಚೀನವಾದುದಾಗಿದೆ. ಭಾರತೀಯ ಶಿಕ್ಷಣ ಪರಂಪರೆ ನಡೆದು ಬಂದ ದಾರಿಯನ್ನು ಗಮನಿಸಿದಾಗ ಅದು ಕಾಲದಿಂದ ಕಾಲಕ್ಕೆ ಏಕರೂಪವಾಗಿರದೆ, ಸಮಾಜದ ಅಗತ್ಯತೆಗಳಿಗೆ ಅನುಗುಣವಾಗಿ ವಿಭಿನ್ನ ರೀತಿಯಲ್ಲಿ ಬದಲಾವಣೆ ಹೊಂದುತ್ತಾ ಬಂದಿರುವುದು ಕಂಡುಬರುತ್ತದೆ.

ಭಾರತದಲ್ಲಿ ಶಿಕ್ಷಣ ಕ್ರಮವನ್ನು ನೋಡುವುದಾದರೆ ಶಿಕ್ಷಣವು ಸಂಪ್ರದಾಯದ ಆಶ್ರಯದಲ್ಲಿ ವ್ಯವಸ್ಥೆಗೊಂಡಿದ್ದು, ಅಪಾರ ಜ್ಞಾನ ಸಂಪಾದನೆಯ ಗುರಿಯನ್ನು ಹೊಂದಿತ್ತು. ಶಿಕ್ಷಣವು ಪ್ರಾಯೋಗಿಕವಾಗಿ ಎಲ್ಲಾ ವಲಯಗಳಲ್ಲಿ ಪ್ರಭುತ್ವವನ್ನು ಹೊಂದಿತ್ತು. ಪ್ರಾಚೀನ ಕಾಲದಲ್ಲಿ ವೇದಗಳು ಬಹುಮುಖ್ಯ ಸ್ಥಾನವನ್ನು ಪಡೆದಿದ್ದವು.[೧] ವೇದಗಳ ಕಾಲದಲ್ಲಿ ಶಿಕ್ಷಣ ಕ್ರಮವು ಮೌಖಿಕವಾಗಿತ್ತು. ಯಾವುದೇ ಭಾಷಾ ಪಠ್ಯಗಳು ಇರಲಿಲ್ಲ. ವೇದ,

ಪುರಾಣ, ಉಪನಿಷತ್ತುಗಳು ಮತ್ತು ಮಹಾಕಾವ್ಯಗಳನ್ನು ಕಲಿಸುತ್ತಿದ್ದರು. ಈ ಕ್ರಮದಲ್ಲಿ ಬೋಧನೆ ಮತ್ತು ಕಲಿಕೆ ಬೆಳೆದು ಬಂದಿರುವುದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ವೇದಗಳ ಕಾಲದ ಬೋಧನಾ ಪದ್ಧತಿ, ಬೌದ್ಧರ ಕಾಲದ ಬೋಧನಾ ಪದ್ಧತಿ, ಮಧ್ಯಯುಗೀನ ಕಾಲದ ಬೋಧನಾ ಪದ್ಧತಿ ಹಾಗೂ ಬ್ರಿಟಿಷರ ಕಾಲದ ಬೋಧನಾ ಪದ್ಧತಿಗಳಲ್ಲಿ ಬೋಧನೆ ಮತ್ತು ಕಲಿಕೆ ಹೇಗೆ ಕಾರ್ಯ ನಿರ್ವಹಿಸಲ್ಪಡುತ್ತಿದ್ದವು ಎಂಬುದನ್ನು ತಿಳಿಯಬೇಕಾಗಿದೆ.

**ವೇದಗಳ ಕಾಲದ ಬೋಧನಾ ಪದ್ಧತಿ**

ವೇದಗಳ ಕಾಲದಲ್ಲಿ ಶಿಕ್ಷಣ ಜ್ಞಾನವನ್ನು ಪಡೆಯುವ ಸಾಧನವೆಂದು ಪರಿಗಣಿಸಿದ್ದರು. ಅವರು "ಜ್ಞಾನವಿಲ್ಲದ ಮನುಷ್ಯ ಪ್ರಾಣಿಯಿದ್ದಂತೆ" ಎಂದು ಘೋಷಿಸಿದ್ದರು. ಜ್ಞಾನವೇ ಬೆಳಕು, ಅಜ್ಞಾನವೇ ಅಂಧಕಾರ ಎಂಬ ಕಲ್ಪನೆಯಿದ್ದು, ಶಿಕ್ಷಣ ವ್ಯಕ್ತಿಯನ್ನು ಅಂಧಕಾರದಿಂದ ಬೆಳಕಿನ ಕಡೆಗೆ, ಅಜ್ಞಾನದಿಂದ ಜ್ಞಾನದ ಕಡೆಗೆ ಕೊಂಡೊಯ್ಯುವ ಸಾಧನ ಎಂದು ನಂಬಿದ್ದರು. ಪ್ರಾಚೀನ ಕಾಲದಲ್ಲಿ ವೇದಗಳು ಮತ್ತು ಉಪನಿಷತ್ತುಗಳ ಮೂಲಕ ಶಿಕ್ಷಣ ನೀಡುವ ಪದ್ಧತಿ ಇತ್ತು. ಮೇಲ್ವರ್ಗದವರು ಮಾತ್ರ ಶಿಕ್ಷಣ ಪಡೆಯುತ್ತಿದ್ದರು. ಕೆಳವರ್ಗದವರನ್ನು ಕಡೆಗಣಿಸಲಾಗಿತ್ತು. ಅಂದು ಮೌಖಿಕ ಪದ್ಧತಿಯಿಂದ ಶಿಕ್ಷಣವನ್ನು ನೀಡಲಾಗುತ್ತಿತ್ತು. ಗುರುಕುಲ ಪದ್ಧತಿ ಪ್ರಚಲಿತದಲ್ಲಿತ್ತು. ಅಲ್ಲಿ ಯಾವುದೇ ಭಾಷಾ ಪಠ್ಯಗಳು ಇರಲಿಲ್ಲ. ವೇದಗಳು, ಪುರಾಣಗಳು, ಉಪನಿಷತ್ತುಗಳು, ಮಹಾಕಾವ್ಯಗಳನ್ನೇ ಅಧ್ಯಯನ ಮಾಡುತ್ತಿದ್ದರು. ಬೋಧನ ಕ್ರಮ ವಿದ್ಯಾರ್ಥಿಗಳ ಆಸಕ್ತಿ ಹಾಗೂ ಸಾಮಾರ್ಥ್ಯಕ್ಕನುಸಾರವಾಗಿ ಸಾಗುತ್ತಿತ್ತು. ಶ್ರವಣ, ಮನನ, ಧ್ಯಾನ ಈ ಮೂರು ಹಂತಗಳಲ್ಲಿ ಕಲಿಕೆ ನಡೆಯುತ್ತಿತ್ತು. ಹೀಗೆ ಶಿಕ್ಷಣದ ಸಾರ್ವತ್ರೀಕರಣವಾಗದೇ ಅಗತ್ಯತೆಗನುಗುಣವಾಗಿ ಕಲಿಕಾ ಪದ್ಧತಿ ಬೆಳೆದು ಬಂದಿದೆ.[೨]

**ಬೌದ್ಧರ ಕಾಲದ ಶಿಕ್ಷಣ**

ಬೌದ್ಧರ ಕಾಲದಲ್ಲಿ ಶಿಕ್ಷಣದ ಮುಖ್ಯ ಉದ್ದೇಶ ಬೌದ್ಧ ಧರ್ಮದ ಪ್ರಸಾರ ಮಾಡುವುದಾಗಿತ್ತು. ಬೌದ್ಧರ ಕಾಲದ ಶಿಕ್ಷಣ ಪದ್ಧತಿಯು ಎರಡು ಹಂತದಲ್ಲಿ ನಡೆಯುತ್ತಿತ್ತು. ಪ್ರಾಥಮಿಕ ಹಂತ, ಮತ್ತೊಂದು ಉನ್ನತ ಶಿಕ್ಷಣ ಹಂತ. ಬೌದ್ಧರ ಕಾಲದಲ್ಲಿ ಶಿಕ್ಷಣದ ಪಠ್ಯಕ್ರಮದ ರಚನೆ ಮೋಕ್ಷವನ್ನು ಪಡೆಯುವಂತಹ ಆದರ್ಶ ಗುರಿಯನ್ನು ಪೂರೈಸುವ ವಿಷಯಗಳಿಂದ ರಚಿಸಲ್ಪಟ್ಟಿತ್ತು.

ಬೌದ್ಧರ ಕಾಲದ ಬೋಧನಾ ಪದ್ಧತಿಯಲ್ಲಿ ಮೌಖಿಕ ಪದ್ಧತಿ, ಉಪನ್ಯಾಸ, ಚರ್ಚೆ ವಿಚಾರ, ಸಭೆ, ಪ್ರಾಯೋಗಿಕ ಹಾಗೂ ಪ್ರವಾಸ ಪದ್ಧತಿ ಆಧರಿಸಿ ಬೋಧನೆ ಸಾಗಿತ್ತು. ಇವರ ಕಾಲದಲ್ಲಿ ನಳಂದ, ತಕ್ಷಶಿಲಾ ವಿಶ್ವವಿದ್ಯಾಲಯಗಳು ಅಭಿವೃದ್ಧಿಗೊಂಡವು. ಸಾಮಾನ್ಯವಾಗಿ ಎಲ್ಲರಿಗೂ ಶಿಕ್ಷಣದ ಅವಕಾಶವನ್ನು ಕಲ್ಪಿಸಲಾಯಿತು. ಮೌಖಿಕ ರೀತಿಯ ಬೋಧನೆಗೆ ವಿಶೇಷ ಸ್ಥಾನವಿತ್ತು. ಬೋಧನಾ ಮಾಧ್ಯಮ ಪಾಲಿ ಭಾಷೆಯಲ್ಲಿತ್ತು. ಇಲ್ಲಿ ತತ್ವಶಾಸ್ತ್ರ, ತರ್ಕಶಾಸ್ತ್ರ, ವ್ಯಾಕರಣ, ಸಾಹಿತ್ಯದಂತಹ ವಿಷಯಗಳನ್ನು ಚರ್ಚೆ ಮತ್ತು ಉಪನ್ಯಾಸದ ಮಾದರಿಯಲ್ಲಿ ಬೋಧಿಸಲಾಗುತ್ತಿತ್ತು. ಬೌದ್ಧ ವಿದ್ಯಾಕೇಂದ್ರಗಳು ವಿಹಾರ ಮತ್ತು ಸಂಘಗಳಲ್ಲಿ ಶಿಕ್ಷಣದ ಪ್ರಸಾರ ಮಾಡುತ್ತಿದ್ದವು. ಪುರುಷರಂತೆ ಸ್ತ್ರೀಯರಿಗೂ ವೇದಾಂತ, ಆಯುರ್ವೇದ, ಸಾಹಿತ್ಯ ಕಲಿಯಲು ಅವಕಾಶವಿತ್ತು.

**ಮಧ್ಯಯುಗೀನ ಕಾಲದ ಶಿಕ್ಷಣ**

ಮುಸ್ಲಿಂ ಆಳ್ವಿಕೆಯ ಸಂದರ್ಭದಲ್ಲಿ ಹೊಸ ಮಾದರಿಯಲ್ಲಿ ಶಿಕ್ಷಣವನ್ನು ಪ್ರಸಾರ ಮಾಡತೊಡಗಿದರು. ಬೌದ್ಧ ಧರ್ಮ ಭಾರತದಲ್ಲಿ ಕ್ಷೀಣಿಸುತ್ತಾ ಬಂದಂತೆ ಮುಸ್ಲಿಂರ ಆಳ್ವಿಕೆ ಆರಂಭವಾಯಿತು. ಅವರ ಧರ್ಮಕ್ಕೆ ಅನುಗುಣವಾಗಿ ಹೊಸ ಶಿಕ್ಷಣ ವ್ಯವಸ್ಥೆಯನ್ನು ಪ್ರಾರಂಭಿಸಿದರು. ಇಸ್ಲಾಂ ತತ್ವಗಳು, ಸಿದ್ಧಾಂತಗಳು, ಕಾಯ್ದೆಗಳು ಮತ್ತು ಸಾಮಾಜಿಕ ಪದ್ಧತಿಗಳನ್ನು ಅಭಿವೃದ್ಧಿ ಪಡಿಸುವುದು ಹಾಗೂ ಪ್ರಚಾರವನ್ನು ಶಿಕ್ಷಣದ ಮೂಲಕ ಮಾಡುವುದು ಗುರಿಯಾಗಿತ್ತು. ಶಿಕ್ಷಣ ನೀಡಲು ಬೇರೆ ಬೇರೆ ಸಂಸ್ಥೆಗಳು ಇದ್ದವು. ಮಕ್ತಬ್ಸ್‌ಗಳು, ಮದರಸಾಗಳು, ಖಾನ್‌ಕಾಸ್, ದರ್ಗಾ, ಮಸೀದಿಗಳಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣವನ್ನು ನೀಡುತ್ತಿದ್ದರು. 'ಬಿಸ್ಮಿಲ್ಲಾ' ಎಂಬ ಧಾರ್ಮಿಕ ಕ್ರಿಯೆಯ ನಂತರ ಶಿಕ್ಷಣ ಪ್ರಾರಂಭವಾಗುತ್ತಿತ್ತು. ಖುರಾನಿನ ಪ್ರಾರ್ಥನೆಗಳನ್ನು ಬೋಧಿಸುತ್ತಿದ್ದರು. ಆರಂಭದ ಶಿಕ್ಷಣ ಓದುವುದು, ಬರೆಯುವುದು ಮತ್ತು ಅಂಕಗಣಿತಕ್ಕೆ ಸೀಮಿತವಾಗಿತ್ತು. ಉನ್ನತ ಶಿಕ್ಷಣದಲ್ಲಿ ವ್ಯಾಪಕವಾದ ನೀತಿಶಾಸ್ತ್ರ, ದೈವಿಕ, ಖಗೋಳಶಾಸ್ತ್ರ, ಬೀಜಗಣಿತ, ರೇಖಾಗಣಿತ, ಭೌತಶಾಸ್ತ್ರ, ವೈದ್ಯಕೀಯಶಾಸ್ತ್ರ, ಸಾಮಾನ್ಯ ತತ್ವಶಾಸ್ತ್ರ, ಸಾಹಿತ್ಯ, ಕಾನೂನುಶಾಸ್ತ್ರ, ಲೆಕ್ಕಶಾಸ್ತ್ರ, ಅರ್ಥಶಾಸ್ತ್ರ, ವ್ಯವಸಾಯ, ಇತಿಹಾಸ ಮುಂತಾದ ಉಪಯೋಗಗಳನ್ನು ಒಳಗೊಂಡಂತೆ ಬೋಧನೆ ನಡೆಯುತ್ತಿತ್ತು. ಸೈನಿಕ ಶಿಕ್ಷಣವನ್ನು ಪಡೆಯುವುದು ಕಡ್ಡಾಯವಾಗಿತ್ತು. ಮೌಖಿಕ ಪದ್ಧತಿಗೆ ಮಹತ್ವ ನೀಡಲಾಗಿತ್ತು. ಸಮೂಹ ಶಿಕ್ಷಣಕ್ಕಿಂತ ಏಕವ್ಯಕ್ತಿಗೆ ಪ್ರಧಾನ್ಯತೆ ಇತ್ತು. ನಿರಂತರ ಮೌಲ್ಯಮಾಪನ ವಿಧಾನವನ್ನು ಅನುಸರಿಸುತ್ತಿದ್ದರು. ಆದರೂ ಅದು ಸೀಮಿತವಾಗಿತ್ತು. ಜನಸಾಮಾನ್ಯರು ಅದರಿಂದ ವಂಚಿತರಾದರು. ಹೀಗೆ

ಬ್ರಿಟೀಷರು ಭಾರತಕ್ಕೆ ಬರುವುದಕ್ಕಿಂತ ಪೂರ್ವದಲ್ಲಿ ಶಿಕ್ಷಣ ಪದ್ಧತಿಯನ್ನು ಗಮನಿಸಬಹುದು.[೩]

**ಬ್ರಿಟೀಷ್ ಕಾಲದ ಬೋಧನಾ ಪದ್ಧತಿ**

ಬ್ರಿಟೀಷರು ಭಾರತಕ್ಕೆ ಬಂದದ್ದು ವ್ಯಾಪಾರದ ಉದ್ದೇಶದಿಂದ. ಇದಕ್ಕೆ ಪೂರಕವಾಗಿ ಇಲ್ಲಿನ ಜನರನ್ನು ತಮ್ಮ ಸೇವೆಗೆ ಬಳಸಿಕೊಳ್ಳುವ ಉದ್ದೇಶದಿಂದ ಜನರಿಗೆ ಶಿಕ್ಷಣ ನೀಡಲು ಮುಂದಾದರು ಎನಿಸಿದರೂ, ಅವರ ಕೆಲವು ನೀತಿಗಳು ಇದನ್ನು ಸ್ಪಷ್ಟಪಡಿಸುತ್ತವೆ. ಆ ಹಿನ್ನೆಲೆಯಲ್ಲಿ ಭಾರತೀಯ ಶಿಕ್ಷಣ ಪದ್ಧತಿಗಳು ಸಮಾಜದ ಮೇಲೆ ಪರಿಣಾಮ ಬೀರಲಿಲ್ಲ. ಬದಲಾಗಿ ಬ್ರಿಟೀಷರ ಆಧುನಿಕ ಶಿಕ್ಷಣ ಪದ್ಧತಿ ಆಡಳಿತದಲ್ಲಿ ಹೆಚ್ಚು ಪರಿಣಾಮ ಬೀರಿತು. ಲಾರ್ಡ್ ಮೆಕಾಲೆ ರೂಪಿಸಿದ ಔಪಚಾರಿಕ(ಫಾರ್ಮಲ್) ಶಿಕ್ಷಣ ವ್ಯವಸ್ಥೆ ಜಾರಿಗೆ ಬಂದ ನಂತರ ಭಾರತೀಯರಲ್ಲಿ ಸಾಮಾಜಿಕ ಬದಲಾವಣೆಗಳನ್ನು ಕಾಣಬಹುದಾಗಿದೆ. ಇಂಗ್ಲಿಷ್ ಕಲಿಕೆಯಿಂದ ಸಾಮಾನ್ಯ ಜನರ ಮೇಲೆ ಗಂಭೀರವಾದ ಬದಲಾವಣೆಯನ್ನು ತಂದಂತಾಗಿದೆ. ಈ ಶಿಕ್ಷಣ ನೀತಿ ಭಾರತದಲ್ಲಿ ಹೊಸ ಶಿಕ್ಷಣ ಪದ್ಧತಿಗೆ ಭದ್ರ ಬುನಾದಿಯನ್ನು ಹಾಕಿತು. ಮೆಕಾಲೆ ೧೮೩೫ರಲ್ಲಿ ಸಲ್ಲಿಸಿದ ವರದಿಯನ್ವಯ ಶಿಕ್ಷಣಕ್ಕೆ ಮೀಸಲಾದ ಹಣ ಕೇವಲ ಇಂಗ್ಲಿಷ್ ಭಾಷಾ ಮಾಧ್ಯಮದಲ್ಲಿರುವ ಶಿಕ್ಷಣಕ್ಕೆ ಮಾತ್ರ ಎಂದು ಬ್ರಿಟೀಷ್ ಸರ್ಕಾರ ಆದೇಶ ಹೊರಡಿಸಿತ್ತು. ಇಂಗ್ಲಿಷ್ ಭಾಷೆ ಆಧುನಿಕ ಜ್ಞಾನದ ಬೀಗದ ಕೈ ಇದ್ದಂತೆ. ಆದುದರಿಂದ ಅದನ್ನೇ ಮಾಧ್ಯಮವಾಗಿ ಬಳಸಬೇಕು ಎನ್ನುವುದು ಅವರ ನಿಲುವಾಗಿತ್ತು.

೧೮೫೪ರ ವುಡ್ಸ್ ವರದಿ ಹಲವು ಶಿಫಾರಸ್ಸುಗಳನ್ನು ನೀಡಿದೆ. ಭಾಷಾ ಬೋಧನೆಯನ್ನು ಕುರಿತು ಮಾತೃ ಭಾಷೆಯಲ್ಲಿ ಶಿಕ್ಷಣ ನೀಡಬೇಕು ಎಂದು ತಿಳಿಸಿದೆ. ೧೮೮೨ ಭಾರತೀಯ ಶಿಕ್ಷಣ ಆಯೋಗ (ಹಂಟರ್ ಆಯೋಗ), ೧೯೪೪ರ ಸಾರ್ಜೆಂಟ್ ವರದಿಗಳು ಪ್ರಾಥಮಿಕ ಶಿಕ್ಷಣದ ಜೊತೆಗೆ ಮಾಧ್ಯಮಿಕ ಶಿಕ್ಷಣವು ವಿದ್ಯಾರ್ಥಿಗಳ ಮಾತೃ ಭಾಷೆಯಲ್ಲಿ ನಡೆಯಬೇಕು ಎಂದು ಶಿಫಾರಸ್ಸು ಮಾಡಿದವು. ಇಂಗ್ಲಿಷ್ ಭಾಷೆ ಕಡ್ಡಾಯವಾಗಿ ದ್ವಿತೀಯ ಭಾಷೆಯಾಗಿ ಬೋಧಿಸಬೇಕು ಎಂದು ಶಿಕ್ಷಣ ಆಯೋಗಗಳು ಸ್ವಾತಂತ್ರ್ಯ ಪೂರ್ವದಲ್ಲಿ ದೇಶೀಯ ಭಾಷೆಗಳನ್ನು ಕಡೆಗಣಿಸಿ, ಬೋಧನಾ ಮಾಧ್ಯಮವಾಗಿ ಇಂಗ್ಲಿಷನ್ನು ಜಾರಿಗೆ ತಂದರು.

ಸ್ವಾತಂತ್ರ್ಯ ನಂತರದಲ್ಲಿ ಭಾರತದ ಶಿಕ್ಷಣ ಪದ್ಧತಿಯು ಬದಲಾವಣೆಯಾಯಿತು. ಸರ್ವೇಪಲ್ಲಿ ರಾಧಾಕೃಷ್ಣನ್ ಆಯೋಗ (೧೯೪೮), ಮಾಧ್ಯಮಿಕ ಶಿಕ್ಷಣ ಆಯೋಗ (೧೯೫೨) ಹಾಗೂ ಭಾರತೀಯ ಶಿಕ್ಷಣ (೧೯೬೪) ಆಯೋಗಗಳು ಹೊಸ ಶಿಕ್ಷಣ ನೀತಿಗಳನ್ನು ಜಾರಿಗೆ ತಂದವು. ಅವುಗಳಲ್ಲಿ ಪ್ರಮುಖವಾದುದು ತ್ರಿಭಾಷಾ ಸೂತ್ರದ

ಬೋಧನಾ ಪದ್ಧತಿ. ಈ ತ್ರಿಭಾಷಾ ಸೂತ್ರದ ಅನ್ವಯ ಮಗುವಿನ ಮಾತೃ ಭಾಷೆಯನ್ನೇ ಪ್ರಥಮ ಭಾಷೆಯನ್ನಾಗಿ ಬೋದಿಸಬೇಕು ಎಂಬುದನ್ನು ಕಡ್ಡಾಯಗೊಳಿಸಲಾಯಿತು.[೪]

ತ್ರಿಭಾಷಾ ಸೂತ್ರದ ಅನ್ವಯ ಕರ್ನಾಟಕದಲ್ಲಿ ಪ್ರಥಮ ಭಾಷೆ ಕನ್ನಡ, ದ್ವಿತೀಯ ಭಾಷೆ ಇಂಗ್ಲಿಷ್, ತೃತೀಯ ಭಾಷೆಯಾಗಿ ಹಿಂದಿಯನ್ನು ಜಾರಿಗೆ ತಂದರು. ಈ ನಿಟ್ಟಿನಲ್ಲಿ ಕನ್ನಡ ಭಾಷಾ ಪಠ್ಯ ಪುಸ್ತಕಗಳು ರಚನೆಗೊಂಡವು. ಪಾಶ್ಚಾತ್ಯ ಬೋಧನಾ ಪದ್ಧತಿಯನ್ನು ಅಳವಡಿಸಿಕೊಳ್ಳುವಲ್ಲಿ ಪ್ರಾದೇಶಿಕ ಭಿನ್ನತೆಗೆ ಕಾರಣವಾಯಿತು. ಆದ್ದರಿಂದ ವಿಭಿನ್ನ ಭಾಷಾ ಬೋಧನಾ ಮಾಧ್ಯಮಗಳನ್ನು ಅಳವಡಿಸಿಕೊಳ್ಳಲಾಯಿತು. ಕರ್ನಾಟಕದಲ್ಲಿ ಪ್ರಾದೇಶಿಕ ಭಾಷಾ ಭಿನ್ನತೆಯಿರುವುದರಿಂದ, ಬಹು ಭಾಷಿಕ ಪರಿಸರದಲ್ಲಿ ಮಗುವಿಗೆ ಯಾವ ಭಾಷೆಯಲ್ಲಿ ಶಿಕ್ಷಣ ನೀಡಬೇಕು ಎಂದು ನಿರ್ಧಾರ ಮಾಡುವಲ್ಲಿ ಶಿಕ್ಷಣ ತಜ್ಞರು ಮಾತೃ ಭಾಷಾ ಪ್ರಧಾನ ಹಾಗೂ ಪ್ರಾದೇಶಿಕ ಭಾಷೆಗನುಗುಣವಾಗಿ ಬೋಧಿಸಬೇಕೆಂದು ಶಿಫಾರಸ್ಸು ಮಾಡಿದರು.

ಹೀಗೆ ಬೋಧನೆ, ಕಲಿಕೆ ಮತ್ತು ಮಾಧ್ಯಮದ ಕುರಿತಾದ ಚರ್ಚೆಗಳ ಹಿನ್ನೆಲೆಯಲ್ಲಿ ಆಂಗ್ಲ ಮಾಧ್ಯಮ ಹಾಗೂ ಆಂಗ್ಲ ಮಾಧ್ಯಮ ಶಾಲೆಗಳ ಶಿಕ್ಷಣ ವ್ಯವಸ್ಥೆಯು ಸಮಕಾಲೀನ ಸಂದರ್ಭದಲ್ಲಿ ತನ್ನ ವ್ಯಾಪಕತೆಯನ್ನು ಪಡೆದಿದೆ. ಕನ್ನಡ ಭಾಷೆಯನ್ನು ಕಲಿಸುವ ಮತ್ತು ಕಲಿಯುವ ಸಂದರ್ಭದಲ್ಲಿ ಬೋಧನೆ, ಕಲಿಕಾ ಸ್ವರೂಪದಲ್ಲಿ ಹಲವಾರು ಸಮಸ್ಯೆಗಳಿರುವುದು ಸವಾಲಾಗಿ ಪರಿಣಮಿಸುತ್ತಿದೆ. ಕಾಲದಿಂದ ಕಾಲಕ್ಕೆ ಬೋಧನಾ ಪದ್ಧತಿ ಬದಲಾವಣೆ ಹೊಂದುತ್ತಾ ಬಂದಿದ್ದರೂ ಸಹ ಮಾಧ್ಯಮದ ಕುರಿತಾದ ಹಲವಾರು ಪ್ರಶ್ನೆಗಳು ತಲೆಯೆತ್ತುತ್ತಲೆ ಇವೆ.

“ದ್ವಿತೀಯ ಭಾಷಾ ಕಲಿಕೆ”ಯನ್ನು ರಾಬರ್ಟ್ ಲ್ಯಾಡೊ (೧೯೬೪) ಎಂಬುವವರು ಈ ರೀತಿಯಾಗಿ ವ್ಯಾಖ್ಯಾನಿಸುತ್ತಾರೆ. ಮೂಲಭೂತವಾಗಿ ಒಂದು ಸಾಮಾನ್ಯ ಶಬ್ದಕೋಶದಲ್ಲಿ ಈ ರೀತಿಯಾಗಿ ಅದರ ರಚನೆಗಳನ್ನು ಬಳಸುವ ಸಾಮರ್ಥ್ಯ, ಸಾಮಾನ್ಯ ಭಾಷಿಕರ, ಸಾಮಾನ್ಯ ಸಂವಹನ ಸ್ಥಿತಿ, ಸಂವಾದಾತ್ಮಕ ವೇಗ ಇವೆಲ್ಲವನ್ನು ನಿರ್ದಿಷ್ಟವಾಗಿ ಹೇಳುವುದಾದರೆ, ಅದರ ಅರ್ಥವನ್ನು ಸ್ವಾಧೀನಪಡಿಸಿಕೊಳ್ಳುವುದು ಎಂದರ್ಥ”. ಯಾವಾಗ ವಿಷಯದ ಮಾದರಿಗಳು ಮತ್ತು ಈ ಮಾದರಿಗಳನ್ನು ಮಾತನಾಡುವಲ್ಲಿ ಬಳಸುವ ಸಾಮರ್ಥ್ಯ ಎರಡನೆಯ ಭಾಷೆ ಕೇಳುವುದೋ ಆಗ ಅಭಿವ್ಯಕ್ತಿಯು ಕಲಿಕೆಯ ಅರ್ಥವಾಗುತ್ತದೆ. ವಿಷಯ ಮತ್ತು ಅಭಿವ್ಯಕ್ತಿಯ ಸಂಯೋಜನೆಯಾಗುತ್ತದೆ ಎಂದು

ವಿವರಿಸಿದ್ದಾರೆ. ವಿಷಯವು ಪದ್ಧತಿಯಲ್ಲಿ ಭಾಷೆಗಳನ್ನು ಸರಿಯಾದ ರೀತಿಯಲ್ಲಿ ಬಳಸುವುದಾಗಿದೆ ಎಂದು ವಿವರಿಸಿದ್ದಾರೆ."

ಜಾಗತೀಕರಣದ ಸಂದರ್ಭದಲ್ಲಿ ಭಾರತದಲ್ಲಿ ಇಂಗ್ಲಿಷ್ ಭಾಷಾ ಬೋಧನೆಯು ಹೊಸ ಪ್ರಮಾಣವನ್ನು ತಲುಪಿದೆ. ಇದನ್ನು ನಿರ್ದಿಷ್ಟ ಪಡಿಸುವ ಅವಶ್ಯಕತೆಯಿದೆ. ಕಲಿಯುವಿಕೆಯ ವಿಷಯದಲ್ಲಿ ಹೆಚ್ಚು ನಿಖರವಾಗಿ ಮಾತೃ ಭಾಷೆ ಅಥವಾ ಪ್ರಾದೇಶಿಕ ಭಾಷೆಯನ್ನು ಕಲಿಯಬೇಕಾಗಿದೆ. ಇಂಗ್ಲಿಷ್ ಕಲಿಕೆಯಲ್ಲಿ ವ್ಯಾಕರಣಾಂಶಗಳಿಗೆ ಹೆಚ್ಚಿನ ಒತ್ತು ನೀಡಲಾಗುತ್ತದೆ. ಆದರೆ ಮಾತೃಭಾಷೆಯ ವಿಷಯಕ್ಕೆ ಬಂದಾಗ ವ್ಯಾಕರಣಾಂಶಗಳಿಗೆ ಒತ್ತು ನೀಡದಿರುವುದು ಕಂಡು ಬರುತ್ತದೆ. ಔಪಚಾರಿಕ ವ್ಯಾಕರಣವು ಇಂಗ್ಲಿಷ್‌ನಲ್ಲಿ ಇರುವಂತೆ ಮಾತೃಭಾಷೆಯಲ್ಲಿ ಇರುವುದಿಲ್ಲ. ಆದ್ದರಿಂದ ದ್ವಿತೀಯ, ಭಾಷೆಯಾಗಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಬಗ್ಗೆ ಹೆಚ್ಚು ಗಮನ ಹರಿಸಬೇಕಾಗಿದೆ. ನಮ್ಮ ಸಮಾಜ, ಪ್ರಪಂಚದಾದ್ಯಂತ ವಿವಿಧ ಹಂತಗಳಲ್ಲಿ ಶಿಕ್ಷಣ ಪಡೆಯುತ್ತಿರುವ ವಿದ್ಯಾರ್ಥಿಗಳು ಇಂಗ್ಲಿಷ್ ಕಲಿಯುತ್ತಿದ್ದಾರೆ. ಇಂಗ್ಲಿಷ್‌ಗೆ ಹೆಚ್ಚಿನ ದೇಶಗಳಲ್ಲಿ ಎಲ್ಲಾ ವಿದ್ಯಾರ್ಥಿಗಳು, ವಿದ್ವಾಂಸರು ಒಂದು ಅನನ್ಯ ಸ್ಥಾನವನ್ನು ನೀಡಿದ್ದಾರೆ. ಅವರು ಉತ್ತಮ ವೃತ್ತಿ ಅಥವಾ ಉನ್ನತ ಶಿಕ್ಷಣವನ್ನು ಹೊಂದಿದ್ದರೆ ಅದು ಇಂಗ್ಲಿಷ್ ಶಿಕ್ಷಣದಿಂದ ಎಂಬ ಭ್ರಮೆಯಲ್ಲಿದ್ದಾರೆ. ಹಾಗಾಗಿ ಅವರು ಇಂಗ್ಲಿಷ್ ಕಲಿಕೆಯ ವ್ಯಾಮೋಹಕ್ಕೆ ಒಳಗಾಗಿದ್ದಾರೆ. ಈ ನಿಟ್ಟಿನಲ್ಲಿ ಪ್ರಸ್ತುತ ಆಂಗ್ಲ ಮಾಧ್ಯಮದ ಶಾಲೆಗಳಲ್ಲಿ ಪ್ರಾದೇಶಿಕ ಭಾಷೆಯಾದ ಕನ್ನಡವನ್ನು ಯಾವ ರೀತಿ ಕಲಿಸುತ್ತಿದ್ದಾರೆ ಮತ್ತು ಕನ್ನಡ ಕಲಿಕೆಯಲ್ಲಿ ಹಿಂದುಳಿಯಲು ಕಾರಣಗಳೇನು? ಎಂಬುದನ್ನು ಅಧ್ಯಯನ ಮಾಡಲಾಗಿದೆ.

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷೆಯ ಕಲಿಕೆ ಮತ್ತು ಬೋಧನೆಯ ಮೇಲೆ ಇಂಗ್ಲಿಷ್ ಮಾಧ್ಯಮದ ಪ್ರಭಾವ ಕುರಿತು ಶೈಕ್ಷಣಿಕ ವಲಯ, ರಾಜಕೀಯ ವಲಯ ಹಾಗೂ ಜನಸಾಮಾನ್ಯರಲ್ಲಿ ಈ ಅಂಶವು ದಿನನಿತ್ಯ ಚರ್ಚೆಗೊಳಗಾಗುತ್ತಿರುವುದರ ಹಿನ್ನೆಲೆಯಲ್ಲಿ "ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ: ಭಾಷಿಕ ಅಧ್ಯಯನ" (ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ), ಅದರಲ್ಲೂ ಮುಖ್ಯವಾಗಿ ಹಿರಿಯ ಪ್ರಾಥಮಿಕ ಶಾಲೆಗಳನ್ನೊಳಗೊಂಡಂತೆ ಎನ್ನುವ ವಿಷಯವನ್ನು ಪ್ರಸ್ತುತ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ.

## ೧.೨ ಅಧ್ಯಯನದ ಉದ್ದೇಶ

ವ್ಯಕ್ತಿ ಯಾವುದೇ ಒಂದು ಕಾರ್ಯವನ್ನು ಕೈಗೊಳ್ಳಬೇಕಾದರೆ ಒಂದು ಉದ್ದೇಶವಿರುವಂತೆ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲು ಹಲವು ಉದ್ದೇಶಗಳು ಕಾರಣವಾಗಿವೆ. ಕರ್ನಾಟಕದ ಭೌಗೋಳಿಕತೆಯನ್ನು ಗಮನಿಸಿದಾಗ ಕನ್ನಡದಲ್ಲಿ ಪ್ರಾದೇಶಿಕವಾಗಿ ಹಲವಾರು ಭಾಷಿಕ ಪ್ರಭೇಧಗಳಿರುವುದನ್ನು ಗಮನಿಸಬಹುದಾಗಿದೆ. ಮೈಸೂರು ಕನ್ನಡ, ಧಾರವಾಡ ಕನ್ನಡ, ಮಂಗಳೂರು ಕನ್ನಡ, ಗುಲಬರ್ಗಾ ಕನ್ನಡ ಎಂದು ಗುಂಪುಗಳಾಗಿ ವಿಂಗಡಿಸಲಾಗಿದೆ. ಹೀಗೆ ವಿಂಗಡಿಸಲಾದ ಕನ್ನಡದಲ್ಲಿ ಪ್ರಾದೇಶಿಕವಾದ ಭಾಷೆಯ ಭಿನ್ನತೆಯನ್ನು ಕಾಣುತ್ತೇವೆ. ಕರ್ನಾಟಕದ ಗಡಿ ಭಾಗಗಳಲ್ಲಿ ವಾಸಿಸುವ ಕನ್ನಡಿಗರು, ಕನ್ನಡ ಭಾಷೆಯ ಜೊತೆಗೆ ಬೇರೊಂದು ಭಾಷೆಯನ್ನು ಬಲ್ಲವರಾಗಿರುತ್ತಾರೆ. ಇವರನ್ನು ದ್ವಿಭಾಷಿಕರು ಎಂದು ಕರೆಯುತ್ತೇವೆ. ಇಂತಹ ಭಾಷಿಕ ಹಿನ್ನಲೆಯುಳ್ಳ ಕರ್ನಾಟಕದಲ್ಲಿ ಸಮಕಾಲೀನ ಸಂದರ್ಭದಲ್ಲಿ ಆಂಗ್ಲ ಮಾಧ್ಯಮವು ಶಿಕ್ಷಣದ ಪ್ರಸಾರ ಕಾರ್ಯ ಮಾಡುತ್ತಿದೆ. ದ್ವಿಭಾಷಿಕ ಅಥವಾ ಏಕ ಭಾಷಿಕ ಹಿನ್ನೆಲೆಯಿಂದ ಬಂದ ವಿದ್ಯಾರ್ಥಿಗಳು ಆಂಗ್ಲ ಮಾಧ್ಯಮದಲ್ಲೇ ಕಲಿಯುವ ಸಂದರ್ಭದಲ್ಲಿ ಕನ್ನಡವನ್ನು ದ್ವಿತೀಯ ಹಾಗೂ ತೃತೀಯ ಭಾಷೆಯಾಗಿ ಕಲಿಯುತ್ತಿದ್ದಾರೆ. ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಆಂಗ್ಲ ಮಾಧ್ಯಮದ ಮೂಲಕ ಶಿಕ್ಷಣ ಪಡೆಯುತ್ತಿರುವ ಮಕ್ಕಳ ಮನೆ ಮಾತು ಕನ್ನಡ, ತೆಲುಗು, ತಮಿಳು, ಉರ್ದು, ಲಂಬಾಣಿ, ಕೊರವ, ಮಲಯಾಳಂ, ಹಿಂದಿ, ಮರಾಠಿ ಭಾಷೆಯಾಗಿರುತ್ತದೆ. ಇಲ್ಲಿ ಕನ್ನಡ ಮಾತೃ ಭಾಷೆಯುಳ್ಳ ವಿದ್ಯಾರ್ಥಿಗಳು ಮಾತ್ರ ವಿದ್ಯಾಭ್ಯಾಸ ಮಾಡುತ್ತಾರೆ ಎಂದು ನಿಖರವಾಗಿ ಹೇಳುವಂತಿಲ್ಲ. ಏಕೆಂದರೆ ಬಳ್ಳಾರಿ ನಗರವು ಪ್ರಾದೇಶಿಕ ಭಾಷಾ ಭಿನ್ನತೆಯನ್ನು ಒಳಗೊಂಡಿದೆ.

ಶಾಲೆಗಳಲ್ಲಿ ವಿಭಿನ್ನ ರೀತಿಯ ಮಾತೃ ಭಾಷೆಯ ವಿದ್ಯಾರ್ಥಿಗಳನ್ನು ಕಾಣಬಹುದು. ಆದ್ದರಿಂದ ಆ ಮಕ್ಕಳು ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯುವಾಗ ಎದುರಿಸುತ್ತಿರುವ ಸಮಸ್ಯೆಗಳಿಗೆ ಕಾರಣಗಳೇನು? ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ವಿಭಿನ್ನ ಮಾತೃ ಭಾಷೆಯನ್ನು ಹೊಂದಿರುವ ವಿದ್ಯಾರ್ಥಿಗಳ ಬರೆವಣಿಗೆ ಮತ್ತು ಓದುವುದರ ಬಗ್ಗೆ ಇರುವ ಸಮಸ್ಯೆಗಳನ್ನು ಪತ್ತೆ ಹಚ್ಚಿ ಅವುಗಳಿಗೆ ಪರಿಹಾರವನ್ನು ಕಂಡುಕೊಳ್ಳುವುದು. ಆಂಗ್ಲ ಮಾಧ್ಯಮ ಶಾಲೆಯಲ್ಲಿ ಕನ್ನಡ ಕಲಿಯುವ ಮತ್ತು ಕಲಿಸುವ ಸಂದರ್ಭದಲ್ಲಿ ಇಂಗ್ಲಿಷ್ ಭಾಷೆ ತೊಡಕನ್ನುಂಟು ಮಾಡುತ್ತಿದೆ ಎನ್ನುವ ಮನೋಭಾವವನ್ನು ಶೈಕ್ಷಣಿಕ, ರಾಜಕೀಯ ಹಾಗೂ ಪೋಷಕರ ವಲಯದಲ್ಲಿ ಕಾಣಬಹುದಾಗಿದೆ. ಆಂಗ್ಲ ಮಾಧ್ಯಮವು

ಕನ್ನಡ ಕಲಿಕೆಗೆ ಪೂರಕವಾಗಿದೆಯೋ ಅಥವಾ ಮಾರಕವಾಗಿದೆಯೋ? ಎನ್ನುವುದನ್ನು ಅಧ್ಯಯನ ಮಾಡಲಾಗಿದೆ.

ಬೋಧನೆಯು ಒಂದು ಕಲೆಯಾಗಿದ್ದು, ಉದ್ದೇಶಪೂರ್ವಕ, ಪ್ರಜ್ಞಾಪೂರ್ವಕ ಹಾಗೂ ಮನೋವೈಜ್ಞಾನಿಕ ಕ್ರಿಯೆಯಾಗಿದೆ. ಕಲಿಕೆಯು ಮಾನವನ ಹುಟ್ಟಿನಿಂದ ನಿರಂತರವಾಗಿ ಸಾಗುವ ಪ್ರಕ್ರಿಯೆಯಾಗಿದೆ. ಕಲಿಕೆಯು ಅನುಕರಣೆಯ ಕ್ರಿಯೆಯಾಗಿದ್ದು, ಶಿಕ್ಷಣದ ಅವಿಭಾಜ್ಯ ಅಂಗವಾಗಿದೆ. ಸ್ವಾತಂತ್ರ್ಯ ಪೂರ್ವದಿಂದ ಸ್ವಾತಂತ್ರ್ಯ ನಂತರ ಕಾಲದ ಬೋಧನೆ ಮತ್ತು ಕಲಿಕೆಯ ಚಾರಿತ್ರಿಕ ಮಹತ್ವವನ್ನು ತಿಳಿಯುವುದು ಅಧ್ಯಯನದ ಉದ್ದೇಶವಾಗಿದೆ.

ವಿದ್ಯಾರ್ಥಿಗಳ ಮನೆಮಾತು ಮತ್ತು ಪರಿಸರ ಭಾಷೆ ಕನ್ನಡವಾದರೂ ಕೂಡ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯನ್ನಾಗಿ ಕಲಿಯುತ್ತಿರುವ ಸಂದರ್ಭದಲ್ಲಿ ಎದುರಿಸುತ್ತಿರುವ ಸಮಸ್ಯೆಗಳಿಗೆ ಕಾರಣಗಳೇನು? ಎಂಬುದನ್ನು ಪರಿಶೀಲಿಸುವ ಅಗತ್ಯವಿದೆ. ಕನ್ನಡೇತರ ಮನೆ ಮಾತು ಹೊಂದಿರುವ ತೆಲುಗು, ಉರ್ದು ಮತ್ತು ತಮಿಳು ಭಾಷೆಯನ್ನಾಡುವ ವಿದ್ಯಾರ್ಥಿಗಳ ಕಲಿಕಾ ಸಮಸ್ಯೆಗಳಿಗೆ ಕಾರಣಗಳನ್ನು ಕಂಡುಕೊಳ್ಳುವುದು. ದ್ವಿತೀಯ ಭಾಷೆಯಾಗಿ ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ಕಲಿಯುವಾಗ ಸ್ವರ, ವ್ಯಂಜನ, ಗುಣಿತಾಕ್ಷರ, ಒತ್ತಕ್ಷರಗಳು, ಪದ ಹಾಗೂ ವಾಕ್ಯ ರಚನೆಯಲ್ಲಿ ಯಾವ ರೀತಿಯಾಗಿ ದೋಷಗಳನ್ನು ಮಾಡುತ್ತಿದ್ದಾರೆ? ಓದುವಾಗ ಮತ್ತು ಬರೆಯುವಾಗ ಉಂಟಾಗುವ ತೊಂದರೆಗಳೇನು? ಎಂಬುದನ್ನು ಗುರುತಿಸುವುದು ಪ್ರಮುಖ ಉದ್ದೇಶವಾಗಿದೆ.

ಕನ್ನಡ ಭಾಷಾ ಬೋಧಕರು ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಬೋಧಿಸುವ ಸಂದರ್ಭದಲ್ಲಿ ಅವರ ಬೋಧನ ಸಾಮರ್ಥ್ಯವನ್ನು ಗಮನಿಸುವುದು ಹಾಗೂ ಅವರು ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು ಮುಖ್ಯ. ಬೋಧನಾ ಕಲಿಕಾ ಪ್ರಕ್ರಿಯೆಯಲ್ಲಿ ಬೋಧಕರ ಪಾತ್ರ ಪ್ರಧಾನವಾಗಿದ್ದು, ಶಿಕ್ಷಕರ ಸಾಮಾಜಿಕ, ಆರ್ಥಿಕ ಮತ್ತು ಭಾಷಿಕ ಸಮಸ್ಯೆಗಳನ್ನು ಬೋಧನಾ ವಿಧಾನ, ಪಠ್ಯಕ್ರಮ ಮೌಲ್ಯಮಾಪನದಲ್ಲಿ ಅವರು ಎದುರಿಸುತ್ತಿರುವ ಸಮಸ್ಯೆಗಳಿಗೆ ಕಾರಣಗಳೇನು? ಎಂಬುದನ್ನು ಅಧ್ಯಯನ ಮಾಡುವುದು.

ಕನ್ನಡ ಭಾಷಾ ಪಠ್ಯಪುಸ್ತಕಗಳು ೨೦೦೫ರ ರಾಷ್ಟ್ರೀಯ ಪಠ್ಯಕ್ರಮದ ಚೌಕಟ್ಟಿನಲ್ಲಿ ರಚನೆಯಾಗಿವೆ. ಈ ಪಠ್ಯಕ್ರಮವನ್ನು ಪ್ರಾದೇಶಿಕ ಸಮತೋಲನ ಕಾಪಾಡುವ ನಿಟ್ಟಿನಲ್ಲಿ

ರಚಿಸಲಾಗಿದೆ. ಆದರೂ ದ್ವಿತೀಯ ಭಾಷೆಯನ್ನಾಗಿ ಕನ್ನಡವನ್ನು ಕಲಿಯುವ ಸಂದರ್ಭದಲ್ಲಿ ಕೆಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬೋಧನೆ ಮತ್ತು ಪಠ್ಯಕ್ರಮ ಒಂದು ಅವಿನಾಭಾವ ಸಂಬಂಧವನ್ನು ಹೊಂದಿರುತ್ತವೆ. ಪ್ರಥಮ ಭಾಷೆ ಮತ್ತು ದ್ವಿತೀಯ ಭಾಷೆಯನ್ನು ಬೋಧಿಸಲು ರಚಿಸುತ್ತಿರುವ ಪಠ್ಯ ಪುಸ್ತಕಗಳ ಸ್ವರೂಪ ಮತ್ತು ಅವುಗಳ ಬಳಕೆ ಕುರಿತಾಗಿ ಅಧ್ಯಯನ ಮಾಡುವುದು ಅಗತ್ಯವಿದೆ.

ಪ್ರಥಮ ಭಾಷೆ ಕನ್ನಡ ಮತ್ತು ದ್ವಿತೀಯ ಭಾಷೆ ಕನ್ನಡ ಬೋಧಿಸಲು ಬಳಸುವ ವಿಧಾನಗಳು ಕನ್ನಡ ಕಲಿಕೆಗೆ ಸಮಸ್ಯೆಯಾಗುತ್ತಿವೆ. ಪ್ರಾಥಮಿಕ ಹಂತದಲ್ಲಿ ಮಕ್ಕಳ ಬರವಣಿಗೆಯ ಅಲ್ಪಸ್ವಲ್ಪ ಬರವಣಿಗೆಯನ್ನು ಕಲಿತಿರುತ್ತಾರೆ. ಹಿರಿಯ ಪ್ರಾಥಮಿಕ ಹಂತಕ್ಕೆ ಬಂದ ನಂತರದಲ್ಲಿ ಕನ್ನಡವನ್ನು ಸ್ಪಷ್ಟವಾಗಿ ಓದುವುದು ಮತ್ತು ಬರೆಯುವುದನ್ನು ಕಲಿಯುತ್ತಾರೆ. ಆದರೆ ಇಲ್ಲಿ ಆಂಗ್ಲ ಮಾಧ್ಯಮದ ತೊಡಕು ಉಂಟಾಗುತ್ತದೆ. ಕಾರಣ ಬರವಣಿಗೆಯ ದೋಷಗಳನ್ನು ನಿವಾರಿಸುವುದರ ಕುರಿತು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ವಿದ್ಯಾರ್ಥಿ ಮತ್ತು ಶಿಕ್ಷಕರ ನಡುವಿನ ಮಾಧ್ಯಮವಾಗಿ ಕಾರ್ಯನಿರ್ವಹಿಸುತ್ತಿರುವ ಕನ್ನಡ ಭಾಷಾ ಪಠ್ಯಗಳಾದ ತಿಳಿ ಕನ್ನಡ, ೫, ೬, ಮತ್ತು ೭ನೇ ತರಗತಿಯ ಪಠ್ಯಗಳನ್ನು ಇಡಿಯಾಗಿ ಅಧ್ಯಯನ ಮಾಡುವುದರ ಮೂಲಕ, ಅವುಗಳ ಭಾಷಿಕ ಅಂಶಗಳನ್ನು ವಿಶ್ಲೇಷಣೆಗೆ ಒಳಪಡಿಸುವುದು.

ವಿದ್ಯಾರ್ಥಿಗಳು ಪರಿಸರದ ಭಾಷೆ, ಆಂಗ್ಲ ಮಾಧ್ಯಮ ಮತ್ತು ಪಠ್ಯದ ಭಾಷೆಯ ನಡುವಿನ ವ್ಯತ್ಯಾಸವನ್ನು ಗಮನಿಸದೆ ಕಲಿಯುತ್ತಿರುವುದರಿಂದ ಅಥವಾ ಬೋಧಕರು ಅವುಗಳ ನಡುವಿನ ವ್ಯತ್ಯಾಸಗಳನ್ನು ಗಮನಿಸಿ ಬೋಧಿಸದೇ ಇರುವಾಗ ವಿದ್ಯಾರ್ಥಿಗಳು ಅಲ್ಪಪ್ರಾಣ, ಮಹಾಪ್ರಾಣ, ದ್ವಿತ್ವಾಕ್ಷರ, ಅರ್ಕಾವತ್ತು ಮತ್ತು ಲ, ಶ, ಷ, ಸ, ಳ, ಮೊದಲಾದ ಅಂಶಗಳನ್ನು ಬರೆಯುವಾಗ ಮತ್ತು ಓದುವಾಗ ಸಮಸ್ಯೆ ಎದುರಿಸುತ್ತಿದ್ದಾರೆ. ಈ ಎಲ್ಲಾ ಸಮಸ್ಯೆಗಳಿಗೆ ಕಾರಣಗಳೇನು? ಎಂಬುದನ್ನು ಗಮನಿಸಬೇಕಾಗಿದೆ. ಯಾವ ಮಾದರಿಯಲ್ಲಿ ಬೋಧಿಸುತ್ತಿದ್ದಾರೆ? ಬೋಧನಾ ವಿಧಾನಗಳು ಹೇಗಿವೆ? ತರಬೇತಿ ಹಿನ್ನೆಲೆಯಲ್ಲಿ ಇಲಾಖೆ ನೀಡುತ್ತಿರುವ ವಿಧಾನಗಳನ್ನು ಅಳವಡಿಸಿಕೊಂಡಿದ್ದಾರೆಯೇ ಎಂಬುದನ್ನು ವಿಶ್ಲೇಷಣೆಗೆ ಒಳಪಡಿಸುವುದು. ಪರೀಕ್ಷಾ ವಿಧಾನಗಳು, ಮೌಲ್ಯಮಾಪನ ಏಕರೂಪವಾಗಿದೆಯೇ? ಎಂಬುದನ್ನು ಗಮನಿಸಲಾಗಿದೆ.

ಕನ್ನಡವನ್ನು ದ್ವಿತೀಯ ಭಾಷೆಯಾಗಿ ಓದುವಾಗ ಮತ್ತು ಬರೆಯುವಾಗ ಆಂಗ್ಲ ಮಾಧ್ಯಮ ತೊಡಕನ್ನುಂಟು ಮಾಡುತ್ತಿದೆಯೇ? ಎಂಬ ಅಂಶವನ್ನು ವಿಶ್ಲೇಷಿಸಲಾಗಿದೆ.

ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಆಂಗ್ಲ ಮಾಧ್ಯಮದಲ್ಲಿ ಕಲಿಯುವ ವಿದ್ಯಾರ್ಥಿಗಳ ಕನ್ನಡ ಕಲಿಕೆ ಮತ್ತು ಬೋಧಿಸುವ ಶಿಕ್ಷಕರ ಬೋಧನಾ ವಿಧಾನ, ಪಾಲಕರ ಆಂಗ್ಲ ಮಾಧ್ಯಮ ವ್ಯಾಮೋಹ, ಮಾಧ್ಯಮದ ಪ್ರಭಾವ ಕನ್ನಡ ಕಲಿಕೆಗೆ ಸಮಸ್ಯೆ ಆಗಿದೆಯೇ? ಇಲ್ಲವೋ? ಎಂದು ಚರ್ಚಿಸಿ, ವಿಶ್ಲೇಷಿಸುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

**೧.೩ ಅಧ್ಯಯನದ ವ್ಯಾಪ್ತಿ**

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ : ಭಾಷಿಕ ಅಧ್ಯಯನ (ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯಡಿಯಲ್ಲಿ ಹಿರಿಯ ಪ್ರಾಥಮಿಕ ಶಾಲೆಗಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನವನ್ನು ಕೈಗೊಳ್ಳಲಾಗಿದೆ. ಪ್ರಸ್ತುತ ಅಧ್ಯಯನವು ಕ್ಷೇತ್ರಕಾರ್ಯದ ಅಧ್ಯಯನವಾಗಿದೆ. ಬಳ್ಳಾರಿ ನಗರ ಪ್ರದೇಶದಲ್ಲಿರುವ ಆಂಗ್ಲ ಮಾಧ್ಯಮದ ೨೫ ಹಿರಿಯ ಪ್ರಾಥಮಿಕ ಶಾಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಇದಕ್ಕೆ ಪ್ರಮುಖ ಕಾರಣವೇನೆಂದರೆ ಬಳ್ಳಾರಿ ಪ್ರದೇಶವು ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿದ್ದು ಇಲ್ಲಿ ಆಂಗ್ಲ ಮಾಧ್ಯಮದ ಕ್ರಿಶ್ಚಿಯನ್ ಮಿಶನರಿ ಶಾಲೆಗಳ ಪ್ರಭಾವ ಹೆಚ್ಚಾಗಿರುವುದನ್ನು ಗಮನಿಸಬಹುದು. ಇತ್ತೀಚಿನ ದಿನಗಳಲ್ಲಿ ಆಂಗ್ಲ ಮಾಧ್ಯಮದ ಶಾಲೆಗಳ ಸಂಖ್ಯೆ ಹೆಚ್ಚುತ್ತಿರುವುದು ಒಂದು ಕಾರಣವಾಗಿದೆ. ಆದ್ದರಿಂದ ಬಳ್ಳಾರಿ ನಗರ ಪ್ರದೇಶವನ್ನು ಅಧ್ಯಯನಕ್ಕಾಗಿ ಗುರುತಿಸಿಕೊಳ್ಳಲಾಗಿದೆ. ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಈಗಾಗಲೇ ಭಾಷಾ ಬೋಧನೆ ಮತ್ತು ಕಲಿಕೆ ಕುರಿತಂತೆ ಕೆಲವು ಅಧ್ಯಯನಗಳು ನಡೆದಿದ್ದು, ಅವುಗಳಲ್ಲಿ ಮುಖ್ಯವಾಗಿ ಲಂಬಾಣಿ ಮಕ್ಕಳನ್ನು ಅನುಲಕ್ಷಿಸಿ, ಉರ್ದು ಭಾಷಿಕ ಮಕ್ಕಳ ಕನ್ನಡ ಕಲಿಕೆ ಹೀಗೆ ಪ್ರಥಮ ಭಾಷೆ ಕನ್ನಡ ಕಲಿಕೆ ಮತ್ತು ಬೋಧನೆ ಕುರಿತಂತೆ ಅಧ್ಯಯನಗಳು ನಡೆದಿವೆ. ಪ್ರಸ್ತುತ ಅಧ್ಯಯನದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ಕಲಿಕಾರ್ಥಿಗಳು ಹಾಗೂ ಬೋಧಿಸುವ ಶಿಕ್ಷಕರನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ನಿಟ್ಟಿನಲ್ಲಿ ಹಿಂದಿನ ಅಧ್ಯಯನಗಳಿಗಿಂತ ಪ್ರಸ್ತುತ ಅಧ್ಯಯನ ಭಿನ್ನವಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ ಸಾರ್ವಜನಿಕ ಶಿಕ್ಷಣ ಇಲಾಖೆಯು ವಿಂಗಡಣೆ ಮಾಡಿಕೊಂಡ ರೀತಿಯಲ್ಲಿಯೇ ಪೂರ್ವ ವಲಯ ಮತ್ತು ಪಶ್ಚಿಮ ವಲಯದ ಶಾಲೆಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದರಲ್ಲಿ ಅನುದಾನಿತ, ಅನುದಾನರಹಿತ ೨೫ ಶಾಲೆಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸರ್ಕಾರದಿಂದ ಮುದ್ರಣಗೊಂಡ ೫, ೬, ಮತ್ತು ೭ನೇ ತರಗತಿಯ ದ್ವಿತೀಯ ಭಾಷಾ

ಕನ್ನಡ ಪಠ್ಯಪುಸ್ತಕಗಳು, ಕ್ಷೇತ್ರಕಾರ್ಯದ ಮಾಹಿತಿ, ಮುಖ್ಯೋಪಾಧ್ಯಾಯರು, ಕನ್ನಡ ಭಾಷಾ ಬೋಧಕರು, ಕಲಿಕಾರ್ಥಿಗಳು ಮತ್ತು ಪಾಲಕರ ಅಭಿಪ್ರಾಯಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ದ್ವಿತೀಯ ಭಾಷೆಯ ಕಲಿಕೆ ಮತ್ತು ಬೋಧನೆಯ ಸರಿಯಾದ ರೂಪುರೇಷೆಗಳಾವುವು? ಎಂದು ಗುರುತಿಸುವುದು ಅಧ್ಯಯನದ ಮಿತಿಯೂ ಆಗಿದೆ, ವ್ಯಾಪ್ತಿಯೂ ಆಗಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಮಾಹಿತಿಯನ್ನು ಸಂಗ್ರಹಿಸಲು ಸಂದರ್ಶನದ ವೇಳಾಪಟ್ಟಿ ಬಳಸಲಾಯಿತು. ಕ್ಷೇತ್ರಕಾರ್ಯದಲ್ಲಿ ಆಯ್ಕೆ ಮಾಡಿಕೊಂಡ ಶಾಲೆಗಳಿಗೆ ಭೇಟಿ ನೀಡಿ ಮಾಹಿತಿಯನ್ನು ಸಂಗ್ರಹಿಲಾಯಿತು. ಈ ನಿಟ್ಟಿನಲ್ಲಿ ಕ್ಷೇತ್ರ ಕಾರ್ಯವನ್ನು ಕೈಗೊಂಡ ಶಾಲೆಗಳೆಂದರೆ

೧. ಶ್ರೀ ನಂದ ಪ್ರಾಥಮಿಕ ಮತ್ತು ಪ್ರೌಢಶಾಲೆ, ವಿದ್ಯಾನಗರ, ಬಳ್ಳಾರಿ

೨. ಶಾರದಾ ವಿದ್ಯಾಪೀಠ ಪ್ರಾಥಮಿಕ ಮತ್ತು ಪ್ರೌಢಶಾಲೆ, ಸತ್ಯನಾರಾಯಣ ಪೇಟೆ, ಶಿನೇಕ್ರಾಸ್, ಬಳ್ಳಾರಿ

೩. ಗೌತಮ್ ಶಾಲೆ, ಪಟೇಲ್ ನಗರ, ಬಳ್ಳಾರಿ

೪. ಬಸವರಾಜೇಶ್ವರಿ ಪಬ್ಲಿಕ್ ಶಾಲೆ, ಅನಂತಪುರ ರಸ್ತೆ, ಬಳ್ಳಾರಿ

೫. ಗುರುಕುಲ್ ಕಾನ್ಸೆಪ್ಟ್ ಶಾಲೆ, ತಾಳೂರ್ ರಸ್ತೆ, ಬಳ್ಳಾರಿ

೬. ಶಶಾಂಕ್ ಹಿರಿಯ ಪ್ರಾಥಮಿಕ ಶಾಲೆ, ತಿಲಕ್ ನಗರ, ಬಳ್ಳಾರಿ

೭. ವಿಸಡಂ ಲ್ಯಾಂಡ್ ಪ್ರಾಥಮಿಕ ಶಾಲೆ, ಸಂಗನಕಲ್ಲು ರಸ್ತೆ, ಬಳ್ಳಾರಿ

೮. ಮದರ್ ಥೆರೆಸಾ ಹಿರಿಯ ಪ್ರಾಥಮಿಕ ಶಾಲೆ, ಗಾಂಧಿನಗರ, ಬಳ್ಳಾರಿ

೯. ಬಾಲಭಾರತಿ ವಿದ್ಯಾ ಕೇಂದ್ರ, ಗಾಂಧಿನಗರ, ಬಳ್ಳಾರಿ

೧೦. ವಿಯಾನ್ನಿ ವಿದ್ಯಾಲಯ, ಕಂಟೋನ್ಮೆಂಟ್, ಬಳ್ಳಾರಿ

೧೧. ವಾಸವಿ ವಿದ್ಯಾಲಯ, ಇನ್‌ಫ್ಯಾಂಟ್ರಿ ರಸ್ತೆ, ಬಳ್ಳಾರಿ

೧೨. ಮದ್ದಿಕೇರಿ ಭೀಮಯ್ಯ ಶಾಲೆ, ಸಂಗನಕಲ್ಲು ರಸ್ತೆ, ಬಳ್ಳಾರಿ,

೧೩. ಮೊಹಮ್ಮದೀಯ ಆಂಗ್ಲ ಮಾಧ್ಯಮ ಪ್ರೌಢಶಾಲೆ,ಕೌಲ್ ಬಜಾರ್, ಬಳ್ಳಾರಿ

೧೪. ಶಾಂತಿ ಶಿಶುವಿಹಾರ, ತಾಳೂರು ರಸ್ತೆ, ಬಳ್ಳಾರಿ

೧೫. ದತ್ತ ಹಿರಿಯ ಪ್ರಾಥಮಿಕ ಶಾಲೆ, ಪಟೇಲ್‌ನಗರ, ಬಳ್ಳಾರಿ

೧೬. ಲಿಟಲ್ ಫ್ಲವರ್ ಶಾಲೆ, ಬೆಳಗಲ್ಲು ಕ್ರಾಸ್, ಟಿ.ಬಿ.ಶ್ಯಾನಿಟೋರಿಯಂ ಹತ್ತಿರ, ಬಳ್ಳಾರಿ

೧೭. ಮ್ಯಾಪಿಲ್ ಟ್ರೀ ಶಾಲೆ, ತಾಳೂರು ರಸ್ತೆ, ಬಳ್ಳಾರಿ

೧೮. ಆಶೀರ್ವಾದ ಹಿರಿಯ ಪ್ರಾಥಮಿಕ ಶಾಲೆ, ದಂಡು ಪ್ರದೇಶ, ಬಳ್ಳಾರಿ

೧೯. ಡ್ರೀಮ್ ವರ್ಲ್ಡ್ ಹಿರಿಯ ಪ್ರಾಥಮಿಕ ಶಾಲೆ, ಕಪ್ಪಗಲ್ ರಸ್ತೆ, ಬಳ್ಳಾರಿ

೨೦. ಸೆಂಟ್ ಪೀಟರ್ಸ್ ಇಂಗ್ಲಿಷ್ ಮೀಡಿಯಂ ಶಾಲೆ, ಗ್ಲಾಸ್ ಬಜಾರ್, ಬಳ್ಳಾರಿ

೨೧. ಸತ್ಯಂ ಇಂಟರ್ ನ್ಯಾಷನಲ್ ಸ್ಕೂಲ್, ಕಪ್ಪಗಲ್ ರಸ್ತೆ, ಬಳ್ಳಾರಿ

೨೨. ನಾಗಪ್ಪ ಬಾಲವಿಹಾರ ಇಂಗ್ಲಿಷ್ ಮೀಡಿಯಂ ಶಾಲೆ, ಪಾರ್ವತಿ ನಗರ, ವಾರ್ಡ್ ೧, ಬಳ್ಳಾರಿ

೨೩. ಸತ್ಯಂ ಹಿರಿಯ ಪ್ರಾಥಮಿಕ ಶಾಲೆ, ವಾರ್ಡ್ ನಂ.೭, ಬಾಪೂಜಿ ನಗರ, ಬಳ್ಳಾರಿ

೨೪. ಮಕ್ಕಳ ಮಂಟಪ ಶಾಲೆ, ಕಮ್ಮಿಂಗ್ ರಸ್ತೆ, ಬಳ್ಳಾರಿ

೨೫. ಎಂ.ಜಿ.ಎಂ. ಪ್ರೌಢಶಾಲೆ, ಕೋರ್ಟ್ ರಸ್ತೆ, ಬಳ್ಳಾರಿ.[೬]

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ: ಭಾಷಿಕ ಅಧ್ಯಯನ (ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ) ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಂಡಿರುವುದರಿಂದ ಬಳ್ಳಾರಿ ನಗರ ಪ್ರದೇಶವನ್ನು ಮಾತ್ರ ಆಯ್ಕೆ ಮಾಡಿಕೊಂಡು ಅಧ್ಯಯನದ ವ್ಯಾಪ್ತಿಗೆ ತರಲಾಗಿದೆ. ಇದರ ವ್ಯಾಪ್ತಿಯಲ್ಲಿ ಶಾಲಾ ಗುಣಮಟ್ಟವನ್ನು ಆಧಾರವಾಗಿಟ್ಟುಕೊಂಡು ಹಾಗೂ ಪ್ರದೇಶವಾರು ಶಾಲೆಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅನ್ಯ ಭಾಷೆಯನ್ನಾಡುವಂತಹ ಪ್ರದೇಶಗಳಲ್ಲಿನ ವಿದ್ಯಾರ್ಥಿಗಳ ಕಲಿಕಾ ಮಟ್ಟವನ್ನು ದ್ವಿಭಾಷಿಕತೆಯ ಆಧಾರದ ಹಿನ್ನೆಲೆಯಲ್ಲಿ ಓರೆಗೆ ಹಚ್ಚಬೇಕಾಗಿದ್ದರಿಂದ ಬಳ್ಳಾರಿ ನಗರ ಪ್ರದೇಶವನ್ನು ಅಧ್ಯಯನಕ್ಕೆ ಸೀಮಿತಗೊಳಿಸಿಕೊಳ್ಳಲಾಗಿದೆ.

### ೧.೪ ಅಧ್ಯಯನದ ವಿಧಾನ

ಈ ಅಧ್ಯಯನಕ್ಕೆ ಸಂಬಂಧಪಟ್ಟಂತೆ ಪ್ರತ್ಯಕ್ಷ ಮತ್ತು ಪರೋಕ್ಷ ಮೂಲಗಳಿಂದ ದೊರಕುವ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಬಳ್ಳಾರಿ ನಗರದಲ್ಲಿ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡುತ್ತಿರುವ ಮಕ್ಕಳು, ಬೋಧನೆ ಮಾಡುತ್ತಿರುವ ಶಿಕ್ಷಕರು ಹಾಗೂ ಶಾಲೆಯ ಮುಖ್ಯೋಪಾಧ್ಯಾಯರನ್ನು ಭೇಟಿ ಮಾಡಿ ಮಾಹಿತಿಯನ್ನು ಪ್ರಶ್ನಾವಳಿ ಮತ್ತು ಸಂದರ್ಶನದ ಮೂಲಕ ಸಂಗ್ರಹಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪ್ರಮುಖವಾಗಿ ಪ್ರಾಥಮಿಕ ಮತ್ತು ಮಾಧ್ಯಮಿಕ ಮೂಲಗಳ ಆಧಾರದ ಮೇಲೆ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಅಧ್ಯಯನದ ಅತಿ ಸೂಕ್ಷ್ಮವಾದ ಅಂಶಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಸರ್ಕಾರ, ಅರೆ ಸರ್ಕಾರಗಳಿಂದ ಪ್ರಕಟವಾದ ವರದಿಗಳು, ಪ್ರಕಟಿತ ಮತ್ತು ಅಪ್ರಕಟಿತ ಕೃತಿಗಳನ್ನು ಪರಾಮರ್ಶಿಸಲಾಗಿದೆ. ವಾಸ್ತವವಾಗಿ ವರದಿಗಳು, ದಾಖಲೆಗಳು, ಗೆಜೆಟಿಯರ್‌ಗಳು, ಶಬ್ದಕೋಶಗಳು, ವಿಶ್ವಕೋಶಗಳು, ಗಣತಿ ವರದಿಗಳನ್ನು ಮುಖ್ಯ ಪ್ರಾಥಮಿಕ ಮೂಲಗಳನ್ನಾಗಿಟ್ಟುಕೊಂಡು ಸರ್ಕಾರದ ಪ್ರಾಥಮಿಕ ದತ್ತಾಂಶಗಳನ್ನು ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ.

ದ್ವಿತೀಯ ಮಾಹಿತಿಯನ್ನು ವಿವಿಧ ಸಂಸ್ಥೆಗಳು ಪ್ರಕಟಿಸಿದ ಪುಸ್ತಕಗಳು, ನಿಯತಕಾಲಿಕೆಗಳು, ಸಂಶೋಧನಾ ಕೃತಿಗಳು, ಪತ್ರಿಕೆಗಳಿಂದ ಸಂಗ್ರಹಿಸಿಲಾಗಿದೆ. ಲಭ್ಯವಾಗುವ ಮಾಹಿತಿಗಳನ್ನು ವಿವಿಧ ಅಂತರ್ಜಾಲ ತಾಣಗಳಿಂದ ಪಡೆದು ವ್ಯಾಪಕವಾಗಿ ಬಳಸಿಕೊಳ್ಳಲಾಗಿದೆ. ಜೊತೆಗೆ ವಿದ್ಯುನ್ಮಾನ ಮಾಧ್ಯಮ, ಮುದ್ರಣ ಮಾಧ್ಯಮಗಳಿಂದಲೂ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಬಳಸಿಕೊಳ್ಳಲಾಗಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ

ಮಾಹಿತಿಯನ್ನು ಸಂಗ್ರಹದ ಉದ್ದೇಶಕ್ಕಾಗಿ ಸಂದರ್ಶನದ ವೇಳಾಪಟ್ಟಿ ಬಳಸಲಾಯಿತು ಮತ್ತು ಸಂಬಂಧಿಸಿದ ಶಾಲೆಗಳಿಗೆ ಭೇಟಿ ನೀಡಲಾಯಿತು. ಒಟ್ಟು ೨೫ ಶಾಲೆಗಳನ್ನು ಸಮೀಕ್ಷಾ ವಿಧಾನದಲ್ಲಿ ಆಯ್ಕೆ ಮಾಡಿಕೊಳ್ಳಲಾಗಿದೆ. ವಿದ್ಯಾರ್ಥಿಗಳ ವಯಸ್ಸು, ಲಿಂಗವನ್ನು ಆಧಾರವಾಗಿಟ್ಟುಕೊಂಡು ಯಾದೃಚ್ಛಿಕವಾಗಿ ಆಯ್ಕೆ ಮಾಡಿಕೊಳ್ಳಲಾಯಿತು.

ಅನುದಾನಿತ, ಅನುದಾನರಹಿತ ಆಂಗ್ಲ ಮಾಧ್ಯಮದ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿನ ೫, ೬ ಮತ್ತು ೭ನೇ ತರಗತಿಯ ಮಕ್ಕಳಲ್ಲಿ ೮ ಗಂಡು, ೮ ಹೆಣ್ಣು ಮಕ್ಕಳನ್ನು ಒಟ್ಟು ೬೦೦ ವಿದ್ಯಾರ್ಥಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಎಲ್ಲಾ ವಿದ್ಯಾರ್ಥಿಗಳಿಂದ ಪ್ರಶ್ನಾವಳಿಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಯಿತು. ಮಾಹಿತಿ ಸಂಗ್ರಹಿಸುವಾಗ, ಓದುವಾಗ, ಬರೆಯುವಾಗ, ವ್ಯಾಕರಣಾಂಶಗಳನ್ನು ಹೇಗೆ ಬರೆಯುತ್ತಾರೆ ಎಂಬುದನ್ನು ಮನನ ಮಾಡಿಕೊಳ್ಳಲು ೫, ೬ ಮತ್ತು ೭ನೇ ತರಗತಿಯ ಪಠ್ಯಪುಸ್ತಕಗಳನ್ನು ವಿತರಿಸಿ, ಅವರಿಂದ ಓದಿಸಿ, ಓದುವುದನ್ನು ಧ್ವನಿ ಮುದ್ರಣ ಮಾಡುವ ಮೂಲಕ ದಾಖಲಿಸಿಕೊಳ್ಳಲಾಗಿದೆ. ವಿಶ್ಲೇಷಣೆಯ ಸಂದರ್ಭದಲ್ಲಿ ಧ್ವನಿ ಮುದ್ರಿಕೆಗಳನ್ನು ಬಳಸಿಕೊಳ್ಳಲಾಗಿದೆ. ಎರಡನೆಯದಾಗಿ ಪ್ರಬಂಧವನ್ನು ಬರೆಯಿಸಿ ಮಕ್ಕಳಿಂದ ಪದ ಮತ್ತು ವಾಕ್ಯಗಳಲ್ಲಿನ ದೋಷಗಳನ್ನು ಗುರುತಿಸಲಾಗಿದೆ. ಕ್ಷೇತ್ರ ಕಾರ್ಯದಲ್ಲಿ ಪೋಷಕರಿಗೆ ಪ್ರಶ್ನಾವಳಿಯನ್ನು ನೀಡಿ ಅವರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯನ್ನಾಗಿ ಅಧ್ಯಯನ ಮಾಡುತ್ತಿರುವ ಸಂದರ್ಭದಲ್ಲಿ ತಮ್ಮ ಮಕ್ಕಳು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತು ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಹಾಗೆಯೇ ಭಾಷಾ ಬೋಧನೆ ಮಾಡುವಂತಹ ಶಿಕ್ಷಕರನ್ನು ಸಂದರ್ಶನ ಮಾಡಿ ಪ್ರಶ್ನಾವಳಿಯನ್ನು ನೀಡಿ ಅವರಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಒಟ್ಟು ೨೫ ಶಾಲೆಗಳಿಂದ ೩೫ ಶಿಕ್ಷಕರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇವರ ಜೊತೆಗೆ ಆಯಾ ಶಾಲೆಗಳ ಮುಖ್ಯೋಪಾಧ್ಯಾಯರನ್ನು ಸಹ ಸಂದರ್ಶಿಸಿ ಪ್ರಶ್ನಾವಳಿಗಳನ್ನು ನೀಡಲಾಯಿತು. ಈ ಪ್ರಶ್ನೆಗಳಿಗೆ ಸ್ಪಂದಿಸಿರುತ್ತಾರೆ. ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಕಲಿಕೆ ಮತ್ತು ಬೋಧನೆಯಲ್ಲಿ ಏನೇನು ಸಮಸ್ಯೆಗಳಿವೆ ಎಂಬುದನ್ನು ವಿಶ್ಲೇಷಣೆ ಮಾಡಲಾಗಿದೆ. ಈ ಅಧ್ಯಯನದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ಮಕ್ಕಳ ಕುರಿತು ಹೆಚ್ಚು ಒತ್ತು ನೀಡಲಾಗಿದೆ. ದೊರೆತ ಮಾಹಿತಿ ಮತ್ತು ದತ್ತಾಂಶವನ್ನು ಬಳಸುವುದಲ್ಲದೆ ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕವಾಗಿ ಚರ್ಚಿಸಲಾಗಿದೆ. ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಕುರಿತು

ಲೇಖನಗಳು, ಹೊತ್ತಿಗೆಗಳು, ಪಿಎಚ್.ಡಿ, ಎಂ.ಫಿಲ್, ಎಂ.ಇಡ್ ನಂತಹ ಅಧ್ಯಯನಗಳು ನಡೆದಿವೆಯಾದರೂ ಬಳ್ಳಾರಿ ನಗರದಲ್ಲಿ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಕಲಿಯುತ್ತಿರುವ ವಿದ್ಯಾರ್ಥಿಗಳ ಸಮಸ್ಯೆಗಳ ಬಗ್ಗೆ ಅಧ್ಯಯನಗಳು ನಡೆದಿರಲಿಲ್ಲ.

ಈ ಅಧ್ಯಯನದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳಲ್ಲಿ ಓದುವಿಕೆ, ಬರವಣಿಗೆ, ಸ್ವರಗಳು, ವ್ಯಂಜನಗಳು, ಗುಣಿತಾಕ್ಷರಗಳು, ಒತ್ತಕ್ಷರಗಳು, ನಾಮಪದ, ಕ್ರಿಯಾಪದಗಳ ಬಳಕೆಯಲ್ಲಿ ಕಂಡು ಬಂದ ಸಮಸ್ಯೆಗಳನ್ನು ಪ್ರಶ್ನಾವಳಿಗಳ ಮೂಲಕ ಹೆಕ್ಕಿ ತೆಗೆಯಲಾಗಿದೆ. ಈ ಅಧ್ಯಯನದ ಮೂಲಕವಾಗಿ ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡುತ್ತಿರುವ ಕನ್ನಡ ಮಾತೃ ಭಾಷೆಯುಳ್ಳ ಮತ್ತು ಇತರೆ ಮಾತೃ ಭಾಷೆಯನ್ನಾಡುವ ವಿದ್ಯಾರ್ಥಿಗಳಲ್ಲಿ ಕನ್ನಡ ಭಾಷೆಯ ಸಮರ್ಪಕ ಬಳಕೆ, ಬರವಣಿಗೆ, ಓದುವಿಕೆ ಮತ್ತು ಸಂವಹನದಲ್ಲಿ ಉಂಟಾಗುತ್ತಿದ್ದ ಗೊಂದಲವನ್ನು ನಿವಾರಿಸುವ ಹಿನ್ನೆಲೆಯಲ್ಲಿ ಆನ್ವಯಿಕ ಅಧ್ಯಯನದ ಮೂಲಕ ಪ್ರಸ್ತುತ ಅಧ್ಯಯನವನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅದಕ್ಕಾಗಿ ಈ ಅಧ್ಯಯನವು ಉಳಿದ ಅಧ್ಯಯನಗಳಿಗಿಂತ ಸ್ವಲ್ಪ ಭಿನ್ನವಾಗಿದೆ.

**೧.೫ ಅಧ್ಯಯನದ ಸ್ವರೂಪ**

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ: ಭಾಷಿಕ ಅಧ್ಯಯನ ಎಂಬ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಕೈಗೊಳ್ಳಲಾಗಿದ್ದು, ಅಧ್ಯಯನವನ್ನು ಒಟ್ಟು ಏಳು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ.

**ಅಧ್ಯಾಯ ೧ : ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ**

ಈ ಅಧ್ಯಾಯದಲ್ಲಿ ಪ್ರಸ್ತಾವನೆಯ ಮೂಲಕ ಉದ್ದೇಶವನ್ನು ಸ್ಪಷ್ಟಪಡಿಸಲಾಗಿದೆ. ನಂತರ ಅಧ್ಯಯನ ಕ್ಷೇತ್ರಕ್ಕೆ ಬಳಸಿಕೊಂಡ ವ್ಯಾಪ್ತಿ ಹಾಗೂ ಅಧ್ಯಯನದ ವಿಧಾನವನ್ನು ವಿವರಿಸಲಾಗಿದೆ. ಅಧ್ಯಯನದ ಸ್ವರೂಪದಲ್ಲಿ ಬೋಧನೆ ಮತ್ತು ಕಲಿಕೆಗೆ ಸಂಬಂಧಿಸಿದ ವಿಷಯಗಳನ್ನು ಕುರಿತು ಚರ್ಚಿಸಲಾಗಿದೆ.

**ಅಧ್ಯಾಯ ೨ : ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ**

ಈ ಅಧ್ಯಾಯದಲ್ಲಿ ಭಾಷಾ ಬೋಧನೆ ಮತ್ತು ಕಲಿಕೆಗೆ ಸಂಬಂಧಿಸಿದ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಪಿಎಚ್.ಡಿ ಮಹಾಪ್ರಬಂಧಗಳು, ಎಂ.ಫಿಲ್ ಪ್ರಬಂಧಗಳು, ಎಂ.ಇಡಿ. ಪದವಿಗೆ ಸಲ್ಲಿಸಿದ ಕಿರುಪ್ರಬಂಧಗಳು, ನಿಯತಕಾಲಿಕೆಗಳು,

ಪತ್ರಿಕೆಗಳು, ನಾಡಿನ ಭಾಷಾ ವಿಜ್ಞಾನಿಗಳು ಬರೆದ ವಿವಿಧ ಕೃತಿಗಳನ್ನು ಸಂಕ್ಷಿಪ್ತವಾಗಿ ಚರ್ಚಿಸಿ ಸಮೀಕ್ಷೆ ಮಾಡಲಾಗಿದೆ.

**ಅಧ್ಯಾಯ ೩ : ಭಾಷಾ ಬೋಧನೆ ಮತ್ತು ಕಲಿಕೆಯ ಸ್ವರೂಪ: ಚಾರಿತ್ರಿಕ ನೋಟ**

ಈ ಅಧ್ಯಾಯದಲ್ಲಿ ಭಾಷಾ ಬೋಧನೆ ಮತ್ತು ಕಲಿಕೆಯ ಸ್ವರೂಪ: ಚಾರಿತ್ರಿಕ ನೋಟವನ್ನು ನೀಡಲಾಗಿದ್ದು, ಇದರಲ್ಲಿ ವೇದಗಳ ಕಾಲದ ಶಿಕ್ಷಣ, ಬೌದ್ಧರು, ಮಹಮ್ಮದೀಯರು ಹಾಗೂ ಬ್ರಿಟೀಷರ ಕಾಲದವರೆಗೆ ಇದ್ದ ಬೋಧನ ಮತ್ತು ಕಲಿಕಾ ಪದ್ಧತಿಗಳನ್ನು ಚಾರಿತ್ರಿಕವಾಗಿ ಅವಲೋಕಿಸಲಾಗಿದೆ. ನಂತರ ಬ್ರಿಟಿಷರ ಅವಧಿಯಲ್ಲಿ ಆಧುನಿಕ ಶಿಕ್ಷಣ ಪದ್ಧತಿ ಹೇಗೆ ಬೆಳೆದು ಬಂದಿತು ಎಂಬುದನ್ನು ಚರ್ಚಿಸಲಾಗಿದೆ. ನಂತರದಲ್ಲಿ ಸ್ವಾತಂತ್ರ್ಯೋತ್ತರ ಭಾರತದಲ್ಲಿ ಶಿಕ್ಷಣ ಪದ್ಧತಿ ಹೇಗೆ ಅಭಿವೃದ್ಧಿ ಹೊಂದಿತು, ಸರ್ಕಾರದ ವಿವಿಧ ಆಯೋಗಗಳು ಭಾಷಾ ಬೆಳವಣಿಗೆ, ಬೋಧನೆ ಮತ್ತು ಕಲಿಕೆಗೆ ಒತ್ತು ನೀಡಿದವು ಎಂಬುದನ್ನು ವಿಶ್ಲೇಷಿಸಲಾಗಿದೆ.

**ಅಧ್ಯಾಯ ೪ : ಭಾಷಾ ಬೋಧನೆಯ ಸಮಸ್ಯೆಗಳು**

ಈ ಅಧ್ಯಾಯಕ್ಕೆ ಸಂಬಂಧಿಸಿದಂತೆ ಭಾಷಾ ಬೋಧನೆಯ ಸಮಸ್ಯೆಗಳು ಎಂಬ ಶೀರ್ಷಿಕೆಯಡಿಯಲ್ಲಿ ಪಠ್ಯ ಮೂಲ ಸಮಸ್ಯೆಗಳು, ಬೋಧನಾ ವಿಧಾನಗಳು, ಪರೀಕ್ಷೆ ಹಾಗೂ ಮೌಲ್ಯಮಾಪನ, ಶಿಕ್ಷಕರ ಭಾಷಿಕ ಸಮಸ್ಯೆಗಳು, ಶಿಕ್ಷಕರ ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳು ಹಾಗೂ ಶಿಕ್ಷಕರ ಧೋರಣೆಗಳ ಕುರಿತು ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

**ಅಧ್ಯಾಯ ೫ : ಭಾಷಾ ಕಲಿಕೆಯ ಸಮಸ್ಯೆಗಳು**

ಈ ಅಧ್ಯಾಯದಲ್ಲಿ ಭಾಷಾ ಕಲಿಕೆಯ ಸಮಸ್ಯೆಗಳಿಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳು ಓದುವಾಗ, ಬರೆಯುವಾಗ ಎದುರಿಸುತ್ತಿರುವ ಸಮಸ್ಯೆಗಳನ್ನು ಗುರುತಿಸುವುದು. ಸ್ವರಗಳು, ವ್ಯಂಜನಗಳು, ಗುಣಿತಾಕ್ಷರಗಳು, ಒತ್ತಕ್ಷರಗಳು, ನಾಮಪದ, ಕ್ರಿಯಾಪದಗಳನ್ನು ಬರೆಯುವಾಗ ಮಾಡುವ ದೋಷಗಳನ್ನು ಗುರುತಿಸುವುದು. ಕ್ಷೇತ್ರಕಾರ್ಯ ಅಧ್ಯಯನದಲ್ಲಿ ಪ್ರಶ್ನಾವಳಿಗಳನ್ನು ನೀಡುವ ಮೂಲಕ ಮಾಹಿತಿ ಸಂಗ್ರಹಿಸಿ, ವಿಶ್ಲೇಷಿಸಿ, ಕೊನೆಯಲ್ಲಿ ಆ ವಿದ್ಯಾರ್ಥಿಗಳು ಮಾಡಿದ ದೋಷಗಳಿಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳಲಾಗಿದೆ.

**ಅಧ್ಯಾಯ ೬ : ಭಾಷಾ ಬೋಧನೆ ಮತ್ತು ಕಲಿಕೆಗೆ ಪೂರಕವಾದ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆ**

ಈ ಅಧ್ಯಾಯದಲ್ಲಿ ಭಾಷಾ ಬೋಧನೆ ಮತ್ತು ಕಲಿಕೆಗೆ ಪೂರಕವಾದ ದ್ವಿತೀಯ ಭಾಷಾಪಠ್ಯಗಳ ಸ್ವರೂಪ ಮತ್ತು ಬಳಕೆ ಕುರಿತು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಹಿರಿಯ ಪ್ರಾಥಮಿಕ ಶಾಲೆಯ ಐದು, ಆರು ಮತ್ತು ಏಳನೇ ತರಗತಿಯ ತಿಳಿ ಕನ್ನಡ ಎಂಬ ಶೀರ್ಷಿಕೆಯ ಪಠ್ಯಪುಸ್ತಕಗಳ ರಚನೆಯಲ್ಲಿರುವ ಸಮಸ್ಯೆಗಳು ಮತ್ತು ಸವಾಲುಗಳನ್ನು ವಿಶ್ಲೇಷಿಸಿ ಚರ್ಚಿಸಲಾಗಿದೆ.

**ಅಧ್ಯಾಯ ೭ : ಸಮಾರೋಪ**

ಈ ಅಧ್ಯಾಯವು ಕೊನೆಯ ಅಧ್ಯಾಯವಾಗಿದ್ದು, ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ವಿವರಿಸಲಾಗಿದೆ. ಅಲ್ಲದೆ ಈ ಅಧ್ಯಯನದಿಂದ ಶಿಕ್ಷಣ ಇಲಾಖೆಗೆ ಆಗುವ ಅನುಕೂಲತೆಗಳನ್ನು ಹಾಗೂ ಸಲಹೆಗಳನ್ನು ಸಹ ಕೊಡಲಾಗಿದೆ. ಈ ಸಮಾರೋಪದ ನಂತರವೇ ಪರಾಮರ್ಶನ ಗ್ರಂಥಗಳು, ಅನುಬಂಧಗಳನ್ನು ನೀಡಲಾಗಿದೆ. ಹೀಗೆ ಸದರಿ ಅಧ್ಯಯನದ ವಿಸ್ತಾರವು ರೂಪುಗೊಂಡಿರುವುದನ್ನು ಕಾಣಬಹುದಾಗಿದೆ.

**ಕೊನೆ ಟಿಪ್ಪಣಿಗಳು**

೧. ರುದ್ರಮುನಿ ಈ. ಮತ್ತು ಅನಂತರಾಮು ಬಿ.ಸಿ., ಭಾರತದಲ್ಲಿ ಶಿಕ್ಷಣದ ಉದಯ, ೨೦೦೬(ಐದನೇ ಮುದ್ರಣ), ಶ್ರೀಲಕ್ಷ್ಮೀ ಪ್ರಕಾಶನ, ಚಿತ್ರದುರ್ಗ, ಪು.೪೪.

೨. ಅದೇ, ಪು.೪೫.

೩. ಕೊಂಗವಾಡ ಎನ್.ಬಿ., ಭಾರತದಲ್ಲಿ ಶಿಕ್ಷಣ ಹಾಗೂ ಪ್ರಚಲಿತ ಸಮಸ್ಯೆಗಳು, ೨೦೦೩, ಪು.೨೦–೨೨.

೪. ಭರತ ಭೂಷಣ್, ಶಿಕ್ಷಣದ ಆಧಾರಗಳು, ೨೦೦೩, ವಿದ್ಯಾನಿಧಿ ಪ್ರಕಾಶನ, ಗದಗ, ಪು.೨೨೦–೨೭೫.

೫. ರಾಬರ್ಟ್ ಲ್ಯಾಡೊ, ಲ್ಯಾಂಗ್ವೇಜ್ ಟೀಚಿಂಗ್ ಎ ಸೈಂಟಿಫಿಕ್ ಅಪ್ರೋಚ್, ೧೯೬೪, ಸ್ಪ್ರಿಂಗರ್ ಪಬ್ಲಿಕೇಷನ್, ಲಂಡನ್, ಪು.೧೧೯.

೬. ಸಾರ್ವಜನಿಕ ಶಿಕ್ಷಣ ಇಲಾಖೆ, ವೆಬ್‌ಸೈಟ್: www.schooleducation.nic.in

# ಅಧ್ಯಾಯ : ಎರಡು

# ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

೨.೧. ಪಿಎಚ್.ಡಿ ಮಹಾಪ್ರಬಂಧಗಳು

೨.೨. ಎಂ.ಫಿಲ್ ಸಂಪ್ರಬಂಧಗಳು

೨.೩. ಎಂ.ಇಡಿ ಕಿರುಪ್ರಬಂಧಗಳು

೨.೪. ಸಂಶೋಧನಾ ಕೃತಿಗಳು

೨.೫. ಸಂಚಿಕೆಗಳು

೨.೬. ನಿಯತಕಾಲಿಕೆಗಳು

### ಅಧ್ಯಾಯ : ಎರಡು

# ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆ

ಪ್ರಸ್ತುತ ಅಧ್ಯಯನವು ಭಾಷಾಶಾಸ್ತ್ರಕ್ಕೆ ಸಂಬಂಧಪಟ್ಟಿರುವುದರಿಂದ ಇದನ್ನು ಪ್ರಾಯೋಗಿಕವಾಗಿ ಸೈದ್ಧಾಂತಿಕವಾಗಿ ಮತ್ತು ಬೌದ್ಧಿಕ ಹಿನ್ನಲೆಯಲ್ಲಿ ಅಧ್ಯಯನ ಮಾಡುವ ಅಗತ್ಯವಿದೆ. ಆದ್ದರಿಂದ ಇದಕ್ಕೆ ಸಂಬಂಧಿಸಿದ ಸಾಹಿತ್ಯವನ್ನು ಇಲ್ಲಿ ವಿಮರ್ಶೆ ಮಾಡಲಾಗಿದೆ. ಯಾವುದೇ ಒಂದು ಅಧ್ಯಯನವನ್ನು ಕೈಗೊಂಡಾಗ ಆ ಅಧ್ಯಯನಕ್ಕೆ ಸಂಬಂಧಿಸಿದ ವಿಷಯಗಳನ್ನು ಪರಿಶೀಲನೆ ಮಾಡಬೇಕಾದುದು ಮತ್ತು ವಿಮರ್ಶೆಗೆ ಒಳಪಡಿಸಬೇಕಾದುದು ಸಂಶೋಧಕರ ಆದ್ಯ ಕರ್ತವ್ಯವಾಗಿದೆ. ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆಗೆ ಸಂಬಂಧಿಸಿದಂತೆ ಅವಲೋಕನವು ಸಹ ಅತಿ ಮುಖ್ಯವಾಗಿರುತ್ತದೆ. ಈ ಹಿಂದೆ ನಡೆದಿರುವ ಈ ಸಂಶೋಧನೆಗಳಲ್ಲಿ ಉಳಿದಿರುವ ಅಂತರ ಹಾಗೂ ಬಿಟ್ಟು ಹೋಗಿರುವ ಅಂಶಗಳನ್ನು ತುಂಬಿಸಿ ಪರಿಪೂರ್ಣಗೊಳಿಸಲು ಸಾಧ್ಯವಾಗುತ್ತದೆ. ಇಂತಹ ವಿಮರ್ಶಾತ್ಮಕ ಕ್ರಮವು ಸೈದ್ಧಾಂತಿಕ ಮತ್ತು ಬೌದ್ಧಿಕ ನಿಟ್ಟಿನಲ್ಲಿ ಅಧ್ಯಯನದ ಮಾಹಿತಿಗಳನ್ನು ಪತ್ತೆ ಹಚ್ಚಲು ಸಹಾಯಕವಾಗಿದೆ.

ಸಾಹಿತ್ಯ ವಿಮರ್ಶೆಯು ಸಂಶೋಧಕನಿಗೆ ಅಗತ್ಯವಾದ ಬೌದ್ಧಿಕ ಮತ್ತು ಪ್ರಾಯೋಗಿಕ ಒಳನೋಟಗಳಿಗೆ ದಾರಿ ಮಾಡಿಕೊಡುತ್ತದೆ. ಪ್ರಸ್ತುತ ವಿದ್ಯಮಾನಗಳನ್ನು ಅರಿಯುವಲ್ಲಿ ಹಾಗೂ ವಸ್ತುವನ್ನು ಹುಡುಕುವಲ್ಲಿ ಪರಿಕಲ್ಪನೆಯನ್ನು ನೀಡುತ್ತದೆ. ಯಾವುದೇ ಅಧ್ಯಯನದಲ್ಲಿ ವಿಮರ್ಶೆ ಅಗತ್ಯ. ಇಲ್ಲದಿದ್ದಲ್ಲಿ ಅಂತಹ ಅಧ್ಯಯನಗಳು ಅರ್ಥಪೂರ್ಣವೆನಿಸುವುದಿಲ್ಲ. ಪಠ್ಯದ ಪುನರ್‌ರಚನೆ (Re-construction) ಮತ್ತು ನಿರಚನೆ (De-construction)ಯ ಹಿನ್ನೆಲೆಯಲ್ಲಿ ಸಂಶೋಧನೆಗಳು ಹೆಚ್ಚು ಪ್ರಸ್ತುತವೆನಿಸುತ್ತವೆ. ಅಲ್ಲದೆ ವಿಶ್ಲೇಷಣೆಗೆ ಮತ್ತು ವ್ಯಾಖ್ಯಾನಕ್ಕೆ ಅರ್ಥ ನೀಡುತ್ತವೆ. ಹಾಗೆಯೇ ಕಳೆದ ವರ್ಷಗಳಲ್ಲಿ ನಡೆದ ಸಂಶೋಧನಾ ಕಮ್ಮಟಗಳು, ಸಮಾವೇಶಗಳು ಸಹಕಾರಿಯಾಗಿವೆ.

ಸಾಹಿತ್ಯ ಸಮೀಕ್ಷೆಯನ್ನು ಈಗಾಗಲೇ ಪ್ರಾಯೋಗಿಕ ಮತ್ತು ಸೈದ್ಧಾಂತಿಕ ಸಾಹಿತ್ಯ ವಿದ್ಯಾಮಾನಗಳೆಂದು ಪರಿಗಣಿಸಲಾಗಿದೆ. ಇಂತಹ ಪರಿಕರಗಳಿಂದ ಕೇಂದ್ರೀಕರಿಸಿದ ಸಂಶೋಧನೆಗಳ ಮೂಲಕವಾಗಿ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಕಲಿಯುತ್ತಿರುವ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಯ ಮೇಲೆ ಬೆಳಕು ಚೆಲ್ಲಲು ಮತ್ತು ಸಮಸ್ಯೆಗೆ ಪರಿಹಾರೋಪಾಯಗಳನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ. ಕೆಲವೊಮ್ಮೆ ಸಾಹಿತ್ಯ ಸಮೀಕ್ಷೆ ವಿಧಾನಗಳ, ಪರಿಕರಗಳ ಮತ್ತು ತಂತ್ರಗಳ ದೃಷ್ಟಿಕೋನಗಳಿಂದ ದೊರಕುವ ಅಂಶಗಳನ್ನು ಒಂದೆಡೆ ಸಂಗ್ರಹಿಸಿಟ್ಟುಕೊಳ್ಳಬೇಕು. ಇಂತಹ ಮಾಹಿತಿಗಳನ್ನು ಓರೆಗೆ ಹಚ್ಚಿ ನೋಡಿದಾಗ ಅವು ಅಧ್ಯಯನಕ್ಕೆ ಸಹಾಯಕಾರಿಯಾಗಿರುತ್ತವೆ. ಇದು ಸಂಶೋಧನೆಗೆ ಸಾಧ್ಯವಾದಷ್ಟು ಮಟ್ಟಿಗೆ ಸಾಹಿತ್ಯದ ಶ್ರೀಮಂತಿಕೆ ಮತ್ತು ಪ್ರಕಟವಾದ ಸಾಹಿತ್ಯಗಳಲ್ಲಿ ನ್ಯಾಯವನ್ನು ಒದಗಿಸುತ್ತವೆ. ಪ್ರಸ್ತುತ ಸಂದರ್ಭದಲ್ಲಿ ಸಂಪನ್ಮೂಲಗಳ ಇತಿಮಿತಿಗಳ ಅಡಿಯಲ್ಲಿ ಹಿಂದಿನ ಸಾಹಿತ್ಯವಿಲ್ಲದೆ ಸಂಶೋಧನೆಗಳು ಪೂರ್ಣಗೊಳ್ಳಲಾರವು. ಈ ಹಿನ್ನೆಲೆಯಲ್ಲಿ ಸಾಹಿತ್ಯಗಳ ಪರಿಶೀಲನೆ ಅಧ್ಯಯನಗಳಿಗೆ ಪೂರಕವಾಗಿದೆ. ಸಂಬಂಧಿಸಿದ ಸಾಹಿತ್ಯ ಕೃತಿಗಳಲ್ಲಿ ಪಿಎಚ್.ಡಿ ಮಹಾಪ್ರಬಂಧಗಳು, ಎಂ.ಫಿಲ್ ಸಂಪ್ರಬಂಧಗಳು, ಎಂ.ಇಡಿ ಪದವಿಗಾಗಿ ಸಲ್ಲಿಸಿದ ಕಿರು ಪ್ರಬಂಧಗಳು ಹಾಗೂ ಸಂಶೋಧನಾ ಕೃತಿಗಳು ಮತ್ತು ಲೇಖನಗಳನ್ನು ಒಳಗೊಂಡಿದ್ದು, ಅವುಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ.

### ೨.೧ ಪಿಎಚ್.ಡಿ ಮಹಾಪ್ರಬಂಧಗಳು

ಯಾವುದೇ ನಿರ್ದಿಷ್ಟ ಕ್ಷೇತ್ರದಲ್ಲಿ ಕಲಿತ ಜ್ಞಾನವು ಆ ಕ್ಷೇತ್ರಕ್ಕೆ ಸಂಬಂಧಿಸಿದ ಇತರೆ ಸಮಸ್ಯೆಗಳನ್ನು ಪರಿಹರಿಸುವಲ್ಲಿ ಸಹಕಾರಿಯಾಗಿದೆ. ಆದ್ದರಿಂದ ಸಾಹಿತ್ಯಕ್ಕೆ ಸಂಬಂಧಪಟ್ಟ ಸಮೀಕ್ಷೆಯು ಸಂಶೋಧಕನಿಗೆ ಬೀಗದ ಕೈ ಇದ್ದ ಹಾಗೆ. ಈ ನಿಟ್ಟಿನಲ್ಲಿ ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧಗಳನ್ನು ಅಧ್ಯಯನಕ್ಕೆ ಪೂರಕ ಮಾಹಿತಿಗಾಗಿ ಬಳಸಿಕೊಳ್ಳಲಾಗಿದೆ.

ನಂದ ಇಟಕರ್ ಎನ್.ಆರ್. ಅವರು ಭಾಷೆಗೆ ಸಂಬಂಧಿಸಿದಂತೆ **"ಒಂದನೇ ತರಗತಿಯಿಂದ ಐದನೇ ತರಗತಿಯವರೆಗಿನ ಕನ್ನಡ ಪಠ್ಯಪುಸ್ತಕದಲ್ಲಿಯ ಪದಗಳ ಅಧ್ಯಯನ"** ಮಹಾ ಪ್ರಬಂಧವನ್ನು ಪ್ರೊ.ಕೆ.ಅನ್ಬನ್ ಅವರ ಮಾರ್ಗದರ್ಶನದಲ್ಲಿ ೨೦೦೫ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮಂಡಿಸಿದ್ದಾರೆ. 'ಅ' ಯಿಂದ 'ಜ್ಞ' ವರೆವಿಗೂ ನಿಘಂಟುವಿನ ಮಾದರಿಯಲ್ಲಿ ಪದಗಳನ್ನು ಪಟ್ಟಿ ಮಾಡಿದ್ದಾರೆ. ಸರಿಸುಮಾರು ಹದಿಮೂರು ಪಠ್ಯಪುಸ್ತಕಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ರಾಜ್ಯ ಸರ್ಕಾರದ ಪ್ರಥಮ ಭಾಷೆ ಕನ್ನಡ ಪಠ್ಯಪುಸ್ತಕಗಳನ್ನು ಆಧರಿಸಿ ಸಲ್ಲಿಸಿದ ಒಂದು ಪ್ರಬಂಧವಾಗಿದೆ.

ಸೋಮಕ್ಕ ಎಂ. ಅವರ **"ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು"** ಎಂಬ ಮಹಾಪ್ರಬಂಧವನ್ನು ಡಾ.ಪಿ.ಮಹಾದೇವಯ್ಯ ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೭ರಲ್ಲಿ ಸಲ್ಲಿಸಿದ್ದಾರೆ. ಇವರು ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿನ ಪ್ರಾಥಮಿಕ ಶಾಲಾ ಮಕ್ಕಳನ್ನು (೧ ರಿಂದ ೪) ಅನುಲಕ್ಷಿಸಿ ಅಧ್ಯಯನವನ್ನು ಕೈಗೊಂಡಿದ್ದರು. ಅನ್ಯ ಮಾತೃಭಾಷೆಯಿಂದ ಬಂದ ಮಕ್ಕಳು ಪ್ರಥಮ ಮತ್ತು ದ್ವಿತೀಯ ಭಾಷೆಯಾಗಿ ಹಾಗೂ ಲಂಬಾಣಿ ಮಾತೃಭಾಷೆಯುಳ್ಳ ಮಕ್ಕಳು ಕನ್ನಡ ಕಲಿಯುವಾಗ ಎದುರಿಸುತ್ತಿರುವ ಸಮಸ್ಯೆಗಳನ್ನು ಕೇಂದ್ರವಾಗಿಟ್ಟುಕೊಂಡು ಓದುಗಾರಿಕೆ ಮತ್ತು ಬರವಣಿಗೆಯ ಕೌಶಲಗಳನ್ನು ಅಧ್ಯಯನ ಮಾಡಿದ್ದಾರೆ. ೧ ರಿಂದ ೪ನೇ ತರಗತಿಯ ಪ್ರಾಥಮಿಕ ಶಾಲಾ ಮಕ್ಕಳು ಕಲಿಕಾ ಸಮಸ್ಯೆಗಳಿಗೆ ಕ್ಷೇತ್ರಕಾರ್ಯದ ಮೂಲಕ ಕಾರಣಗಳನ್ನು ಹುಡುಕಿ ಅವುಗಳಿಗೆ ತಕ್ಕ ಮಟ್ಟಿಗೆ ಪರಿಹಾರೋಪಾಯಗಳನ್ನು ಸೂಚಿಸಿದ್ದಾರೆ. ಹಾಗೆಯೇ ಕಲಿಕೆಯ ಸುಧಾರಣೆಗೆ ಕೆಲವು ಸೂಕ್ತ ಸಲಹೆ ಸೂಚನೆಗಳನ್ನು ನೀಡಿದ್ದಾರೆ.

ಇಲ್ಲಿ ಕಲಿಗೆ ಹೆಚ್ಚು ಪ್ರಾಧಾನ್ಯತೆ ನೀಡಲಾಗಿದೆ. ಬೋಧನೆಯ ವಿಷಯ ಸಂಪೂರ್ಣ ಗೌಣವಾಗಿದೆ. ಈ ಅಧ್ಯಯನವು ನನ್ನ ಅಧ್ಯಯನವನ್ನು ಹೇಗೆ ಭಿನ್ನವಾಗಿ ಕೈಗೊಳ್ಳಬೇಕೆಂಬುದನ್ನು ತಿಳಿಸಿಕೊಟ್ಟಿದೆ. ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡ ಕಲಿಯುವ ಭಿನ್ನ ಮಾತೃಭಾಷೆಯುಳ್ಳ ಮಕ್ಕಳು ಉದಾಹರಣೆಗೆ: ತೆಲುಗು, ತಮಿಳು, ಉರ್ದು ಭಾಷಿಕ ಮಕ್ಕಳ ಕನ್ನಡ ಕಲಿಕೆ ಹಾಗೆಯೇ ಅನ್ಯ ಭಾಷಾ ಶಿಕ್ಷಕರ ಬೋಧನಾ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಪಠ್ಯಕ್ರಮದ ಸ್ವರೂಪ ಮತ್ತು ಬಳಕೆಯನ್ನು ಅಧ್ಯಯನ ಮಾಡುವುದೇ ನನ್ನ ಅಧ್ಯಯನದ ಉದ್ದೇಶ ಮತ್ತು ಸ್ವರೂಪವಾಗಿದೆ. ಕನ್ನಡ ಕಲಿಕೆಯ ಸಮಸ್ಯೆ ಕುರಿತ ಅಧ್ಯಯನಗಳು ವ್ಯಾಪಕವಾಗಿ ಅಧ್ಯಯನವಾಗುತ್ತಿರುವ ಸಮಕಾಲೀನ ಸಂದರ್ಭದಲ್ಲಿ ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡ ಕಲಿಯುವ ಭಿನ್ನ ಭಾಷಿಕ ಅಧ್ಯಯನ ಹೊಸ ಆಲೋಚನಾ ಕ್ರಮವಾಗಿದೆ.

ಗಿರಿಜಮ್ಮ ಎಂ.ವಿ. ಅವರು ಸಿ.ಎಸ್.ರಾಮಚಂದ್ರ ಅವರ ಮಾರ್ಗದರ್ಶನದಲ್ಲಿ **"ಮಕ್ಕಳಲ್ಲಿ ಕನ್ನಡ ಭಾಷಾ ಕಲಿಕೆ"** ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ೨೦೦೭ರಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇವರು ಮಕ್ಕಳಲ್ಲಿ ಕನ್ನಡ ಭಾಷೆಯ ಕಲಿಕೆ ಹೇಗೆ ಆಗುತ್ತದೆ ಎನ್ನುವುದನ್ನು ಮಕ್ಕಳ ವಯಸ್ಸಿನ ಆಧಾರವಾಗಿ ಅಧ್ಯಯನ ಮಾಡಿದ್ದಾರೆ. ಮಕ್ಕಳ ಧ್ವನಿ, ಪದ, ಪದಪುಂಜ ಜೊತೆಗೆ ವಾಕ್ಯ ಕಲಿಕೆ ಹೇಗೆ ಉಂಟಾಗುತ್ತದೆ

ಎನ್ನುವುದನ್ನು ವಿವರಣಾತ್ಮಕವಾಗಿ ಅಧ್ಯಯನ ಮಾಡಿದ್ದಾರೆ. ವಿದ್ಯಾರ್ಥಿ ಕಲಿಕೆಯ ಮೇಲೆ ಭಾಷೆ ಮತ್ತು ಆ ಭಾಷಿಕ ಪರಿಸರ ಹೇಗೆ ಪ್ರಭಾವ ಬೀರುತ್ತದೆ ಎಂಬುದನ್ನು ಅಧ್ಯಯನ ಮಾಡಿದ್ದಾರೆ.

ವಾಗೀಶ ಎನ್.ಎಂ. ಎಂಬುವವರು **"ಪ್ರಾಥಮಿಕ ಹಂತದ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ" (ಪ್ರಚಲಿತ ಪ್ರಥಮ ಕನ್ನಡ ಭಾಷಾ ಪಠ್ಯಪುಸ್ತಕಗಳನ್ನು ಅನುಲಕ್ಷಿಸಿ)** ಎನ್ನುವ ಮಹಾಪ್ರಬಂಧವನ್ನು ಡಾ.ಅಶೋಕಕುಮಾರ ರಂಜೇರೆ ಅವರ ಮಾರ್ಗದರ್ಶನದಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೯ರಲ್ಲಿ ಸಲ್ಲಿಸಿದ್ದಾರೆ. ಇವರ ಅಧ್ಯಯನವು ಪಠ್ಯಪುಸ್ತಕಗಳ ಅಧ್ಯಯನಕ್ಕೆ ಉತ್ತಮವಾದ ಮೌಲ್ಯವನ್ನು ಒದಗಿಸಿಕೊಟ್ಟಿದೆ.

ಕನ್ನಡ ಭಾಷಾ ಪಠ್ಯಪುಸ್ತಕಗಳ ಸ್ವರೂಪ ಮತ್ತು ಅವುಗಳ ರಚನೆಯ ದೃಷ್ಟಿಯನ್ನು ಸವಿವರವಾಗಿ ಅಧ್ಯಯನಕ್ಕೊಳಪಡಿಸಿದ್ದಾರೆ. ಪಠ್ಯಪುಸ್ತಕಗಳ ರಚನೆ, ಸ್ವರೂಪ ಹಾಗೂ ಬಳಕೆಯನ್ನು ಒಳಗೊಂಡಂತೆ, ಒಂದರಿಂದ ಐದನೆಯ ತರಗತಿಯವರೆಗಿನ ರಾಜ್ಯ ಸರ್ಕಾರದ ಅಂಗೀಕಾರವಾದ ಪಠ್ಯವಸ್ತುವನ್ನು ಅಧ್ಯಯನಕ್ಕಾಗಿ ಬಳಸಿಕೊಂಡಿದ್ದಾರೆ. ಪಠ್ಯ ಪುಸ್ತಕದ ರಚನೆಯ ಹಿಂದಿನ ರಾಜಕೀಯ ಹಿತಾಸಕ್ತಿಗಳನ್ನು ಸೂಕ್ಷ್ಮವಾಗಿ ಚರ್ಚಿಸಿದ್ದಾರೆ. ಪಠ್ಯಗಳಲ್ಲಿ ಧ್ವನಿ, ಪದ, ವಾಕ್ಯಗಳ ಬಳಕೆ, ಬೋಧನೆ ಶಿಕ್ಷಕ, ವಿದ್ಯಾರ್ಥಿ ಇತ್ಯಾದಿ ಅಂಶಗಳು ಮಕ್ಕಳ ಸಾಮರ್ಥ್ಯದ ಅನುಸಾರ ಬಳಕೆಯಾಗಿದೆಯೋ ಇಲ್ಲವೋ ಎಂಬುದನ್ನು ಗಮನಿಸಿದ್ದಾರೆ. ಪ್ರಾಥಮಿಕ ಶಿಕ್ಷಣದಲ್ಲಿ ಶಿಕ್ಷಣದ ಕ್ರಮ, ಕಲಿಕಾ ಪ್ರಕ್ರಿಯೆ, ಬೋಧನಾ ವಿಧಾನಗಳು, ಪರೀಕ್ಷೆ, ಮೌಲ್ಯಮಾಪನ ಪ್ರಕ್ರಿಯೆಗಳನ್ನು ಸವಿಸ್ತಾರವಾಗಿ ಚರ್ಚೆಗೊಳಪಡಿಸಿದ್ದಾರೆ. ಭಾಷಾ ಪಠ್ಯ ಪುಸ್ತಕಗಳ ಸ್ವರೂಪ ಮತ್ತು ಬಳಕೆಯ ದೃಷ್ಟಿಯಿಂದ ಈ ಅಧ್ಯಯನ ಪ್ರಸ್ತುತತೆಯನ್ನು ಪಡೆಯುತ್ತದೆ.

ನಾಗರಾಜ ಚಿಂತ್ರಪಳ್ಳಿ ಅವರು **"ಕನ್ನಡ ಕಲಿಕೆಯ ಸಮಸ್ಯೆಗಳು: ಒಂದು ಅಧ್ಯಯನ" (ಬಳ್ಳಾರಿ ಜಿಲ್ಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ)** ಎಂಬ ಮಹಾಪ್ರಬಂಧವನ್ನು ಡಾ.ಡಿ.ಪಾಂಡುರಂಗ ಬಾಬು ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೦ ರಲ್ಲಿ ಸಲ್ಲಿಸಿದ್ದಾರೆ. ಕನ್ನಡ ಭಾಷೆಯನ್ನು ಕಲಿಯುವಾಗ ಪ್ರಧಾನವಾಗಿ ವಿದ್ಯಾರ್ಥಿಗಳು ಎದುರಿಸುತ್ತಿರುವ ತೊಂದರೆಗಳಾವುವು ಎನ್ನುವ ಸ್ವರೂಪವನ್ನು ಅಧ್ಯಯನದ ವಸ್ತುವನ್ನಾಗಿಸಿಕೊಂಡಿದ್ದಾರೆ. ಪ್ರಾದೇಶಿಕ ಭಾಷಾ ಭಿನ್ನತೆಯುಳ್ಳ ಬಳ್ಳಾರಿ ಜಿಲ್ಲೆಯನ್ನು ಅಧ್ಯಯನದ ವ್ಯಾಪ್ತಿಗೊಳಪಡಿಸಿ ಏಳು ತಾಲ್ಲೂಕುಗಳ ಸರ್ಕಾರಿ ಹಿರಿಯ

ಪ್ರಾಥಮಿಕ ಶಾಲಾ ಮಕ್ಕಳ ಕನ್ನಡ ಕಲಿಕೆ ಸಮಸ್ಯೆಗಳನ್ನು ಕುರಿತು, ಕ್ಷೇತ್ರಕಾರ್ಯವನ್ನೊಳಗೊಂಡಂತೆ ಮಾಹಿತಿ ಸಂಗ್ರಹಿಸಿ, ವಿವರಣಾತ್ಮಕವಾಗಿ ವಿಶ್ಲೇಷಿಸಿದ್ದಾರೆ. ಪ್ರಮುಖವಾಗಿ ಕನ್ನಡ ಮಾತೃ ಭಾಷೆಯುಳ್ಳ ಮಕ್ಕಳು ಕನ್ನಡವನ್ನು ಕಲಿಯುವ ಸಂದರ್ಭದಲ್ಲಿ ಎದುರಿಸುತ್ತಿರುವ ಬರವಣಿಗೆ ಮತ್ತು ಓದುಗಾರಿಕೆಯ ಸಮಸ್ಯೆಗಳನ್ನು ಅಧ್ಯಯನಕ್ಕೆ ಒಳಪಡಿಸಿ ಸೂಕ್ತ ಕಾರಣಗಳನ್ನು ಪತ್ತೆಹಚ್ಚಿ ಪರಿಹಾರೋಪಾಯಗಳನ್ನು ಸೂಚಿಸಿದ್ದಾರೆ. ಇವರ ಅಧ್ಯಯನವು ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಬೋಧಿಸುವ ಶಿಕ್ಷಕರು ಹಾಗೂ ಕಲಿಕೆಯ ಸಂದರ್ಭದಲ್ಲಿ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡಲು ಪೂರಕ ಆಕರವಾಗಿವೆ. ಕನ್ನಡ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆ ಕುರಿತಾದ ಅಧ್ಯಯನ, ಅವರ ಅಧ್ಯಯನಕ್ಕಿಂತಲೂ ಭಿನ್ನತೆಯನ್ನು ಒಳಗೊಂಡಿರುತ್ತದೆ. ಯಾವ ರೀತಿ ಅಧ್ಯಯನದ ಚೌಕಟ್ಟನ್ನು ವಿಸ್ತೃತಗೊಳಿಸಿಕೊಳ್ಳಬೇಕು. ಅದರ ಇತಿಮಿತಿಗಳೇನು ಎಂಬುದನ್ನು ತಿಳಿಯುವಲ್ಲಿ ಮಾರ್ಗ ಸೂಚಿಯಾಗಿದೆ.

ಚಲಪತಿ ಆರ್. ಅವರು **"ಪಠ್ಯಪುಸ್ತಕಗಳು ಮತ್ತು ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು"** ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಅಶೋಕಕುಮಾರ ರಂಜೇರೆ ಅವರ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೧೦ರಲ್ಲಿ ಸಲ್ಲಿಸಿದ್ದಾರೆ. ಒಟ್ಟು ಎಂಟು ಅಧ್ಯಾಯಗಳನ್ನು ಮತ್ತು ಒಂಭತ್ತು ಅನುಬಂಧಗಳನ್ನು ಒಳಗೊಂಡಿದೆ. ಇಡೀ ಪ್ರಬಂಧದುದ್ದಕ್ಕೂ ಇರುವ ಭಾಷಾ ಬಳಕೆಯ ಕ್ರಮವೇ ಪ್ರಬಂಧದ ಸೈದ್ಧಾಂತಿಕ ನಿಲುವಿಗೆ ಕನ್ನಡಿ ಹಿಡಿಯುತ್ತದೆ. ಪದವಿ ಕನ್ನಡ ಕಲಿಕೆಯಲ್ಲಿನ ತೊಡಕುಗಳನ್ನು ಗುರುತಿಸುತ್ತಾ, ವಸಾಹತು ಜ್ಞಾನ ಕನ್ನಡ ಕಲಿಕೆಯಲ್ಲಿ ನಿರ್ದಿಷ್ಟ ವರ್ಗ ಮತ್ತು ಜಾತಿಗಳ ಹಿತಾಸಕ್ತಿಯನ್ನು ಜೊತೆಗೆ ಮಾರುಕಟ್ಟೆಯ ಆಟವನ್ನು ಕಟ್ಟಿಕೊಳ್ಳಲು ಹೇಗೆ ಪೂರಕವಾಗಿದೆ ಎನ್ನುವುದನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ತೊಡಕುಗಳನ್ನು ಬಿಡಿಸಲು ಅಗತ್ಯವಾದ ಪರಿಹಾರಗಳನ್ನು ಶೋಧಿಸಲು ಕರ್ನಾಟಕದ ವಿವಿಧ ಕ್ಷೇತ್ರಗಳಲ್ಲಿನ ಶಿಕ್ಷಣ ತಜ್ಞರನ್ನು ಸಂದರ್ಶಿಸಿ ಅವರ ಅಭಿಪ್ರಾಯಗಳನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ. ಪಠ್ಯಪುಸ್ತಕಗಳು ಎಂತಹ ಜ್ಞಾನ ಕೌಶಲಗಳನ್ನು ನೀಡುತ್ತಿವೆ. ಕನ್ನಡ ಭಾಷೆಯು ಎದುರಿಸುತ್ತಿರುವ ಆತಂಕಗಳು, ಸಂದೇಹಗಳು ಸವಾಲುಗಳು ಯಾಕೆ ಹುಟ್ಟಿಕೊಂಡಿವೆ? ಕನ್ನಡ ಬೋಧಕರನ್ನು ಸಮಾಜ ಯಾವ ರೀತಿಯಾಗಿ ಹೊಣೆಯಾಗಿಸುತ್ತಿದೆ ಎಂಬುದನ್ನು ಚರ್ಚಿಸಿದ್ದಾರೆ. ವಿದ್ಯಾರ್ಥಿ, ಬೋಧಕ ಮತ್ತು ಕಲಿಕೆಯ ಸಂಬಂಧಗಳನ್ನು ವಿವರಿಸಿದ್ದಾರೆ. ಬರವಣಿಗೆಯು ವಿಮರ್ಶಾತ್ಮಕವಾಗಿದ್ದು, ಸಮೀಕ್ಷೆ, ವಿಶ್ಲೇಷಣೆ, ಮತ್ತು ವಿಮರ್ಶೆಯ ಮೂಲಕ ಪಠ್ಯಗಳು ಮತ್ತು ಪಠ್ಯಕ್ಕೆ ಅಳವಡಿಸಿದ ಭಾಷೆ, ಸಾಹಿತ್ಯ, ಸಂಸ್ಕೃತಿ, ಪ್ರಸ್ತುತ ಪದವಿ ಪಠ್ಯಗಳಲ್ಲಿನ ಮಿತಿಗಳನ್ನು

ಪಠ್ಯಕ್ರಮಗಳ ಸ್ವರೂಪವನ್ನು ಸಾಮಾಜಿಕ ಹೊಣೆಗಾರಿಕೆಯು ತೊಡಕುಗಳನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

ಭೀಮಣ್ಣ ಮೇಟಿ ಅವರು **"ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು"** ಎಂಬ ವಿಷಯ ಕುರಿತು ಪಿಎಚ್.ಡಿ ಮಹಾಪ್ರಬಂಧವನ್ನು ಡಾ.ಪಿ.ಮಹಾದೇವಯ್ಯ ಅವರ ಮಾರ್ಗದರ್ಶನದಲ್ಲಿ ೨೦೧೦ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇದರಲ್ಲಿ ಮುಖ್ಯವಾಗಿ ಗುಲಬರ್ಗಾ ಜಿಲ್ಲೆಯ ಉರ್ದು ಭಾಷಿಕ ಪ್ರೌಢಶಾಲಾ ಮಕ್ಕಳನ್ನು ಅನುಲಕ್ಷಿಸಿ ಅಧ್ಯಯನ ಕೈಗೊಂಡಿದ್ದಾರೆ. ಮಕ್ಕಳಲ್ಲಿನ ಓದಿನ ಸಮಸ್ಯೆಗಳು, ಬರವಣಿಗೆಯ ಸಮಸ್ಯೆಗಳು, ಗುಣಿತಾಕ್ಷರಗಳು ಮತ್ತು ಒತ್ತಕ್ಷರಗಳನ್ನು ಗುರುತಿಸಿದ್ದಾರೆ. ಪದಾದಿ, ಪದಮಧ್ಯ, ಪದಾಂತ್ಯ ಪರಿಸರದಲ್ಲಿ ಮಕ್ಕಳು ಮಾಡಿದ ದೋಷಗಳನ್ನು ಉದಾಹರಣೆಗಳ ಮೂಲಕ ಅಂಕಿ ಸಂಖ್ಯೆಗಳಲ್ಲಿ ನೀಡಿದ್ದಾರೆ. ಇದರಿಂದ ಉರ್ದು ಭಾಷಾ ಪ್ರೌಢಶಾಲೆಗಳ ಮಕ್ಕಳು ಸ್ವರ, ಅರ್ಧಸ್ವರ, ವ್ಯಂಜನಗಳ ದೋಷಗಳನ್ನು ಓದಿನ ಮೂಲಕ ಬರವಣಿಗೆಯ ಸಂದರ್ಭದಲ್ಲಿ ಯಾವ ರೀತಿ ಮಾಡುತ್ತಾರೆ ಎಂಬುದನ್ನು ದೃಢಪಡಿಸಿದ್ದಾರೆ. ಜೊತೆಗೆ ಓದು ಮತ್ತು ಬರವಣಿಗೆಯಲ್ಲಿ ವ್ಯಾಕರಣಾಂಶಗಳನ್ನು ವಿದ್ಯಾರ್ಥಿ ತಪ್ಪು ಮಾಡುವ ಬಗೆಯನ್ನು ಗುರುತಿಸಿದ್ದಾರೆ. ಅಲ್ಲದೆ ಅವುಗಳ ಪರಿಹಾರಕ್ಕಾಗಿ ಕೈಗೊಳ್ಳಬಹುದಾದ ಅಂಶಗಳ ಪಟ್ಟಿಯನ್ನು ನೀಡಿದ್ದಾರೆ. ಈ ಅಧ್ಯಯನದಿಂದ ತಿಳಿಯಬಹುದಾದ ಅಂಶ ಬೋಧನೆ ಮತ್ತು ಪಠ್ಯಕ್ರಮ ರಚನೆಯಲ್ಲಿ ಬದಲಾವಣೆಗಳಾಗಬೇಕಾಗಿದೆ. ಮಕ್ಕಳ ಮಾನಸಿಕ ಸಾಮರ್ಥ್ಯಕ್ಕೆ ಅನುಸಾರವಾಗಿ ಕಲಿಕೆ ಮತ್ತು ಬೋಧನಾ ವಿಧಾನಗಳು ಸುಧಾರಿಸಬೇಕಾಗಿದೆ. ಸರಳತೆಯಿಂದ ಸಂಕೀರ್ಣತೆಯೆಡೆಗೆ ಸಾಗಬೇಕಾಗಿದೆ ಎಂಬುದನ್ನು ಭೀಮಣ್ಣ ಮೇಟಿ ಅವರ ಅಧ್ಯಯನದಿಂದ ಸ್ಪಷ್ಟವಾಗಿ ತಿಳಿಯಬಹುದಾಗಿದೆ.

ವೀರಾಕ್ಷಿ ಅವರು **"ಕರ್ನಾಟಕದಲ್ಲಿ ಭಾಷಾ ಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು"** (ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ) ಎಂಬ ಮಹಾಪ್ರಬಂಧವನ್ನು ಡಾ.ಅಶೋಕಕುಮಾರ ರಂಜೇರೆ ಅವರ ಮಾರ್ಗದರ್ಶನದಲ್ಲಿ ೨೦೧೦ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಪ್ರಾಥಮಿಕ ಶಿಕ್ಷಣವು ಮಾತೃಭಾಷೆಯಲ್ಲಿ ನೀಡಬೇಕೆಂಬ ಚರ್ಚೆಯನ್ನು ಮುಂದುವರಿಸುತ್ತಾ ಕನ್ನಡ ಮಾಧ್ಯಮಕ್ಕೆ ಅಧ್ಯಯನದ ವ್ಯಾಪ್ತಿಯನ್ನು ಗುರುತಿಸಿದ್ದಾರೆ. ಮಾಧ್ಯಮ ಕುರಿತಾದ ಹತ್ತು ಹಲವು ವಿಷಯಗಳಿಗೆ ಉದಾಹರಣೆಗಳ ಮೂಲಕ ವಿಷಯ ವಸ್ತುವನ್ನು ಬಿಡಿಬಿಡಿಯಾಗಿ ಕಟ್ಟಿಕೊಟ್ಟಿದ್ದಾರೆ.

ಕನ್ನಡ ಭಾಷೆಯನ್ನು ಒಂದು ವಿಷಯವಾಗಿ ಕಲಿಸುವುದು ಮತ್ತು ಭಾಷೆಯನ್ನು ಒಂದು ಮಾಧ್ಯಮವನ್ನಾಗಿ ಕಲಿಸುವ ಚರ್ಚೆಗಳು ಪ್ರಾಥಮಿಕ ಶಾಲೆಗಳಲ್ಲಿ ನಡೆದಿವೆ.

ಭಾಷಾ ಮಾಧ್ಯಮವನ್ನು ಕುರಿತು ಚರ್ಚೆ ನಡೆಸುವ ಶಿಕ್ಷಣ ಚಿಂತಕರು, ಶಿಕ್ಷಕರು ಮತ್ತು ಕಲಿಯುವ ಮಕ್ಕಳನ್ನು ದೃಷ್ಟಿಯಲ್ಲಿಟ್ಟುಕೊಂಡು ಚರ್ಚೆ ನಡೆಸುತ್ತಿಲ್ಲ. ಅವರವರ ಅನುಕೂಲಕ್ಕೆ ತಕ್ಕಂತೆ ಚಿಂತಕರು ಚಿಂತನೆಯನ್ನು ಮಾಡುತ್ತಿದ್ದಾರೆ. ವೀರಾಕ್ಷಿ ಅವರ ಅಧ್ಯಯನದ ಪ್ರಮುಖ ಉದ್ದೇಶ ಬ್ರಿಟೀಷ್ ಕಾಲದಿಂದ ಇಂದಿನವರೆಗೆ ಭಾಷಾ ಮಾಧ್ಯಮದ ವಾಗ್ವಾದಗಳನ್ನು ಕ್ರೋಢೀಕರಿಸಿ ಅಧ್ಯಯನ ಮಾಡುವುದಾಗಿದೆ. ಒಟ್ಟಾರೆಯಾಗಿ ಈ ಅಧ್ಯಯನದ ವಸ್ತು ಇಂದಿಗೂ ಪ್ರಸ್ತುತವಾಗಿದ್ದು ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ಒದಗಿಸಿದೆ.

ಪಾರ್ವತಮ್ಮ ಜಿ.ಹೆಚ್. ಅವರು **"ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಮೂಲಭೂತ ಗ್ರಹಿಕೆಗಳ ಮತ್ತು ಕೌಶಲಗಳ ಸಾಧನೆ"** ಎಂಬ ವಿಷಯ ಕುರಿತ ಪಿಎಚ್.ಡಿ ಮಹಾಪ್ರಬಂಧವನ್ನು ಡಾ.ಕೆ.ಯಶೋಧರ ಅವರ ಮಾರ್ಗದರ್ಶನದಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ೨೦೧೦ರಲ್ಲಿ ಸಲ್ಲಿಸಿದ್ದಾರೆ. ಪ್ರಾಥಮಿಕ ಶಾಲೆಗಳ ಮೂಲಭೂತ ಗ್ರಹಿಕೆಗಳಿಂದ ಯಾವ ಯಾವ ವಿಷಯಗಳ ಆಧಾರಿತವಾಗಿ ಕೌಶಲಗಳನ್ನು ಸಾಧನೆ ಮಾಡಲು ಶಿಕ್ಷಣ ವ್ಯವಸ್ಥೆ ಯೋಜನೆಯನ್ನು ಮಾಡಿಕೊಂಡಿದೆ ಎಂಬುದನ್ನು ವಿವರಿಸಿದ್ದಾರೆ. ವಾರ್ಷಿಕವಾಗಿ ಗಣನೀಯ ಸಾಧನೆಯನ್ನು ಮಾಡಿದ ವಿದ್ಯಾರ್ಥಿಗಳ ಅಂಕಿ ಅಂಶಗಳನ್ನು ನೀಡುತ್ತಾ ಸುಧಾರಣೆಯಾದ ಅಂಶಗಳು ಮತ್ತು ತೊಡಕಾದ ಅಂಶಗಳನ್ನು ವಿವರಿಸಿದ್ದಾರೆ.

ಮಂಜುಳ ಎನ್.ಕೆ. ಅವರು **"ಮಕ್ಕಳಲ್ಲಿ ವಾಕ್ಯ ರಚನಾ ನಿಯಮಗಳ ಬೆಳವಣಿಗೆ"** ಎಂಬ ಶೀರ್ಷಿಕೆಯಡಿಯಲ್ಲಿ ಮಹಾಪ್ರಬಂಧವನ್ನು ಡಾ.ಕೆ.ವಿ.ನಾರಾಯಣ ಅವರ ಮಾರ್ಗದರ್ಶನದಲ್ಲಿ ಕನ್ನಡ ಮಾತೃಭಾಷೆಯ ಮಕ್ಕಳನ್ನು ಅನುಲಕ್ಷಿಸಿ ಅಧ್ಯಯನವನ್ನು ಮಾಡಿ ೨೦೧೦ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಇವರ ಈ ಅಧ್ಯಯನದಲ್ಲಿ ಮಕ್ಕಳು ಭಾಷಾ ಸಾಮರ್ಥ್ಯವನ್ನು ಹೇಗೆ ಪಡೆದುಕೊಳ್ಳಲು ಪ್ರಯತ್ನಿಸುತ್ತಾರೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ವಾಕ್ಯ ರಚನಾ ನಿಮಯಗಳ ಜೊತೆಗೆ ವಾಕ್ಯ ರಚನೆಯನ್ನು ಹೇಗೆ ಮಾಡುತ್ತಾರೆ ಎಂಬ ಅಂಶಗಳನ್ನು ತಮ್ಮ ಪ್ರಬಂಧದಲ್ಲಿ ವಿವರಣಾತ್ಮಕವಾಗಿ ವಿಶ್ಲೇಷಿಸಿದ್ದಾರೆ. ಮೆದುಳಿನ ರಚನೆ ಮತ್ತು ಭಾಷೆಯ ಜೊತೆ ಮೆದುಳಿನ ಸಂಬಂಧವನ್ನು ಕುರಿತು ವಿಶ್ಲೇಷಿಸಿದ್ದಾರೆ. ಮಕ್ಕಳು ಯಾವ ರೀತಿ ಭಾಷಾ ಸಾಮರ್ಥ್ಯವನ್ನು ಬೆಳೆಸಿಕೊಳ್ಳುತ್ತಾರೆ ಎಂಬುದನ್ನು ವಿವರಿಸಿದ್ದಾರೆ. ಮಗುವಿನ ಪರಿಸರದ ಭಾಷೆಯ ಗ್ರಾಂಥಿಕ ರೂಪದಲ್ಲಿ ನಾಮಪದ ಕ್ರಿಯಾಪದ, ಸರ್ವನಾಮ, ವಿಶೇಷಣಗಳಂತಹ ಪದಗಳನ್ನು ಮಕ್ಕಳು ವಯೋಮಾನಕ್ಕೆ ತಕ್ಕಂತೆ ಹೇಗೆ ಉಚ್ಚರಿಸುತ್ತಾರೆ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ.

ಪ್ರಕಾಶ್ ಬಿ. ಅವರು **"ದಕ್ಷಿಣ ಕನ್ನಡ ಪ್ರಾಥಮಿಕ ಮತ್ತು ಶಿಕ್ಷಣದ ಕನ್ನಡ ಪಠ್ಯಪುಸ್ತಕಗಳ ರಾಚನಿಕ ಸಾಹಿತ್ಯದ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ"** ಎಂಬ ಮಹಾಪ್ರಬಂಧವನ್ನು ಪ್ರೊ.ಉಪ್ಪಂಗಳ ರಾಮಭಟ್ಟ ಅವರ ಮಾರ್ಗದರ್ಶನದಲ್ಲಿ ೨೦೧೦ರಲ್ಲಿ ಮಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುತ್ತಾರೆ. ಸಂಶೋಧಕರು ಪ್ರಾಚೀನ ಕಾಲದಲ್ಲಿ ಪಠ್ಯಪುಸ್ತಕಗಳು ಹೇಗೆ ರಚನೆಗೊಂಡಿವೆ. ಅವುಗಳ ಭಾಷಾ ಬಳಕೆ, ವಿಷಯ ವಸ್ತುಗಳ ಬಳಕೆ ಹೇಗೆ ಯಾವ ಉದ್ದೇಶದ ಹಿನ್ನೆಲೆಯಲ್ಲಿ ರಚನೆಯಾಗಿವೆ. ಸ್ವಾತಂತ್ರ್ಯಪೂರ್ವ ಕಾಲದಲ್ಲಿದ್ದ ಶಿಕ್ಷಣದ ಭಾಷೆ, ವಸ್ತುಗಳ ರಚನೆ ನಂತರ ಹೇಗೆ ಬದಲಾವಣೆಗೊಂಡಿವೆ ಅವುಗಳ ಉದ್ದೇಶವೇನು? ಅಂದಿನ ಸಾಮಾಜಿಕ ಅವಶ್ಯಕತೆಗಳಿಗೆ ತಕ್ಕಂತೆ ಪಠ್ಯಪುಸ್ತಕಗಳು ರಚನೆಯಾಗಿವೆಯೇ? ಎಂಬುದನ್ನು ಚರ್ಚಿಸಿದ್ದಾರೆ.

ಮೇಲ್ಕಂಡಂತೆ ಈ ಎಲ್ಲಾ ಪಿಎಚ್.ಡಿ ಮಹಾಪ್ರಬಂಧಗಳನ್ನು ಗಮನಿಸಿದಾಗ ನಾಗರಾಜ ಚಿಂತ್ರಪಳ್ಳಿ ಅವರ ಕನ್ನಡ ಕಲಿಕೆಯ ಸಮಸ್ಯೆಗಳು ಎನ್ನುವ ಅಧ್ಯಯನದಲ್ಲಿ ಕಲಿಕಾ ಸಮಸ್ಯೆಗಳನ್ನು ಗುರ್ತಿಸಿ ಪರಿಹಾರಗಳನ್ನು ತಿಳಿಸಿದ್ದಾರೆ. ಸೋಮಕ್ಕ ಎಂ., ಭೀಮಣ್ಣ ಮೇಟಿ ಅವರ ಮಹಾಪ್ರಬಂಧಗಳು ಒಂದು ಭಾಷಿಕ ವರ್ಗದ ವಿದ್ಯಾರ್ಥಿಗಳ ಮೇಲೆ ಭಾಷಿಕ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಲಂಬಾಣಿ, ಉರ್ದು ಮತ್ತು ಕನ್ನಡ ಭಾಷಿಕ ಮಕ್ಕಳ ಕನ್ನಡ ಕಲಿಕೆಯನ್ನು ಭಾಷಿಕವಾಗಿ ಚರ್ಚಿಸಿದ್ದಾರೆ. ಪ್ರಕಾಶ್ ಬಿ., ಚಲಪತಿ ಆರ್., ವಾಗೀಶ್, ನಂದ ಇಟಕರ್ ಅವರ ಮಹಾಪ್ರಬಂಧಗಳು ಸಹ ಕನ್ನಡ ಭಾಷಾ ಕಲಿಕೆ, ಬೋಧನೆ ಮತ್ತು ಪಠ್ಯ ಪುಸ್ತಕಗಳ ರಚನೆ, ಸ್ವರೂಪ ಬಳಕೆ ಕುರಿತು ತಿಳಿದುಕೊಳ್ಳಲು ಪೂರಕವಾದ ಮಾಹಿತಿಗಳನ್ನು ಒದಗಿಸುತ್ತವೆ. ಪ್ರಾಥಮಿಕ ಹಂತದಲ್ಲಿ ಕನ್ನಡ ಕಲಿಕೆ, ಬೋಧನೆ ಕುರಿತಾದ ಹಲವಾರು ಅಂಶಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡಿದ್ದಾರೆ. ಪಠ್ಯ ಪುಸ್ತಕಗಳ ಕ್ರಮಬದ್ಧ ಅಧ್ಯಯನಕ್ಕೆ ಇವರುಗಳ ಮಹಾಪ್ರಬಂಧಗಳು ಮಾಹಿತಿಯನ್ನು ನೀಡುತ್ತವೆ.

**೨.೨ ಎಂ.ಫಿಲ್ ಸಂಪ್ರಬಂಧಗಳು**

ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಪ್ರಬಂಧಗಳನ್ನು ಅಧ್ಯಯನಕ್ಕೆ ಪೂರಕ ಮಾಹಿತಿಗಾಗಿ ಬಳಸಿಕೊಳ್ಳಲಾಗಿದೆ.

ಬಸವರಾಜ ಕೋಡಗುಂಟಿ ಅವರು **"ಮಕ್ಕಳ ಭಾಷೆ ಒಂದು ಅಧ್ಯಯನ"** ಎಂಬ ವಿಷಯ ಕುರಿತು ಡಾ.ಸಂಗಮೇಶ ಸವದತ್ತಿಮಠ ಅವರ ಮಾರ್ಗದರ್ಶನದಲ್ಲಿ ಗುಲಬರ್ಗಾ

ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ ಎಂ.ಫಿಲ್ ಪದವಿಯನ್ನು ಪಡೆದಿದ್ದಾರೆ. ಇದರಲ್ಲಿ ಮುಖ್ಯವಾಗಿ ಮಕ್ಕಳ ಭಾಷೆಯ ವಿಕಾಸದ ಹಂತಗಳು ಹೇಗೆ ಪ್ರಾರಂಭವಾಗುತ್ತವೆ ಎಂಬುದನ್ನು ಉದಾಹರಣೆಗಳ ಮೂಲಕ ಚರ್ಚಿಸಿದ್ದಾರೆ. ಅಲ್ಪಪ್ರಾಣ, ಮಹಾಪ್ರಾಣ, ಹ್ರಸ್ವಸ್ವರ, ದೀರ್ಘಸ್ವರ, ವ್ಯಂಜನಗಳು ಮುಂತಾದ ಅಂಶಗಳ ಬಗ್ಗೆ ವಿವರಿಸಿದ್ದಾರೆ. ಜೊತೆಗೆ ಪಠ್ಯಪುಸ್ತಕಗಳಲ್ಲಿ ಮಹಾಪ್ರಾಣ ಇತ್ಯಾದಿ ಪದಗಳನ್ನು ಹೇಗೆ ಉಚ್ಚರಿಸುತ್ತಾರೆ ಮತ್ತು ಅವುಗಳಲ್ಲಿನ ವ್ಯತ್ಯಾಸಗಳೇನು ಎನ್ನುವುದನ್ನು ಗುರುತಿಸಿದ್ದಾರೆ.

ಓಂಪ್ರಕಾಶ್ ಅವರು **"ಬಳ್ಳಾರಿ ವ್ಯಾವಹಾರಿಕ ಕನ್ನಡ ಉಚ್ಚಾರಣೆ ಮತ್ತು ಧ್ವನಿ ನಿಯಮಗಳು"** ಎಂಬ ವಿಷಯವನ್ನು ಕುರಿತು ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ೨೦೧೦ರಲ್ಲಿ ಸಂಪ್ರಬಂಧವನ್ನು ಸಲ್ಲಿಸಿದ್ದಾರೆ. ಬಳ್ಳಾರಿ ಪ್ರದೇಶದಲ್ಲಿ ವ್ಯಾವಹಾರಿಕವಾಗಿ ಕನ್ನಡ ಉಚ್ಚಾರಣೆ ಕುರಿತಾಗಿ ಅಧ್ಯಯನವನ್ನು ಕೈಗೊಂಡು ವಿವಿಧ ಉದಾರಣೆಗಳೊಂದಿಗೆ ವಿಷಯವನ್ನು ಸ್ಪಷ್ಟಪಡಿಸುವ ಪ್ರಯತ್ನವನ್ನು ಮಾಡಿದ್ದಾರೆ.

ಸಿದ್ದಲಿಂಗಪ್ಪ ಎನ್. ಅವರು **"ಪ್ರೌಢ ಶಾಲಾ ಮಕ್ಕಳ ಕನ್ನಡ ಬಳಕೆಯಲ್ಲಿ ಕಾಗುಣಿತ ದೋಷಗಳು"** ಎಂಬ ವಿಷಯ ಕುರಿತು ಡಾ.ಕೃಷ್ಣಪರಮೇಶ್ವರ ಭಟ್ಟ ಅವರ ಮಾರ್ಗದರ್ಶನದಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿ, ಎಂ.ಫಿಲ್ ಪದವಿಯನ್ನು ೨೦೧೦ರಲ್ಲಿ ಪಡೆದಿದ್ದಾರೆ. ಪ್ರಶ್ನಾವಳಿಯನ್ನು ಸಿದ್ಧಪಡಿಸಿ ಅವುಗಳ ಮೂಲಕ ಆಂಗ್ಲ ಮತ್ತು ಕನ್ನಡ ಮಾಧ್ಯಮದ ಮಕ್ಕಳ ಕನ್ನಡ ಬಳಕೆಯಲ್ಲಿ ಮಾಡುವ ದೋಷಗಳ ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಪ್ರೌಢಶಾಲೆಯಲ್ಲಿ ವಿದ್ಯಾರ್ಥಿಗಳು ಮಾಡುವ ದೋಷಗಳನ್ನು ಪಟ್ಟಿ ಮಾಡಿದ್ದಾರೆ. ಈ ಅಧ್ಯಯನದಿಂದ ಇಂಗ್ಲೀಷ್ ಮಾಧ್ಯಮದ ಮಕ್ಕಳು ಕನ್ನಡ ಕಲಿಕೆಯಲ್ಲಿ ಹೆಚ್ಚು ದೋಷಗಳನ್ನು ಮಾಡುತ್ತಾರೆ ಎಂಬುದನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಪ್ರೌಢಶಾಲೆಯಲ್ಲಿ ವಿದ್ಯಾರ್ಥಿಗಳು ಮಾಡುವ ದೋಷಗಳನ್ನು ಪಟ್ಟಿ ಮಾಡಿದ್ದಾರೆ.

ಕಾಗುಣಿತ ದೋಷಗಳಲ್ಲಿ ಹ್ರಸ್ವಸ್ವರ, ದೀರ್ಘಸ್ವರ ಹಾಗೂ ಮಹಾಪ್ರಾಣ, ಅಲ್ಪಪ್ರಾಣ, ಒತ್ತಕ್ಷರಗಳಲ್ಲಿ ಮಾಡುವ ದೋಷಗಳನ್ನು ಗುರುತಿಸಿದ್ದಾರೆ. ಆಂಗ್ಲ ಮಾಧ್ಯಮ ಮತ್ತು ಕನ್ನಡ ಮಾಧ್ಯಮದ ಮಕ್ಕಳನ್ನು ಅನುಲಕ್ಷಿಸಿ ಅಧ್ಯಯನವನ್ನು ಕೈಗೊಂಡಿದ್ದಾರೆ. ಕಾಗುಣಿತದಲ್ಲಿ ಮಾಡುವ ದೋಷಗಳು, ದೋಷಗಳಿಗೆ ಕಾರಣಗಳೇನು? ಎಂಬುದನ್ನು ಸಮೀಕ್ಷಾ ವರದಿಯ ಮೂಲಕ ವಿಶ್ಲೇಷಿಸಿದ್ದಾರೆ. ಈ ಅಂಶಗಳಲ್ಲಿ ಯಾವ ಮಾಧ್ಯಮದ ಮಕ್ಕಳು ಹೆಚ್ಚು ದೋಷಗಳನ್ನು ಮಾಡುತ್ತಾರೆ ಎಂಬುದನ್ನು ವಿವರಿಸಿದ್ದಾರೆ. ಈ ಅಧ್ಯಯನದಿಂದ

ಇಂಗ್ಲಿಷ್ ಕಲಿಕೆಯ ಮಕ್ಕಳು ಹೆಚ್ಚು ದೋಷಗಳನ್ನು ಮಾಡುತ್ತಾರೆ ಎಂಬುದು ತಿಳಿದು ಬರುತ್ತದೆ.

ನಾರಾಯಣ ಡಿ.ಎಸ್. ಅವರು **"ಇಂಗ್ಲೀಷ್ ಕನ್ನಡ ಸಂಬಂಧ ಕುರಿತ ಚಿಂತನೆಗಳು"** ಎನ್ನುವ ಎಂ.ಫಿಲ್ ಕಿರುಪ್ರಬಂಧವನ್ನು ೨೦೧೦ರಲ್ಲಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಪ್ರಬಂಧದಲ್ಲಿ ಅಧ್ಯಯನಕಾರರು ಕರ್ನಾಟಕದಲ್ಲಿ ಕನ್ನಡ ಭಾಷೆ ಮತ್ತು ವಸಾಹತುಶಾಹಿ ಆಗಮನದಿಂದಾದ ಆಂಗ್ಲಭಾಷೆ ಇವೆರಡು ಭಾಷೆಗಳ ನಡುವಿನ ಸಂಬಂಧವನ್ನು ಭಾಷಿಕ ಪ್ರಾದೇಶಿಕ, ರಾಜಕೀಯ, ಆಡಳಿತ ಹಾಗೂ ಶೈಕ್ಷಣಿಕ ಹಿನ್ನೆಲೆಯಲ್ಲಿ ತಾತ್ವಿಕವಾಗಿ ಅಧ್ಯಯನ ಮಾಡಿದ್ದಾರೆ.

ಬ್ರಿಟೀಷರ ಆಳ್ವಿಕೆಯ ಕಾಲದಲ್ಲಿ ಮಿಶನರಿಗಳು, ಪ್ರಾದೇಶಿಕ ಭಾಷೆಗಳಲ್ಲಿ ಶಾಲೆಗಳನ್ನು ತೆರೆದರು. ಜೊತೆಗೆ ಮಿಶನ್ ಸ್ಕೂಲ್‌ಗಳು, ಕಾನ್ವೆಂಟ್ ಶಾಲೆಗಳನ್ನು ತೆರೆದರು. ಈ ರೀತಿ ಪ್ರಾದೇಶಿಕ ಭಾಷಾ ಮಾಧ್ಯಮ ಶಾಲೆಗಳ ಮತ್ತು ಇಂಗ್ಲೀಷ್ ಮಾಧ್ಯಮ ಶಾಲೆಗಳು ಎಂದು ಎರಡು ರೀತಿಯಲ್ಲಿ ಶಿಕ್ಷಣ ಬೆಳೆದು ಬರಲು ಪ್ರಾರಂಭವಾಯಿತು. ಈ ಬಗೆಯ ಶಿಕ್ಷಣದಿಂದ ಜನರ ಮನೋಭಾವನೆಗಳಲ್ಲಿಯೂ ಸಹ ಬದಲಾವಣೆಗಳು ಕಂಡು ಬರತೊಡಗಿದವು ಎನ್ನುವುದನ್ನು ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಇವರ ಸಂಶೋಧನೆಯು ಬ್ರಿಟೀಷರ ಕಾಲದಲ್ಲಿ ಇಂಗ್ಲೀಷ್ ಮಾಧ್ಯಮ ಬೆಳೆದು ಬಂದ ಬಗೆ ಅದಕ್ಕೆ ಕಾರಣಗಳೇನು? ಪರಿಣಾಮಗಳೇನು ಎಂಬುದನ್ನು ವಿಶ್ಲೇಷಿಸಿದ್ದಾರೆ.

**೨.೩ ಎಂ.ಇಡಿ ಕಿರುಪ್ರಬಂಧಗಳು**

ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣದ ಸ್ನಾತಕೋತ್ತರ ಪದವಿಗಾಗಿ ಸಲ್ಲಿಸಿದ ಎಂ.ಇಡಿ ಕಿರುಪ್ರಬಂಧಗಳನ್ನು ಅಧ್ಯಯನಕ್ಕೆ ಪೂರಕ ಮಾಹಿತಿಗಾಗಿ ಬಳಸಿಕೊಳ್ಳಲಾಗಿದೆ.

ಮೀನಾ ಎಂಬುವವರು **"೭ನೇ ತರಗತಿಯ ಕನ್ನಡ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಬರವಣಿಗೆಯಲ್ಲಿ ಮಾಡುವ ಕಾಗುಣಿತ ದೋಷಗಳ ಅಧ್ಯಯನ ಮತ್ತು ನಿವಾರಣೋಪಾಯಗಳ ಮೌಲ್ಯ ನಿರ್ಧಾರ"** ಎಂಬ ಕಿರು ಪ್ರಬಂಧವನ್ನು ಎಂ.ಇಡಿ ಪದವಿಗಾಗಿ ಲೋಕೇಶಪ್ಪ ಜಿ.ಎಸ್. ಅವರ ಮಾರ್ಗದರ್ಶನದಲ್ಲಿ ಕುವೆಂಪು ವಿಶ್ವವಿದ್ಯಾಲಯಕ್ಕೆ ೨೦೦೫ರಲ್ಲಿ ಸಲ್ಲಿಸಿದ್ದಾರೆ. ಈ ಅಧ್ಯಯನದಲ್ಲಿ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗಿಂತ ಆಂಗ್ಲ ಮಾಧ್ಯಮಗಳಲ್ಲಿ ಬರೆವಣಿಗೆಯ ದೋಷಗಳನ್ನು ಗುರುತಿಸಿದ್ದಾರೆ. ಆಂಗ್ಲ ಮಾಧ್ಯಮದ ಪ್ರಭಾವವನ್ನು ಕುರಿತು ವಿವರಿಸಿದ್ದಾರೆ. ಈ ಪ್ರಬಂಧದಲ್ಲಿ ದ್ವಿತೀಯ ಭಾಷೆಯಾಗಿ

ಕನ್ನಡವನ್ನು ಕಲಿಯುವ ಸಂದರ್ಭದಲ್ಲಿ ಉಂಟಾಗುವ ದೋಷಗಳನ್ನು ಗುರುತಿಸಿದ್ದಾರೆ. ಪ್ರಶ್ನಾವಳಿಗಳನ್ನು ನೀಡುವುದರ ಮೂಲಕ ಕಾಗುಣಿತಗಳ ದೋಷಗಳನ್ನು ಪಟ್ಟಿಮಾಡಿ ನಿವಾರಣೋಪಾಯಗಳನ್ನು ತಿಳಿಸಿದ್ದಾರೆ.

ಬಣಕಾರ ಮಮತ ಅವರು **"ರಾಣೆಬೆನ್ನೂರು ತಾಲ್ಲೂಕಿನ ೫ನೇ ತರಗತಿ ವಿದ್ಯಾರ್ಥಿಗಳ ಕನ್ನಡ ಭಾಷೆಯ ವಾಚನ ಸಾಮರ್ಥ್ಯದ ದೋಷಗಳಿಗೆ ಸಂಬಂಧಿಸಿದ ಕಾರಣಗಳ ಅಧ್ಯಯನ"** ಎನ್ನುವ ಕಿರು ಪ್ರಬಂಧವನ್ನು ಮೇರಿ ಸುವರ್ಣ ಅವರ ಮಾರ್ಗದರ್ಶನದಲ್ಲಿ ಕುವೆಂಪು ವಿಶ್ವವಿದ್ಯಾಲಯಕ್ಕೆ ೨೦೦೬ರಲ್ಲಿ ಸಲ್ಲಿಸಿದ್ದಾರೆ. ಅವರ ಅಧ್ಯಯನದಲ್ಲಿ ಪ್ರಮುಖವಾಗಿ ೫ನೇ ತರಗತಿ ಕನ್ನಡ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡವನ್ನು ಉಚ್ಚರಿಸುವಾಗ ಅಲ್ಪಪ್ರಾಣ, ಮಹಾಪ್ರಾಣ ಮತ್ತು ಒತ್ತಕ್ಷರಗಳನ್ನು ಓದುವಾಗ ಕಂಡುಬರುವ ಸಮಸ್ಯೆಗಳನ್ನು ಪತ್ತೆ ಮಾಡಿ ಅವುಗಳಿಗೆ ಪರಿಹಾರ ನೀಡಿದ್ದಾರೆ.

ರವೀಂದ್ರ ಕರ್ಜಗಿ ಅವರು **"ಏಳನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡದ ಸಂಯುಕ್ತಾಕ್ಷರ ಪದಗಳಲ್ಲಿ ಮಾಡುವ ಸ್ಖಾಲಿತ್ಯಗಳ ತೌಲನಿಕ ಅಧ್ಯಯನ"** ಎನ್ನುವ ಕಿರುಪ್ರಬಂಧವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ೨೦೦೭ರಲ್ಲಿ ಸಲ್ಲಿಸಿರುತ್ತಾರೆ. ಇದರಲ್ಲಿ ಕನ್ನಡ ಹಾಗೂ ಇಂಗ್ಲಿಷ್ ಮಾಧ್ಯಮದ ಮಕ್ಕಳು ಸಂಯುಕ್ತಾಕ್ಷರ ಪದಗಳನ್ನು ಗುರುತಿಸುವಲ್ಲಿ ಮಾಡುವ ದೋಷಗಳನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಹೆಚ್ಚು ದೋಷಗಳನ್ನು ಮಾಡುತ್ತಾರೆ ಎನ್ನುವುದನ್ನು ಇಲ್ಲಿ ಚರ್ಚಿಸಿದ್ದಾರೆ.

ಕಲಾವತಿ ಬಿ. ಎಂಬುವವರು **"ಏಳನೇ ತರಗತಿಯ ವಿದ್ಯಾರ್ಥಿಗಳು ಕನ್ನಡದಲ್ಲಿ ಲೇಖನ ಚಿಹ್ನೆಗಳನ್ನು ಬಳಸುವಾಗ ಮಾಡುವ ದೋಷಗಳು : ಒಂದು ತೌಲನಿಕ ಅಧ್ಯಯನ"** ಎಂಬ ಶೀರ್ಷಿಕೆಯ ಅಡಿಯಲ್ಲಿ ಡಾ.ಎಚ್.ಎಸ್.ಜಯಪ್ಪ ಅವರ ಮಾರ್ಗದರ್ಶನದಲ್ಲಿ ಕುವೆಂಪು ವಿಶ್ವವಿದ್ಯಾಲಯಕ್ಕೆ ೨೦೦೭ರಲ್ಲಿ ಸಲ್ಲಿಸಿದ್ದಾರೆ. ಕನ್ನಡವನ್ನು ಬರೆಯುವಾಗ ಲೇಖನ ಚಿಹ್ನೆಗಳನ್ನು ಗಮನಿಸಿದೇ ಬರೆದಾಗ ಉಂಟಾಗುವ ದೋಷಗಳನ್ನು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ.

ಪುಷ್ಪಾವತಿ ಎಸ್.ಕೆ. ಅವರು **"ಐದನೆ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಓದುಗಾರಿಕೆಯಲ್ಲಿ ಮಾಡುವ ದೋಷಗಳ ತೌಲನಿಕ ಅಧ್ಯಯನ"** ಎನ್ನುವ ಕಿರುಪ್ರಬಂಧವನ್ನು ೨೦೦೮ರಲ್ಲಿ ಕುವೆಂಪು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಕನ್ನಡ ಮಾಧ್ಯಮದಲ್ಲಿ ಬಾಲಕಿಯರಿಗಿಂತ ಬಾಲಕರು ಕನ್ನಡ ಅಕ್ಷರ,

ಪದಗಳನ್ನು ಗುರುತಿಸುವಲ್ಲಿ ದೋಷಗಳನ್ನು ಮಾಡುತ್ತಾರೆ ಎನ್ನುವುದನ್ನು ಸ್ಪಷ್ಟಪಡಿಸಿದ್ದಾರೆ. ಅಂದರೆ ಅನ್ಯ ಭಾಷೆ ಕಲಿಕೆಗಿಂತ ಮಾತೃ ಭಾಷೆ ಕಲಿಕೆ ಮಕ್ಕಳಿಗೆ ಬೇಗನೆ ಪೂರೈಕೆಯಾಗುತ್ತದೆ ಎನ್ನುವುದು ಈ ಮೇಲಿನ ಅಂಶಗಳಿಂದ ಸ್ಪಷ್ಟವಾಗುತ್ತದೆ. ಮಾತೃಭಾಷೆಯ ಮೂಲಕ ಮಕ್ಕಳ ಕಲಿಕೆ ಸಂಪೂರ್ಣವಾದಾಗ ಇತರ ಅನ್ಯಭಾಷೆಗಳನ್ನು ಸುಲಭವಾಗಿ ಗ್ರಹಿಸಿಕೊಳ್ಳಬಹುದು. ಅದು ಒಂದು ಹಂತದವರೆಗೆ ಮುಂದುವರೆಯಬೇಕು. ಆಗ ಮಗುವಿನ ತಿಳುವಳಿಕೆಯ ಬುದ್ಧಿಮಟ್ಟ ಮತ್ತು ಗ್ರಹಿಸುವ ಸಾಮರ್ಥ್ಯ ಸ್ವಲ್ಪ ಮಟ್ಟಿಗೆ ಬೆಳೆದಿರುವುದರಿಂದ ವಿಷಯ ಜ್ಞಾನ ಸ್ಪಷ್ಟವಾಗುತ್ತದೆ. ಆದರೆ ಅದೇ ವಿಷಯವನ್ನು ಅನ್ಯ ಭಾಷೆಯ ಮೂಲಕ ಮಗುವಿನ ತಿಳುವಳಿಕೆಗೆ ಮುಟ್ಟುವುದಿಲ್ಲ. ಮಗುವಿನ ಮಾತೃಭಾಷೆಯಲ್ಲಿ ಶಿಕ್ಷಣ ನೀಡುವುದರಿಂದ ಅನ್ಯ ಭಾಷೆಗಳಲ್ಲಿ ಆಗುವಂತಹ ದೋಷಗಳನ್ನು ಸರಿಪಡಿಸಬಹುದು ಎನ್ನುವುದನ್ನು ಇಲ್ಲಿ ತಿಳಿಸಿದ್ದಾರೆ.

ಮೃತ್ಯುಂಜಯ ಕೆ. ಅವರು **"ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲಾ ಮಕ್ಕಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿ ದೋಷಗಳು ಕುರಿತು ಒಂದು ವಿಶ್ಲೇಷಣಾತ್ಮಕ ಅಧ್ಯಯನ"** ಎಂಬ ಕಿರುಪ್ರಬಂಧವನ್ನು ಡಾ.ಸಿ.ಗೀತಾ ಅವರ ಮಾರ್ಗದರ್ಶನದಲ್ಲಿ ಕುವೆಂಪು ವಿಶ್ವವಿದ್ಯಾಲಯಕ್ಕೆ ೨೦೦೮ರಲ್ಲಿ ಸಲ್ಲಿಸಿದ್ದಾರೆ. ಓದುವಿಕೆಯಲ್ಲಿ ಉಂಟಾಗುವ ದೋಷಗಳನ್ನು ಉದಾಹರಣೆಯ ಮೂಲಕ ಸ್ಪಷ್ಟೀಕರಿಸಿದ್ದಾರೆ. ಹಾಗೆಯೇ ಸಮಸ್ಯೆ ಮತ್ತು ಪರಿಹಾರೋಪಾಯಗಳನ್ನು ನೀಡಿದ್ದಾರೆ. ಓದುವಿಕೆಯಲ್ಲಿ ಉಂಟಾಗುವ ಉಚ್ಚಾರ ದೋಷಗಳನ್ನು, ಹ್ರಸ್ವಸ್ವರ, ದೀರ್ಘಸ್ವರ, ಅಲ್ಪಪ್ರಾಣ, ಮಹಾಪ್ರಾಣಗಳನ್ನು ಪಟ್ಟಿ ಮಾಡಿದ್ದಾರೆ ಮತ್ತು ಪರಿಹಾರೋಪಾಯಗಳನ್ನು ಸೂಚಿಸಿದ್ದಾರೆ.

**೨.೪ ಸಂಶೋಧನಾ ಕೃತಿಗಳು**

**"ಶಿಕ್ಷಣದ ಆಧಾರಗಳು"(೧೯೮೯)** ಎಂಬ ಭರತ್‌ಭೂಷಣ್, ಬಿ. ಅವರ ಕೃತಿ ಪ್ರಥಮ ಪಿ.ಯು.ಸಿ. ಶಿಕ್ಷಣಶಾಸ್ತ್ರದ ಪಠ್ಯಪುಸ್ತಕವಾಗಿದೆ. ಇದರಲ್ಲಿ ಶಿಕ್ಷಣದ ಅರ್ಥ, ವ್ಯಾಖ್ಯೆಗಳು ಶಿಕ್ಷಣದ ಮಹತ್ವ ಮನಃಶಾಸ್ತ್ರೀಯ ಆಧಾರದ ಮೇಲೆ ಶಿಕ್ಷಣ, ಶಿಕ್ಷಣದ ಪ್ರಾಚೀನತೆ ಇತ್ಯಾದಿ ಅಂಶಗಳನ್ನು ಕುರಿತು ವಿವರಿಸಿದ್ದಾರೆ.

ನಾರಾಯಣಭಟ್ಟ ಎ.ಆರ್. ಅವರ **"ಶಿಕ್ಷಣ ಮಾಧ್ಯಮ ಸಮಗ್ರ ಚಿಂತನ"** (೧೯೯೩) ಎಂಬ ಕೃತಿಯಲ್ಲಿ ಶಿಕ್ಷಣ ಮಾಧ್ಯಮ ಕುರಿತು ಎರಡನೇ ಲೇಖನದಲ್ಲಿ ಚರ್ಚಿಸಲಾಗಿದೆ. ಮಗುವಿಗೆ ನೀಡುವ ಶಿಕ್ಷಣದಲ್ಲಿ ಮಾತೃಭಾಷೆಯ ಅಗತ್ಯತೆಯನ್ನು ಹೇಳುವಾಗ ತಾಯಿಯ ಹಾಲು ಮಗುವಿಗೆ ಎಷ್ಟು ಅವಶ್ಯಕವೋ, ಅಷ್ಟೇ ಮಾತೃಭಾಷೆ ಮಗುವಿನ ಶಿಕ್ಷಣಕ್ಕೆ

ಬೆಂಬಲವಾಗಿ ನಿಲ್ಲುತ್ತದೆ. ಆಂಗ್ಲ ಮಾಧ್ಯಮವನ್ನು ಉಪೇಕ್ಷಿಸುವ ಪೋಷಕರಿಂದಾಗಿ ಮಕ್ಕಳು ಆಂಗ್ಲ ಮಾಧ್ಯಮಕ್ಕೆ ದಾಖಲಾತಿ ಪಡೆದು ಮಾತೃಭಾಷೆಯ ಸೊಗಡು, ಸೌಂದರ್ಯವನ್ನು ಅನುಭವಿಸುವ ಅಮೃತ ಘಳಿಗೆಯಿಂದ ವಂಚಿತರಾಗುತ್ತಾರೆ. ಆಂಗ್ಲ ಮಾಧ್ಯಮ ಮಗುವಿನ ಕಲಿಕೆಯನ್ನು ತಡೆಯುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಅಂಗಡಿ ಎಸ್.ಎಸ್. ಅವರ **"ಭಾಷಾ ಕ್ಷೇತ್ರಕಾರ್ಯ"(೧೯೯೩)** ಕಿರು ಹೊತ್ತಿಗೆಯು ಹಲವು ಮಾಹಿತಿಗಳನ್ನು ಒಳಗೊಂಡ ಕೃತಿಯಾಗಿದೆ. ಕ್ಷೇತ್ರಕಾರ್ಯ ಸರ್ವೇಸಾಮಾನ್ಯ ವಿಷಯವೆಂದು ತಿಳಿದರೂ ಭಾಷಾ ಕ್ಷೇತ್ರಕಾರ್ಯಕ್ಕೆ ಸಂಬಂಧಿಸಿದಂತೆ ಹೆಚ್ಚು ಪ್ರಾಧಾನ್ಯತೆಯನ್ನೊಳಗೊಂಡಿದೆ. ಸಂಶೋಧನೆಯಲ್ಲಿ ಕ್ಷೇತ್ರಕಾರ್ಯ ಬಹುಮುಖ್ಯ ಅಂಗವಾಗಿ ಬೆಳೆದಿದೆ. ಭಾಷೆಗೆ ಸಂಬಂಧಿಸಿದಂತೆ ಸಂಶೋಧಕರು ತಮ್ಮ ಅಧ್ಯಯನದ ಕ್ಷೇತ್ರಗಳಿಗೆ ಸಂಬಂಧಪಟ್ಟಂತೆ ಮೂಲನೆಲೆಗೆ ಹೋಗಿ ಪ್ರತ್ಯಕ್ಷವಾಗಿ ಮಾಹಿತಿಯನ್ನು ಸಂಗ್ರಹಿಸುವ ವಿಧಾನವಿದು. ಇದರಿಂದ ಅಧ್ಯಯನಕ್ಕೆ ಯೋಗ್ಯವಾದ, ವಸ್ತುನಿಷ್ಠವಾದ ಮೂಲ ಸಾಮಗ್ರಿಗಳು ದೊರೆಯುತ್ತವೆ. ಇದನ್ನೇ ಕ್ಷೇತ್ರಾಧ್ಯಯನವೆಂದು ಕರೆಯುತ್ತಾರೆ. ಕ್ಷೇತ್ರಕಾರ್ಯದ ಆಕರಗಳು ಗಣಿ, ಆಧಾರಗ್ರಂಥಗಳು ಬೆನ್ನೆಲುಬು, ದೇಶನೋಡು ಕೋಶ ಓದು' ಎನ್ನುವಲ್ಲಿ ಇದರ ಅರ್ಥವನ್ನು ಕಂಡುಕೊಳ್ಳಬಹುದು. ಈ ಪುಸ್ತಕವನ್ನು ಅಧ್ಯಯನ ಮಾಡುವುದರಿಂದ ಭಾಗಶಃ ಕ್ಷೇತ್ರಕಾರ್ಯವನ್ನು ಒಳಗೊಂಡ ನನ್ನ ಅಧ್ಯಯನಕ್ಕೆ ಒಂದು ಚೌಕಟ್ಟನ್ನು ನಿರ್ಮಿಸಿಕೊಳ್ಳುವಲ್ಲಿ ಪ್ರಮುಖ ಆಕರವಾಗಿದೆ.

**"ಭಾಷಾ ಲೇಖ" (೧೯೯೯)** ಎಂಬ ಡಾ.ಸಂಗಮೇಶ ಸವದತ್ತಿಮಠ ಅವರ ಕೃತಿಯು ಕನ್ನಡ ಭಾಷಾ ವಿಜ್ಞಾನಕ್ಕೆ ಸಂಬಂಧಿಸಿದ ಸಂಶೋಧನಾ ಲೇಖನಗಳ ಸಂಕಲನ ಗ್ರಂಥವಾಗಿದ್ದು, ಐದು ಲೇಖನಗಳನ್ನು ಒಳಗೊಂಡಿದೆ. ಉತ್ತರ ಕರ್ನಾಟಕದ ಉಪ ಭಾಷಾ ಪ್ರಭೇದಗಳನ್ನು ಕುರಿತಂತೆ ವಿವರಣಾತ್ಮಕ ಸಮೀಕ್ಷೆಗಳು ಇರುವುದಲ್ಲದೆ, ಆಧುನಿಕ ಪೂರ್ವ ಮತ್ತು ಆಧುನಿಕ ಕೃತಿಕಾರರ ಕೃತಿಗಳ ಸಂಕ್ಷಿಪ್ತ ಭಾಷಿಕ ವಿಶ್ಲೇಷಣೆಯನ್ನು ಒಳಗೊಂಡ ಸಂಪ್ರಬಂಧಗಳಿವೆ. ವ್ಯಾಪಕವಾದ ಅಧ್ಯಯನ ಮತ್ತು ಕ್ಷೇತ್ರಕಾರ್ಯಗಳ ಹಿನ್ನೆಲೆಯಲ್ಲಿ ಮೂಡಿ ಬಂದಿರುವ ಸಂಪ್ರಬಂಧಗಳು ಕನ್ನಡ ಭಾಷಾ ವಿಜ್ಞಾನ ಕ್ಷೇತ್ರವನ್ನು ಶ್ರೀಮಂತಗೊಳಿಸುವಂತಿವೆ. ಭಾಷಿಕ ಮಾಹಿತಿಯ ಆಳವಾದ ವಿಶ್ಲೇಷಣೆಯು ಉಪಭಾಷೆಗಳ ನಿಯಮಗಳನ್ನು ಗುರುತಿಸುವಲ್ಲಿ ದ್ವಿಭಾಷಿಕತೆಯ ಚಿಂತನೆಗಳು ಉಪಯುಕ್ತ ಮಾಹಿತಿಯನ್ನು ಒದಗಿಸುತ್ತವೆ. ಕನ್ನಡ ಭಾಷೆಯ ಹುಟ್ಟು-ಬೆಳವಣಿಗೆ, ಕನ್ನಡ ಭಾಷೆಯ ಪ್ರಭೇದಗಳ ನಿರ್ಮಾಣ ಕಾರಣಗಳು, ಕನ್ನಡ ಭಾಷೆ ಲೇಖನಗಳು ಉಪಯುಕ್ತವಾಗಿವೆ. ಮಗುವು

ಭಾಷೆಯನ್ನು ರೂಢಿಸಿಕೊಳ್ಳುವ ಬಗೆಗೆ ವಿಶಿಷ್ಟವಾಗಿರುವುದರಿಂದ 'ಮಕ್ಕಳು ಭಾಷೆ' ಪ್ರತ್ಯೇಕ ಪ್ರಕ್ರಿಯೆ ಆಗಿರುವುದರಿಂದ ಭಾಷಾ ಪ್ರಕ್ರಿಯೆಯು ಬಾಲ್ಯದೊಡನೆ ಇರುವ ಮಹತ್ವದ ಅಂಶವಾಗಿದೆ. ಮಕ್ಕಳು ತಮ್ಮ ಸೀಮಿತ ಶಬ್ದ ಸಂಗ್ರಹದಿಂದಲೇ ತಮ್ಮ ಭಾಷೆಯನ್ನು ಅಭಿವ್ಯಕ್ತಗೊಳಿಸಲು ಮಾಡುವ ಪ್ರಯತ್ನ ಗಮನಾರ್ಹವಾದುದು. ಮಕ್ಕಳ ಭಾಷೆ ಭಿನ್ನವಾಗಿದೆ ಎಂಬುದನ್ನು ಅಂದುಕೊಳ್ಳುವುದರ ಮೂಲಕ ಮಕ್ಕಳ ಭಾಷಾ ವೈಶಿಷ್ಟ್ಯಗಳನ್ನು ಗುರುತಿಸಿ ಅಧ್ಯಯನ ಮಾಡಬಹುದು.

**"ಭಾಷೆ: ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೧"** (೨೦೦೦) ಇದೊಂದು ಭಾಷಾ ವಿಶ್ವಕೋಶವಾಗಿದ್ದು, ಹಲವು ಲೇಖನಗಳನ್ನೊಳಗೊಂಡಿದ್ದು, ಹತ್ತು ವಿಭಾಗಗಳಲ್ಲಿ ವಿಸ್ತೃತವಾಗಿ ರಚಿಸಲ್ಪಟ್ಟಿದೆ. ಅದರಲ್ಲಿ ಪ್ರಮುಖವಾಗಿ ಭಾಗ ಏಳರಲ್ಲಿಯ ಭಾಷೆಯ ಕಲಿಕೆಯ ವಿಭಾಗದ 'ಶಾಲೆಯಲ್ಲಿ ಭಾಷೆ' ಎಂಬ ೪೧ನೇ ಲೇಖನವನ್ನು ನಾರಾಯಣ ಕೆ.ವಿ. ಅವರು ಸಂಪಾದಿಸಿದ್ದು, ಶಾಲಾ ಶಿಕ್ಷಣದಲ್ಲಿ ಭಾಷಾ ಕೌಶಲ್ಯಗಳನ್ನು ಕಲಿಸುವ ಉದ್ದೇಶ, ಕ್ರಮ, ಗುರಿ ಇತ್ಯಾದಿಗಳು ಏನು? ಎಷ್ಟು? ಹೇಗೆ? ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕುವ ಪ್ರಯತ್ನವನ್ನು ಮಾಡಿದ್ದಾರೆ.

ಸಾಂಪ್ರದಾಯಿಕ ವಿಧಾನದಲ್ಲಿ ಬರೆವಣಿಗೆ ಮತ್ತು ಓದುವುದು ಮುಖ್ಯ ಗುರಿಗಳಾಗಿದ್ದವು. ಸಾಕ್ಷರತೆಯೇ ಮುಖ್ಯ ಉದ್ದೇಶವಾಗಿತ್ತು. ಬೇಕಾದ ಬೋಧನಾ ವಿಧಾನ, ಪಠ್ಯಕ್ರಮ, ಪಾಠಗಳನ್ನು ರೂಪಿಸುತ್ತಿದ್ದರು. ಭಾಷೆಯ ಮೌಖಿಕತೆಯನ್ನು ಅಲಕ್ಷಿಸುತ್ತಿತ್ತು. ಅಂದರೆ ಮಾತನಾಡುವ, ಸಂವಾದದಲ್ಲಿ ತೊಡಗುವ, ಇತರರ ಮಾತನ್ನು ಆಲಿಸಿ ಗ್ರಹಿಸುವ ಕೌಶಲ್ಯಗಳು ಈಗಾಗಲೇ ಮಗುವಿನಲ್ಲಿ ಇರುತ್ತದೆಂದು ತಿಳಿಯಲಾಗಿತ್ತು. ಆದರೆ ಈಚೆಗೆ ಚಿಂತನೆಗಳು ಬೇರೊಂದು ದಿಕ್ಕಿನತ್ತ ಹರಿದಿವೆ. ಶಾಲಾ ಅವಧಿಯಲ್ಲಿ ಮಗುವಿಗೆ ದೊರಕುವ ಭಾಷಾ ಕೌಶಲಗಳ, ತಳಹದಿ, ಶಿಕ್ಷಣದ ಸಮಗ್ರ ಯಶಸ್ಸಿನಲ್ಲಿ ಮುಖ್ಯಪಾತ್ರ ವಹಿಸುವುದೆಂದು ತಿಳಿಯುತ್ತಿದ್ದಾರೆ. ಆದ್ದರಿಂದ ಬರೆವಣಿಗೆ ಮತ್ತು ಓದುವುದನ್ನು ಮಾತ್ರ ಮುಖ್ಯ ಗುರಿಯಾಗಿಸದೆ ಇತರ ಕೌಶಲಗಳನ್ನು ಬೆಳೆಸುವುದು ಅವಶ್ಯವೆಂದು ತಿಳಿದು ಶಿಕ್ಷಣ ಕ್ರಮದಲ್ಲಿ ಬದಲಾವಣೆಗಳನ್ನು ತರುತ್ತಿದ್ದಾರೆ. ಈ ಲೇಖನದಲ್ಲಿ ಭಾಷಾ ಕೌಶಲಗಳಾದ ಓದುವಿಕೆ ಮತ್ತು ಬರೆವಣಿಗೆ ಕುರಿತ ಕೆಲವು ಮಾಹಿತಿಗಳನ್ನು ಒದಗಿಸುವುದರ ಜೊತೆಗೆ ಬರಹದ ಉಪಯೋಗಗಳನ್ನು ಮಾದರಿಗಳನ್ನು ಸವಿಸ್ತಾರವಾಗಿ ಪ್ರತಿನಿಧಿಸಿದ್ದಾರೆ.

ನಾರಾಯಣ ಕೆ.ವಿ. ಅವರ ಸಂಪಾದಕತ್ವದ **"ಭಾಷಾ ವಿಶ್ವಕೋಶ-೧,"**(೨೦೦೦) ರಲ್ಲಿ ವನಮಾಲ ವಿಶ್ವನಾಥ ಅವರು ಬರೆದ ೧೦ನೇ ಭಾಗದ ೫೯ನೇ ಲೇಖನದಲ್ಲಿ

'ಅನ್ಯ ಭಾಷಾ ಕಲಿಕೆ' ಭಾರತೀಯ ಸಂದರ್ಭದಲ್ಲಿ 'ದ್ವಿತೀಯ' ಭಾಷೆಯ ಸಾಧ್ಯತೆಗಳನ್ನು ಕುರಿತು ಚರ್ಚಿಸಿದ್ದಾರೆ. ದ್ವಿತೀಯ ಭಾಷಾ ಬೋಧನೆ ಮತ್ತು ತಾತ್ವಿಕ ಚೌಕಟ್ಟು ಭಾಗದಲ್ಲಿ ಸಾಮಾಜಿಕ ಸಂದರ್ಭ, ಕಲಿಯುವವರ ಗುಣಲಕ್ಷಣಗಳು, ಕಲಿಕೆಯ ಪ್ರಕ್ರಿಯೆ, ಕಲಿಕೆಯ ಸನ್ನಿವೇಶಗಳು, ಕಲಿಕೆಯ ಪರಿಣಾಮ ಕುರಿತಾದ ವಿವರಣೆಗಳು, ದ್ವಿತೀಯ ಭಾಷಾ ಬೋಧನಾ ವಿಧಾನಗಳು ತಾರ್ಕಿಕ ಮತ್ತು ಸಹಜ ವಿಧಿ ವಿಧಾನಗಳನ್ನು ಕುರಿತ ಚರ್ಚೆ ತಾತ್ವಿಕವಾಗಿದ್ದು, ದ್ವಿತೀಯ ಭಾಷೆಯಾಗಿ ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ಕಲಿಯುವಲ್ಲಿ ಈ ಚಿಂತನೆಗಳನ್ನು, ನಿಯಮಗಳನ್ನು ಅಳವಡಿಸಿಕೊಳ್ಳಲು ಸಹಾಯಕವಾಗುವ ಬರೆವಣಿಗೆಯಾಗಿದೆ. ಭಾಷಾ ವಿಶ್ವಕೋಶ ಕನ್ನಡ ಭಾಷೆಯ ನಿಘಂಟಾಗಿದ್ದು, ಬೇಕಾದ ಮಾಹಿತಿಯನ್ನು ಹೆಕ್ಕಿ ತೆಗೆದುಕೊಂಡು ಉಪಯೋಗಿಸುವ ಗಣಿಯಾಗಿದೆ ಎಂದರೆ ಅತಿಶಯೋಕ್ತಿಯೇನಲ್ಲ.

**"ಭಾರತದಲ್ಲಿ ಶಿಕ್ಷಣ ಹಾಗೂ ಪ್ರಚಲಿತ ಸಮಸ್ಯೆಗಳು"(೨೦೦೭)** ಕೊಂಗವಾಡ ಎನ್.ಬಿ. ಅವರು ಈ ಕೃತಿಯನ್ನು ಬಿ.ಇಡಿ, ಹಾಗೂ ಡಿ.ಇಡಿ, ವಿದ್ಯಾರ್ಥಿಗಳಿಗೆ ಹಾಗೂ ಕರ್ನಾಟಕದ ಎಲ್ಲ ವಿಶ್ವವಿದ್ಯಾಲಯಗಳ ಹೊಸ ಪಠ್ಯಕ್ರಮಕ್ಕಾಗಿ ರಚಿಸಲಾಗಿದೆ. ಭಾರತೀಯ ಶಿಕ್ಷಣದ ಇತಿಹಾಸ, ಭಾರತದ ಶಿಕ್ಷಣದಲ್ಲಿಯ ಪ್ರಚಲಿತ ಸಮಸ್ಯೆಗಳು ಇತ್ಯಾದಿ ಅಂಶಗಳನ್ನು ಕುರಿತು ಈ ಕೃತಿಯಲ್ಲಿ ವಿವರಿಸಿದ್ದಾರೆ.

**"ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ"(೨೦೦೬)** ಎಂಬ ಕೃತಿಯಲ್ಲಿ ಡಾ.ಪಿ.ಮಹಾದೇವಯ್ಯ ಕನ್ನಡವನ್ನು ಅಧ್ಯಯನ ಮಾಡುವವರಲ್ಲಿ ಕನ್ನಡ ಕಲಿಕೆಯ ವಲಯದ ಬಗ್ಗೆ ಹೆಚ್ಚು ಆಸಕ್ತಿ ಇಲ್ಲ ಎಂದಿದ್ದಾರೆ. ಕನ್ನಡವನ್ನು ಶಾಲೆಗಳಲ್ಲಿ ಔಪಚಾರಿಕವಾಗಿ ಕಲಿಸುವವರೂ ಕೂಡ ಸಿದ್ಧಮಾದರಿಗಳನ್ನು ಪರಿಪೂರ್ಣವೆಂದು ನಂಬಿ ಬಿಟ್ಟಿದ್ದಾರೆ. ಅವರು ಬದಲಾವಣೆಗೆ ಸಿದ್ಧರಿಲ್ಲ. ಶಾಲೆಗಳಿಗೆ ಬರುವ ವಿದ್ಯಾರ್ಥಿಗಳು ಕನ್ನಡದ ಬಳಕೆಯ ಸಾಮರ್ಥ್ಯವನ್ನು ಈಗಾಗಲೇ ಪಡೆದುಕೊಂಡಿರುತ್ತಾರೆನ್ನುವ ಅಂಶ ಮುಖ್ಯ. ಈ ಬಳಕೆಯ ಸಾಮರ್ಥ್ಯಗಳಲ್ಲಿ ಇರುವ ಸಾಮಾಜಿಕ ಮತ್ತು ಪ್ರಾದೇಶಿಕ ವ್ಯತ್ಯಾಸಗಳನ್ನು ನಮ್ಮ ತರಗತಿಗಳಲ್ಲಿ ಪರಿಗಣನೆಗೆ ತೆಗೆದುಕೊಳ್ಳುವುದಿಲ್ಲ. ಈ ವ್ಯತ್ಯಾಸಗಳು ಕಲಿಕೆಯಲ್ಲಿ ನಿರ್ಧಾರಕ ಪರಿಣಾಮಗಳನ್ನು ಬೀರುತ್ತವೆ. ಆದ್ದರಿಂದ ನಮ್ಮ ಶಾಲಾ ಪಠ್ಯಕ್ರಮ, ಪಠ್ಯಸಾಮಗ್ರಿ ಮತ್ತು ಬೋಧನಾ ವಿಧಾನಗಳನ್ನು ತಕ್ಕಂತೆ ಬದಲಾಯಿಸಬೇಕಾದ ಅಗತ್ಯವಿದೆ ಎಂದು ಕೆ.ವಿ.ನಾರಾಯಣ ಅವರು ಕೂಡ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಈ ಕೃತಿಯಲ್ಲಿ ಒಟ್ಟು ೧೪ ಲೇಖನಗಳಿವೆ. ಅವುಗಳಲ್ಲಿ ಪ್ರಮುಖವಾಗಿ ೪ ಲೇಖನಗಳು ಕನ್ನಡ ಭಾಷೆ, ಕಲಿಕೆ ಬೋಧನೆಗೆ ಪೂರಕವಾಗಿವೆ. ಮೊದಲನೆಯ

ಲೇಖನವಾದ **'ಕನ್ನಡ ಭಾಷೆ ಕಲಿಕೆ ಮತ್ತು ಬೋಧನೆ ಅನ್ಯಭಾಷಿಕ ಮಕ್ಕಳನ್ನು ಅನುಲಕ್ಷಿಸಿ'** ಎಂಬ ಲೇಖನದಲ್ಲಿ ಶಾಲಾ ಆವರಣದಲ್ಲಿ ಉರ್ದು ಭಾಷಿಕರ ಮಕ್ಕಳು ಕನ್ನಡವನ್ನು ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡುವರು. ಮನೆ ವಾತಾವರಣದಲ್ಲಿ ಕನ್ನಡವನ್ನು ಬಳಸುವುದಿಲ್ಲ. ಈ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳು ಬೋಧಕರಿಂದಲೇ ಕನ್ನಡ ಕಲಿಯಬೇಕಾಗಿದೆ. ಅವರ ಮಾತೃಭಾಷೆಯಾದ ಉರ್ದುವಿನ ಪ್ರಭಾವ ಕನ್ನಡ ಕಲಿಯುವವರ ಮೇಲೆ ಹೇಗೆ ಪ್ರಭಾವ ಬೀರುತ್ತಿದೆ ಎಂಬುದನ್ನು ಸವಿಸ್ತಾರವಾಗಿ ಅಧ್ಯಯನ ಮಾಡಿದ್ದಾರೆ.

ಮತ್ತೊಂದು ಲೇಖನ ಪಠ್ಯಪುಸ್ತಕ ರಚನೆಯಲ್ಲಿ ಭಾಷಾಶಾಸ್ತ್ರಜ್ಞರ ಪಾತ್ರ. ಈ ಲೇಖನದಲ್ಲಿ ಶಾಲೆಯ ಪಠ್ಯಪುಸ್ತಕ ರಚನೆಯಲ್ಲಿ ಭಾಷಾ ಶಾಸ್ತ್ರಜ್ಞರ ಪಾತ್ರವೇನು? ಎಂಬುದನ್ನು ವಿವರಿಸಿದ್ದಾರೆ. ಕನ್ನಡದಲ್ಲಿ ೧ನೇ ತರಗತಿಯಿಂದ ೧೦ನೇ ತರಗತಿಯ ಎಲ್ಲಾ ಪಠ್ಯಗಳನ್ನು ಗಮನದಲ್ಲಿಟ್ಟುಕೊಂಡು ಈ ಲೇಖನವನ್ನು ಸಿದ್ಧಪಡಿಸಿದ್ದಾರೆ. ಪಠ್ಯಪುಸ್ತಕವೇ ಆಕರ ಸಾಮಗ್ರಿಯಾಗಿದೆ. ಒಂದು ಪಠ್ಯ ನಿರ್ಮಾಣ ಕಾರ್ಯದಲ್ಲಿ ಭಾಷಾ ವಿಜ್ಞಾನಿ, ಸಾಹಿತಿ, ಶಿಕ್ಷಣತಜ್ಞ, ಸಮಾಜ ವಿಜ್ಞಾನಿ ಮತ್ತು ಮನೋವಿಜ್ಞಾನಿ ಮುಂತಾದವರ ಪಾತ್ರ ಮಹತ್ವದ್ದು. ಭಾಷಾ ಕೌಶಲಗಳಾದ ಆಲಿಸುವುದು, ಮಾತನಾಡುವುದು, ಓದು-ಬರಹ ಇವುಗಳನ್ನು ಪರಿಗಣಿಸಿ ಭಾಷಾ ತತ್ವಗಳಾದ ಧ್ವನಿ-ಪದ, ಪದಕೋಶ-ವಾಕ್ಯರಚನೆಗಳಲ್ಲಿ ಸರಳತೆಯನ್ನು ಹೇಗೆ ಕಾಪಾಡಿಕೊಳ್ಳಬೇಕು ಎಂಬುದನ್ನು ಚರ್ಚಿಸಿದ್ದಾರೆ. ಭಾಷಾ ಬೋಧನೆ ಮತ್ತು ಕಲಿಕೆಯಲ್ಲಿ ಭಾಷಾ ವಿಜ್ಞಾನದ ಪಾತ್ರವೇನು? ಭಾಷಾತಜ್ಞರು ಕಲಿಕೆಯನ್ನು ಪರಿಣಾಮಕಾರಿಯಾಗಿ ಮಾಡಲು ಬಳಸುವ ತಂತ್ರಗಳಾವುವು? ಅವು ಎಷ್ಟರ ಮಟ್ಟಿಗೆ ಪರಿಣಾಮಕಾರಿಯಾಗಿವೆ ಎಂಬುದನ್ನು ನಿದರ್ಶನಗಳ ಸಹಾಯದಿಂದ ತಿಳಿಸಿದ್ದಾರೆ.

ಡಾ.ಪಿ.ಮಹಾದೇವಯ್ಯ ಅವರ ಮತ್ತೊಂದು ಲೇಖನ **"ಕನ್ನಡ ಪಠ್ಯಪುಸ್ತಕ ರಚನೆಯಲ್ಲಿನ ಸಮಸ್ಯೆಗಳು"** ಎನ್ನುವ ಲೇಖನವು ಕರ್ನಾಟಕ ಸರ್ಕಾರ ಶಿಕ್ಷಣ ಕ್ಷೇತ್ರವನ್ನು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ಕನ್ನಡ ಪಠ್ಯಪುಸ್ತಕಗಳನ್ನು ವೈಜ್ಞಾನಿಕವಾಗಿ ರಚನೆ ಮಾಡುತ್ತಾ ಬಂದಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ಸಾಮಾನ್ಯೀಕರಿಸಲಾಗಿದೆ. ಮಕ್ಕಳ ಕಲಿಕೆ ಮತ್ತು ಬೋಧನೆಯ ಗುಣಮಟ್ಟವನ್ನು ಸಂವರ್ಧನೆಗೊಳಿಸುವ ಉದ್ದೇಶದಿಂದ ಪಠ್ಯಪುಸ್ತಕಗಳ ರಚನೆಗೆ ಅನುಕೂಲವಾಗುವಂತೆ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ. ಪಠ್ಯಪುಸ್ತಕದಲ್ಲಿ ಮುಖ್ಯವಾಗಿ ಆಧುನೀಕರಣ ಪ್ರಕ್ರಿಯೆಗೆ ಒತ್ತು ನೀಡಲಾಗಿದೆ. ವಿಶೇಷವಾಗಿ ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಪಠ್ಯಗಳು ರಚನೆಯಾಗಿವೆ. ಕೆಲವೊಂದು ಉದಾಹರಣೆಗಳನ್ನು

ಉಲ್ಲೇಖಿಸಿ ವಿವರಣೆಯನ್ನು ನೀಡುವುದರ ಮುಖಾಂತರ ಕನ್ನಡ ಪಠ್ಯಪುಸ್ತಕ ರಚನಾ ಸಂದರ್ಭದಲ್ಲಿ ಗಮನಿಸಬೇಕಾದ ಅಂಶಗಳನ್ನು ಚರ್ಚಿಸಿದ್ದಾರೆ.

**"ಶಿಕ್ಷಣದಲ್ಲಿ ಭಾಷಾಮಾಧ್ಯಮದ ವಾಗ್ವಾದಗಳು"** ಎಂಬ ಲೇಖನವನ್ನು ಡಾ.ಅಶೋಕಕುಮಾರ ರಂಜೇರೆ ಅವರು ಬರೆದಿದ್ದಾರೆ. ಶಿಕ್ಷಣ ಮಾಧ್ಯಮಕ್ಕೆ ಸಂಬಂಧಿಸಿದಂತೆ ಇದುವರೆಗೆ ಬಂದಿರುವ ಲೇಖನಗಳನ್ನು ಒಟ್ಟಿಗೆ ಸಂಗ್ರಹಿಸಿ ಸಂಪಾದನೆ ಮಾಡಿದ್ದಾರೆ. ಇದರಲ್ಲಿ ೨೨ ಲೇಖನಗಳನ್ನು ಸಂಗ್ರಹಿಸಲಾಗಿದೆ. ಕನ್ನಡ ಮಾಧ್ಯಮ, ಶಿಕ್ಷಣ ಮಾಧ್ಯಮವಾಗಿ ಮಾತೃಭಾಷೆ ಹೀಗೆ ಎಲ್ಲಾ ಲೇಖನಗಳಲ್ಲಿ ಮಾಧ್ಯಮದ ಕುರಿತಾಗಿ ಸವಿಸ್ತಾರವಾಗಿ ಚರ್ಚೆ ಮಾಡಿದ್ದಾರೆ. ಅವುಗಳಲ್ಲಿ ಕೆಲವು ಲೇಖನಗಳು ವಿಚಾರಗಳನ್ನು ಮುಂದೆ ಗಮನಿಸಬಹುದು.

ಯಾವುದೇ ಭಾಷೆ, ಆ ಭಾಷೆಯನ್ನು ಬಳಸುವ ಭಾಷಿಕ ಹಾಗೂ ಆ ಭಾಷೆ ಬಳಸಲ್ಪಡುವ ಪ್ರದೇಶದೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿರುತ್ತದೆ. ಭಾಷೆ ಎಂದರೆ ಅದು ಕೇವಲ ಒಂದು ಸಂವಹನ ಮಾಧ್ಯಮವಷ್ಟೇ ಆಗಿರದೆ ಆ ಭಾಷೆಯನ್ನು ಬಳಸುವ ಜನರ ಸಂಸ್ಕೃತಿಯ ವಾಹಕವೂ ಆಗಿರುತ್ತದೆ. ಮನುಷ್ಯನ ಬೆಳವಣಿಗೆಯ ಮುಖ್ಯವಾಹಕ ಆಗಿರುತ್ತದೆ. ಮನುಷ್ಯನ ಬೆಳವಣಿಗೆಯ ಮುಖ್ಯವಾಹಕ ಶಿಕ್ಷಣವಾಗಿರುವುದಿಂದ ಯಾವ ಭಾಷೆಯ ಮೂಲಕ ಶಿಕ್ಷಣ ನೀಡಬೇಕು ಎನ್ನುವ ಚರ್ಚೆ ಚರಿತ್ರೆಯುದ್ದಕ್ಕೂ ನಡೆದಿದೆ. ಜಾಗತೀಕರಣದ ಈ ಹೊತ್ತಿನಲ್ಲಿ ದೇಸಿ ಭಾಷೆಗಳನ್ನೆಲ್ಲ ಹಿಂದಕ್ಕೆ ತಳ್ಳಿ ಜಾಗತಿಕ ಭಾಷೆಯಾದ ಆಂಗ್ಲ ಭಾಷೆ ಮಾತ್ರ ಶಿಕ್ಷಣದ ಮಾಧ್ಯಮ ಆಗಿರಬೇಕು ಎನ್ನುವ ವಾದಗಳು ಮುನ್ನೆಲೆಗೆ ಬಂದಿವೆ. ಶಿಕ್ಷಣದ ಉದ್ದೇಶಿತ ಗುರಿ ಯಾವುದು ಎನ್ನುವುದನ್ನು ಈ ಲೇಖನದಲ್ಲಿ ಚರ್ಚೆ ಮಾಡಲಾಗಿದೆ.

ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ ಎಂಬ ಲೇಖನವನ್ನು ಡಾ. ಮಹಾಬಲೇಶ್ವರರಾವ್ ಅವರು ರಚಿಸಿದ್ದಾರೆ. ಭಾಷಾ ಕಲಿಕೆ ಸಹಜವಾದುದು, ದೈವದತ್ತವಾದುದು, ಭಾಷೆ ರಕ್ತಗತ ಎಂದೆಲ್ಲಾ ಅನೇಕರು ಹೇಳುವುದುಂಟು. ಈ ಮಾತುಗಳಲ್ಲಿ ನಿಜವಿಲ್ಲ. ಯಾವ ಭಾಷೆಯೂ ಯಾರಿಗೂ ಸಹಜವಾಗಿ ಒಲಿದು ಬಂದದ್ದಲ್ಲ. ಭಾಷೆ ಕೇಳಿ, ಕಲಿತ ಪ್ರಕ್ರಿಯೆ ಮಗುವಿನ ಭಾಷಾ ಕಲಿಕೆ ಮತ್ತು ಶಬ್ದ ಭಂಡಾರದ ಬೆಳವಣಿಗೆಯಲ್ಲಿ ಹೆತ್ತವರ ಹಾಗೂ ಶಿಕ್ಷಕರ ಪಾತ್ರ ಅತ್ಯಂತ ಮಹತ್ವದ್ದಾಗಿದೆ.

ಸಂವಹನ ಸಾಧನವೆನಿಸಿದ ಭಾಷೆಯ ಬೋಧನೆ-ಕಲಿಕೆ ಒಂದು ಶಾಸ್ತ್ರವಾಗಿ ಬೆಳೆದಿದೆ. ಶಿಕ್ಷಣಶಾಸ್ತ್ರದ ಹಿನ್ನೆಲೆ ಇಲ್ಲದೆ ಕೇವಲ ತಮ್ಮ ಅಂತಃ ಪ್ರೇರಣೆಯನ್ನು ನೆಚ್ಚಿಕೊಂಡು ಸಾಹಿತ್ಯವನ್ನು ಬೋಧಿಸುವ ಅನೇಕ ಪ್ರಾಧ್ಯಾಪಕರು ಭಾಷಾ ಬೋಧನಾಶಾಸ್ತ್ರ ಹಾಗೂ

ಭಾಷಾ ಬೋಧನಾ ಕ್ಷೇತ್ರದ ಕುರಿತು ಅಧ್ಯಯನ ಮಾಡಬೇಕಾಗಿದೆ. ಭಾಷೆಯನ್ನು ಕಲಿಸುವ ಶಿಕ್ಷಕರಿಗೆ ತಾವು ಕಲಿಸುವ ಭಾಷೆಯ ಹಿನ್ನೆಲೆ, ಆ ಭಾಷೆಯ ಜಾಯಮಾನ, ಅದರ ವಿಶಿಷ್ಟತೆ ಚೆನ್ನಾಗಿ ತಿಳಿದಿರಬೇಕು. ಜೊತೆಗೆ ತಮ್ಮ ವಿದ್ಯಾರ್ಥಿಗಳ ಕೌಟುಂಬಿಕ ಹಿನ್ನೆಲೆ, ಅವರು ಭಾಷೆಯನ್ನು ಕಲಿಯುವ ಎದುರಿಸುವ ಸಮಸ್ಯೆಗಳು ಮತ್ತು ಬೋಧನೆಯ ತತ್ವಗಳ ಪರಿಚಯವಿರಬೇಕು ಎಂದು ಚರ್ಚಿಸಿದ್ದಾರೆ. ಪಠ್ಯಪುಸ್ತಕಗಳನ್ನು ಕುರಿತು 'ಪಠ್ಯಪುಸ್ತಕದ ಮೂಲಕ ಭಾಷೆ ಕಲಿಯುವುದು ಅತ್ಯಂತ ಅವೈಜ್ಞಾನಿಕ' ಎಂಬ ಮಾತಿದೆಯಾದರೂ ಶಿಕ್ಷಕರಿಗೆ ಮಾರ್ಗದರ್ಶಿಯಾಗಿ ಭಾಷಾ ಪಠ್ಯಪುಸ್ತಕಗಳು ತೀರಾ ಅನಿವಾರ್ಯ. ಭಾಷಾ ಬೋಧನೆಯಲ್ಲಿ ಪಠ್ಯಪುಸ್ತಕಗಳು ಶಿಕ್ಷಕರಿಗೆ ಬೋಧನಾ ಸಾಮಗ್ರಿ ಹಾಗೂ ಮಕ್ಕಳಿಗೆ ಕಲಿಕೆಯ ಸಾಧನವಾಗಿರುತ್ತದೆ. ಭಾಷಾ ಸಾಮಗ್ರಿಗಳನ್ನು ಬೆಳೆಸುವ ಒಂದು ಸಲಕರಣೆಯಾಗಿ ಪಠ್ಯಪುಸ್ತಕ ಕಾರ್ಯನಿರ್ವಹಿಸುತ್ತದೆ ಎಂದು ಪ್ರಾಥಮಿಕ ಹಂತದಲ್ಲಿ ಕನ್ನಡ ಬೋಧನೆಯ ಮಹತ್ವವನ್ನು ವಿವರಿಸಿದ್ದಾರೆ.

**"ಭಾಷೆ ಮತ್ತು ಕನ್ನಡ ಭಾಷಾ ಬೋಧನೆ"** ಓಬಳೇಶಘಟ್ಟಿ ಆರ್.(೨೦೦೪) ಅವರ ಕೃತಿಯಾಗಿದೆ. ಇದರಲ್ಲಿ ಭಾಷೆ ಮತ್ತು ಮಾತೃ ಭಾಷೆ ಎರಡರ ನಡುವಿನ ಸೂಕ್ಷ್ಮತೆಯನ್ನು ತಿಳಿಸುತ್ತಾ ಕನ್ನಡ ಮಾತೃ ಭಾಷಾ ಬೋಧನೆ ಮತ್ತು ಬೋಧಕನ ಲಕ್ಷಣಗಳನ್ನು ವಿವರಿಸಿದ್ದಾರೆ. ಭಾಷಾ ಪಠ್ಯಪುಸ್ತಕದ ರಚನಾ ತತ್ವಗಳನ್ನು ಕುರಿತು ವಿವರಿಸಿದ್ದಾರೆ.

**"ಕನ್ನಡ ಭಾಷೆ ಕಲಿಕೆ ಮತ್ತು ಬೋಧನೆ" ಅನ್ಯ ಭಾಷಿಕ ಮಕ್ಕಳನ್ನು ಅನುಲಕ್ಷಿಸಿ,** ಈ ಲೇಖನದಲ್ಲಿ ಪ್ರಧಾನವಾಗಿ ಉರ್ದು ಭಾಷಿಕ ಮಕ್ಕಳನ್ನು ಅನುಲಕ್ಷಿಸಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡುವಲ್ಲಿ ವಿದ್ಯಾರ್ಥಿಗಳು ಎದುರಿಸುತ್ತಿರುವ ಸವಾಲುಗಳನ್ನು ಸವಿಸ್ತಾರವಾಗಿ ವಿವರಿಸಿದ್ದಾರೆ. ಭಾಷಾ ಕೌಶಲಗಳಾದ ಓದುಗಾರಿಕೆ, ಬರವಣಿಗೆಯಲ್ಲಿ ಪದಾದಿ, ಪದಮಧ್ಯ ಮತ್ತು ಪದಾಂತ್ಯದಲ್ಲಿಯ ವ್ಯತ್ಯಾಸಗಳನ್ನು ಬಳಕೆ ಮತ್ತು ರಚನೆಯ ದೃಷ್ಟಿಯಿಂದ ಅಧ್ಯಯನ ಮಾಡಿದ್ದಾರೆ. ಬರವಣಿಗೆಯ ದೋಷಗಳಿಗೆ ಕಾರಣಗಳನ್ನು ಪತ್ತೆ ಹಚ್ಚಿ ಪರಿಹಾರೋಪಾಯ ಕ್ರಮಗಳನ್ನು ಸೂಚಿಸಿದ್ದಾರೆ. ಈ ಅಧ್ಯಯನವು ದ್ವಿತೀಯ ಭಾಷೆಯಾಗಿ ಆಂಗ್ಲ ಮಾಧ್ಯಮದಲ್ಲಿ ಕನ್ನಡ ಕಲಿಯುವ ತೆಲುಗು, ಉರ್ದು, ತಮಿಳು, ಹಿಂದಿ, ಭಾಷಿಕ ಮಕ್ಕಳನ್ನು ಕುರಿತು ಅಧ್ಯಯನ ಮಾಡುವಲ್ಲಿ ಪೂರಕ ಸಾಮಗ್ರಿಗಳನ್ನು ಒದಗಿಸಿಕೊಟ್ಟಿದೆ. ಈ ಹಿನ್ನೆಲೆಯಲ್ಲಿ ಕನ್ನಡ ಬಳಕೆ, ಸಾಮಾಜಿಕ ವಿನ್ಯಾಸ ಪುಸ್ತಕದ ಬಿಡಿ ಬಿಡಿ ಲೇಖನಗಳು ಒಟ್ಟಾರೆ ಭಾಷೆ,

ಕಲಿಕೆ, ಬೋಧನೆ, ಮಾಧ್ಯಮ ಸಮುದಾಯಗಳ ಭಾಷೆ ಕುರಿತಾದ ಉತ್ತಮವಾದ ವಿಚಾರಗಳನ್ನು ಇಡಿಯಾಗಿ ಬಿಚ್ಚಿಟ್ಟಿವೆ.

**"ಭಾರತದಲ್ಲಿ ಶಿಕ್ಷಣದ ಉದಯ"(೨೦೦೬)** ಎಂಬ ಕೃತಿಯನ್ನು ಮುನಿ ಮತ್ತು ರಾಮು ಅವರು ರಚಿಸಿದ್ದಾರೆ. ಇದು ಬಿ.ಇಡಿ ಮತ್ತು ಶಿಕ್ಷಣ ವಿದ್ಯಾರ್ಥಿಗಳಿಗೆ ಉಪಯುಕ್ತವಾದ ಕೃತಿಯಾಗಿದೆ. ಇದರಲ್ಲಿ ಭಾರತದಲ್ಲಿರುವ ಶೈಕ್ಷಣಿಕ ಪರಂಪರೆ, ಉದಯಿಸುತ್ತಿರುವ ಭಾರತ, ಶಿಕ್ಷಣದ ಪ್ರಚಲಿತ ಸಂಗತಿಗಳು, ಶೈಕ್ಷಣಿಕ ಅವಕಾಶಗಳು ಮುಂತಾದ ಅಂಶಗಳನ್ನು ಕುರಿತು ವಿವರಿಸಿದ್ದಾರೆ.

ಕನ್ನಡ ಭಾಷೆ, ಕನ್ನಡ ಭಾಷಿಕ ಸಮಾಜ ಮತ್ತು ಶಿಕ್ಷಣ ವ್ಯವಸ್ಥೆ ನಡುವೆ ಸಂಬಂಧ ಕುರಿತ **"ಭಾಷೆ ಸಮಾಜ ಶಿಕ್ಷಣ"** (೨೦೧೧) ಎಂಬ ಕೃತಿಯನ್ನು ಡಾ.ಅಶೋಕಕುಮಾರ ರಂಜೇರೆ ಅವರು ರಚಿಸಿದ್ದಾರೆ. ಈ ಕೃತಿಯಲ್ಲಿ ಹಲವು ಲೇಖನಗಳು ಕನ್ನಡ ಭಾಷೆ, ಕನ್ನಡ ಭಾಷೆಯನ್ನು ಬಳಸುತ್ತಿರುವ ಸಮಾಜ ಮತ್ತು ಕನ್ನಡ ಸಮಾಜದಲ್ಲಿ ಕನ್ನಡ ಮಕ್ಕಳಿಗೆ ನೀಡುವ ಶಿಕ್ಷಣ ಯಾವ ಮಾಧ್ಯಮದಲ್ಲಿರಬೇಕು ಎನ್ನುವ ಹಲವು ಚರ್ಚೆಗಳು ಮುಖ್ಯವಾಗಿವೆ. ಆ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡ ಕಲಿಕೆ ಎಷ್ಟರ ಮಟ್ಟಿಗೆ ಫಲಕಾರಿಯಾಗುತ್ತದೆ ಎಂಬುದನ್ನು ತಿಳಿಯಲು ಸಹಾಯಕವಾಗಿದೆ.

**"ಆಡಿ ಕಲಿಯೋಣ ಕನ್ನಡ"** (೨೦೧೧) ಎಂಬ ಬೇದ್ರೆ ಮಂಜುನಾಥ ಇವರ ಕೃತಿಯಲ್ಲಿ ಕನ್ನಡ ಕಲಿಕೆಗೆ ಸಂಬಂಧಿಸಿದ ಹಲವು ಪ್ರಯೋಗಗಳನ್ನು ಗುರುತಿಸಬಹುದು. ಕನ್ನಡ ಕಲಿಯಲಿಕ್ಕೂ ಆಟಗಳಿವೆಯೇ? ಎಂದು ನಮಗೆ ಭಾಸವಾಗುತ್ತದೆ. ಹೀಗೆಂದು ಬಹುತೇಕ ತಂದೆ ತಾಯಿಗಳು ಕೇಳುವುದುಂಟು. ಇದಕ್ಕೆ ಉತ್ತರ ನೀಡುವುದೇ ಈ ಕೃತಿಯ ಮಹತ್ವವಾಗಿದೆ. ಮಕ್ಕಳು ಇಂಗ್ಲೀಷ್ ಮಾಧ್ಯಮ ಶಾಲೆಗಳಿಗೆ ಸೇರಿ ಅತ್ತ ಇಂಗ್ಲೀಷ್, ಇತ್ತ ಕನ್ನಡ ಎರಡನ್ನೂ ಸರಿಯಾಗಿ ಕಲಿಯದೇ ಇರುವಂತಹ ಈ ಸಂದರ್ಭದಲ್ಲಿ ಅವರು ಆಟದ ಮೂಲಕ ಕನ್ನಡ ಕಲಿಯಲು ಸಾಧ್ಯ ಎಂಬುದನ್ನು ತೋರಿಸುವ ಪ್ರಯತ್ನ ಮಾಡಿದ್ದಾರೆ. ಕನ್ನಡವು ಒಂದು ಧ್ವನ್ಯಾತ್ಮಕವಾದ ಭಾಷೆಯಾಗಿದ್ದು, ಅದನ್ನು ಧ್ವನಿಯ ಮೂಲಕವೇ ಕಲಿಸಬೇಕಾಗಿದೆ. ಪ್ರಸ್ತುತ ಪ್ರಾಥಮಿಕ ಶಾಲೆಗಳಲ್ಲಿ ಬಳಸುತ್ತಿರುವಂತಹ ರ,ಗ,ಸ,ದ,ಅ ಎಂಬ ಮಾದರಿ ಧ್ವನಿ ಲಿಪಿ ಇಲ್ಲದ ಭಾಷೆಗಳ ಅಂದರೆ ಅಕ್ಷರ ಲಿಪಿಯ ಮಾದರಿ ಅನುಸರಿಸುತ್ತಾ ಮಕ್ಕಳಿಗೆ ತಪ್ಪು ವಿಧಾನದ ಮೂಲಕ ಹೇಳಿಕೊಟ್ಟಂತಾಗುತ್ತದೆ.

ಈ ಹಿಂದಿನ ಅ, ಆ, ಇ, ಈ ........ ಬಾಯ್ದೆರೆ ಪಾಠದ ವಿಧಾನ ಹಾಗೂ ೦, ರ, ಟ, ಈ, ಕ....... ವಿಧಾನದ ಬರಹ ಪದ್ಧತಿಯೇ ಶ್ರೇಷ್ಠವೆಂದು ಶಾಸ್ತ್ರಜ್ಞರು ಪರಿಗಣಿಸಿರುವುದನ್ನು ಪಠ್ಯಪುಸ್ತಕ ಸಮಿತಿಯವರು ಗಮನಿಸಬೇಕಾಗಿದೆ. ಈ ನಿಟ್ಟಿನಲ್ಲಿ ಭಾಷಾ ಆಟಗಳನ್ನು ಪಠ್ಯಪೂರಕ ಚಟುವಟಿಕೆಯಾಗಿ ಬಳಸಿ ಕಲಿಕೆಯನ್ನು ಆಸಕ್ತಿದಾಯಕವನ್ನಾಗಿಸಿದ ಕ್ರಿಯೆ ಇತ್ತೀಚೆಗೆ ಕಂಡು ಬರುತ್ತಿದೆ.

**"ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ"** (೨೦೧೨) ಕೃತಿಯಲ್ಲಿ ಶ್ರೀನಾಥಶಾಸ್ತ್ರಿ ಚಿ.ವಿ. ರಘುನಾಥ ಎನ್.ಎಸ್. ಅವರುಗಳ ಲೇಖನಗಳು ಒಳಗೊಂಡಿವೆ. ಶಿಕ್ಷಣದ ಭಾಷೆ ಮತ್ತು ಬುದ್ಧಿವಂತಿಕೆ ಭಾರತದಲ್ಲಿ ಇಂಗ್ಲಿಷ್ ಭಾಷೆಯ ಸ್ಥಾನ ಈ ಶತಮಾನದ ಪ್ರಶ್ನೆ. ಮಗು ಯಾವಾಗ ಎರಡು ಭಾಷೆಗಳನ್ನು ಕಲಿಯಬೇಕು? ಬೆಳೆಯುವ ಮಗು, ಭಾಷೆ ಮತ್ತು ಶಿಕ್ಷಣ, ಪ್ರಾಥಮಿಕ ಶಿಕ್ಷಣದ ಸುಧಾರಣೆ, ಕುರಿತಂತಹ ವಿಚಾರಗಳನ್ನು ವಿವರಿಸಿದ್ದಾರೆ.

**"ಶಾಲೆಯಲ್ಲಿ ಹಿಂದುಳಿಯುವಿಕೆ"** (೨೦೧೨) ಎಂಬ ಕೃತಿಯಲ್ಲಿ ಪುರುಷೋತ್ತಮ ಜಿ. ಅವರು ಒಂದು ಮಗು ಶಾಲೆಯಲ್ಲಿ ಕಲಿಯುವುದರಲ್ಲಿ ಹಿಂದುಳಿಯುವುದಕ್ಕೆ ನಾನಾ ರೀತಿಯ ಕಾರಣಗಳು ಇವೆ ಎಂಬುದನ್ನು ವಿವರಿಸಿದ್ದಾರೆ. ಮಗುವಿಗೆ ಅಕ್ಷರ ಅಭ್ಯಾಸದ ಕೊರತೆ ಮಗುವನ್ನು ಸರಿಯಾಗಿ ಗಮನಿಸದಿರುವುದು ಸ್ಪಷ್ಟವಾಗಿ ಮಾತನಾಡಲು ಬಾರದೆ ಇರುವುದು, ದೃಷ್ಟಿದೋಷದಿಂದ ಹೀಗೆ ಇತ್ಯಾದಿ ಕಾರಣಗಳಿಂದ ಕಲಿಕೆಯಲ್ಲಿ ಮಗು ಹಿಂದುಳಿಯುತ್ತಿದೆ ಎಂದು ವೈಜ್ಞಾನಿಕ ಹಿನ್ನೆಲೆಯಲ್ಲಿ ಚರ್ಚಿಸಿ ವಿಶ್ಲೇಷಿಸಿದ್ದಾರೆ.

ಪ್ರೊ.ಬರಗೂರು ರಾಮಚಂದ್ರಪ್ಪ ಅವರ **"ಕನ್ನಡ ಪ್ರಜ್ಞೆ"** (೨೦೧೩) ಎಂಬ ಕೃತಿಯಲ್ಲಿ ಕನ್ನಡ ಭಾಷೆ, ಕಲಿಕೆ, ಶಿಕ್ಷಣ, ಮಾಧ್ಯಮ ಕುರಿತಾದ ಹಲವು ಬಿಡಿ ಬಿಡಿ ಲೇಖನಗಳನ್ನು ವಿಶ್ಲೇಷಣಾತ್ಮಕವಾಗಿ ಬರೆದಿದ್ದಾರೆ. ಅವರ ಲೇಖನಗಳಲ್ಲಿ ಪ್ರಮುಖವಾಗಿ ಎಂಟನೇ ಲೇಖನವಾದ 'ಇಂಗ್ಲೀಷ್ ಕಲಿಕೆ ಕನ್ನಡ ವಿರೋಧಿಯೇ?' ಎನ್ನುವ ಲೇಖನವನ್ನು ಗಮನಿಸುವುದಾದರೆ ಸಮಕಾಲೀನ ಸಂದರ್ಭದಲ್ಲಿ ದಿನನಿತ್ಯ ಶೈಕ್ಷಣಿಕ ವಲಯದಲ್ಲಿ ಚರ್ಚೆಯಾಗುತ್ತಿರುವ ಇಂಗ್ಲೀಷ್ ಕಲಿಕೆ ಕುರಿತಾದ ಚಿಂತನೆ ಪ್ರಧಾನವಾಗಿದ್ದು, ಇಂಗ್ಲೀಷ್‌ನ್ನು ಕಲಿಸುವ ಬಗ್ಗೆ ತೋರಿಸಿದ ಆಸಕ್ತಿ ಫಲವಾಗಿ ಕನ್ನಡ ಪರ ಚಿಂತಕರು ಮತ್ತು ಸಾಹಿತಿಗಳ ವಲಯದಲ್ಲಿ ಬಂದ ವಿಭಿನ್ನ ಅಭಿಪ್ರಾಯಗಳನ್ನು ಇಲ್ಲಿ ಸಂಗ್ರಹಿಸಿ ಪ್ರತಿಕ್ರಿಯಿಸಿದ್ದಾರೆ. ಜಸ್ಟೀಸ್ ರಾಮಜೋಯಿಸ್, ಡಾ.ಕೆ.ಮರುಳಸಿದ್ದಪ್ಪ, ದೇ.ಜವರೇಗೌಡ, ಚಂದ್ರಶೇಖರ ಪಾಟೀಲರು ಮುಂತಾದ ಚಿಂತಕರ ಚಿಂತನೆಗಳನ್ನು ಇಲ್ಲಿ

ವಿಶ್ಲೇಷಣೆಗೊಳಪಡಿಸಲಾಗಿದೆ. ಕನ್ನಡ ಕಲಿಕೆಗೆ ಇಂಗ್ಲೀಷ್ ಭಾಷಾ ಕಲಿಕೆ ವಿರೋಧವಲ್ಲ. ಮನೋವೈಜ್ಞಾನಿಕ ನೆಲೆಯಲ್ಲಿ ವಿದ್ಯಾರ್ಥಿಯ ಮಾನಸಿಕ ಮಟ್ಟವನ್ನು ಗಮನಿಸಿದಾಗ ೧೨ನೇ ವಯಸ್ಸಿನವರೆಗಿನ ಮಕ್ಕಳಲ್ಲಿ ಹೆಚ್ಚು ಭಾಷೆಗಳನ್ನು ಕಲಿಯುವ ಸಾಮರ್ಥ್ಯವಿರುತ್ತದೆ. ಇದನ್ನು ಗಮನಿಸಿ ಕರ್ನಾಟಕದಲ್ಲಿ ಒಂದು ಭಾಷೆಯಾಗಿ ಇಂಗ್ಲೀಷನ್ನು ಕಿರಿಯ ಪ್ರಾಥಮಿಕ ಹಂತದವರೆಗೂ ಕಲಿಸುವುದು ಭಾಷಾಭಿಮಾನ ವಾದಿಗಳ ನಿಲವನ್ನು ಪ್ರಶ್ನಿಸಬಹುದು.

ನೆರೆಯ ಕೇರಳ, ತಮಿಳುನಾಡು, ಮಹಾರಾಷ್ಟ್ರ ಮತ್ತು ಪಂಜಾಬ್ ರಾಜ್ಯಗಳಲ್ಲಿರುವ ಕಿರಿಯ ಪ್ರಾಥಮಿಕ ಶಾಲೆಯ ಮಕ್ಕಳು ನಾಲ್ಕು ಭಾಷೆಗಳನ್ನು ಕಲಿಯುವ ಸಂದರ್ಭದಲ್ಲಿ ಕರ್ನಾಟಕದ ಮಕ್ಕಳು ಬೌದ್ಧಿಕ ಸಾಮರ್ಥ್ಯ ಕಡಿಮೆ ಇದೆ ಅಥವಾ ಹೊರೆ ಹೆಚ್ಚಾಗುತ್ತದೆ ಎಂಬ ತೀರ್ಮಾನಗಳನ್ನು ಪರಿಶೀಲನೆಗೆ ಒಳಪಡಿಸುವ ಮೂಲಕ ಒಂದು ಭಾಷೆಯಾಗಿ ಇಂಗ್ಲಿಷನ್ನು ಕಲಿಸುವುದು ಸ್ಪರ್ಧಾತ್ಮಕ ಜಗತ್ತಿಗೆ ಮಗುವನ್ನು ಸಿದ್ಧಗೊಳಿಸುವ ಕ್ರಮ ಎಂದರೆ ತಪ್ಪಾಗಲಾರದು. ಬರಗೂರರ ಕನ್ನಡ ಕಲಿಕೆಯ ಪ್ರಾಶಸ್ತ್ಯದೊಂದಿಗೆ ಒಂದು ಭಾಷೆಯಾಗಿ ಇಂಗ್ಲೀಷ್ ಕಲಿಕೆಯ ಪರಿಕಲ್ಪನೆ ನಮ್ಮನ್ನು ಯೋಚನೆಗೀಡು ಮಾಡುತ್ತದೆ. ಸ್ವಾಭಿಮಾನದ ಗೋಜಿಗೆ ಹೋಗಿ ವಿದ್ಯಾರ್ಥಿಗಳ ಬದುಕಿನ ಪ್ರಶ್ನೆಯಾಗಿ ಶಿಕ್ಷಣ ಉಳಿಯಬಾರದೆಂದರೆ ಇಂಗ್ಲಿಷ್ ಕಲಿಕೆ ಅವರ ಬದುಕಿನ ಒಂದು ಮಾರ್ಗಸೂಚಿಯಾಗಬೇಕು ಎನ್ನುವ ಆಶಯವನ್ನು ಈ ಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ.

**"ನಮ್ಮ ಶಿಕ್ಷಣ"** (ಪ್ರಧಾನ ಸಂಪಾದಕರು: ಡಾ.ವಿ.ರಂಗಸ್ವಾಮಿ, ಲೇಖಕರು-ಗಿರಿಜಾರಾಜ್ ಎಲ್.) ಅವರ ಕೃತಿಯಲ್ಲಿ ಕನ್ನಡ ಭಾಷೆ, ಸಾಹಿತ್ಯಕ್ಕೆ ಸಾಕಷ್ಟು ಇತಿಹಾಸವಿದೆ. ದೊಡ್ಡ ಪರಂಪರೆಯೂ ಇದೆ. 'ಕನ್ನಡ' ಎಂಬ ಪದ ಈ ಭಾಷೆಯ ಹೆಸರನ್ನು ಸೂಚಿಸುವಂತೆಯೇ ಈ ಭಾಷೆಯನ್ನಾಡುವ ಜನ ವಾಸಿಸುವ ಪ್ರದೇಶವನ್ನು ಕೂಡ ಸೂಚಿಸುತ್ತದೆ ಎಂದು ವಿವರಿಸಿದ್ದಾರೆ. ಶಿಕ್ಷಣ ಎಂದರೇನು? ಸ್ವಾತಂತ್ರ್ಯ ಪೂರ್ವ ಭಾರತದಲ್ಲಿ ಶೈಕ್ಷಣಿಕ ವಿಕಾಸ ಹಾಗೂ ಸ್ವಾತಂತ್ರ್ಯ ಭಾರತದಲ್ಲಿ ಶೈಕ್ಷಣಿಕ ವಿಕಾಸ ಕುರಿತು ಲೇಖನಗಳನ್ನು ಬರೆದಿದ್ದಾರೆ. ಪ್ರಾಥಮಿಕ ಶಿಕ್ಷಣ ಮಕ್ಕಳ ವಿಕಸನದಲ್ಲಿ ಹೇಗೆ ಪಾತ್ರ ನಿರ್ವಹಿಸುತ್ತದೆ ಎಂಬುದನ್ನು ಸ್ಪಷ್ಟೀಕರಿಸಿದ್ದಾರೆ. ಪರೀಕ್ಷೆಗಳು, ಮೌಲ್ಯಮಾಪನ ಪ್ರಕ್ರಿಯೆಯನ್ನು ಕುರಿತು ಹಲವು ವಿಷಯಗಳನ್ನು ಕೂಲಂಕುಶವಾಗಿ ಚರ್ಚಿಸಿದ್ದಾರೆ.

**"ರಾಷ್ಟ್ರೀಯ ಶಿಕ್ಷಣ ನೀತಿ ೧೯೮೬ ಪ್ರಗತಿ ಪರಿಶೀಲನೆ"** ಎಂಬ ಕೃತಿ ಡಾ.ಎಚ್.ಎಂ. ಕಾಶೀನಾಥ ಅವರ ಕೃತಿ ಇದರಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿಯ ರೂಪುರೇಷೆಗಳು, ರಾಷ್ಟ್ರೀಯ ಶಿಕ್ಷಣ ನೀತಿಯ ಪ್ರಗತಿ ಪರಿಶೀಲನೆ ಹಾಗೂ ಚೌಕಟ್ಟಿನ ಸ್ವರೂಪ ಕುರಿತಾದ ವಿವರಗಳನ್ನು ಬರೆದಿದ್ದಾರೆ.

**೨.೫ ಸಂಚಿಕೆಗಳು**

ಹಲವಾರು ಕೃತಿಗಳು, ಪಿಎಚ್.ಡಿ ಪ್ರಬಂಧಗಳನ್ನು ಅಧ್ಯಯನ ಮಾಡಿ ಮಾಹಿತಿಗಳನ್ನು ಸಂಗ್ರಹಿಸಿದಂತೆ ಕನ್ನಡ ಭಾಷಾಧ್ಯಯನ ವಿಭಾಗದ ಪ್ರಕಟಣೆಗಳಲ್ಲೊಂದಾದ 'ನಮ್ಮ ಕನ್ನಡ' ಸಂಚಿಕೆಯ ಪರಾಮರ್ಶನವನ್ನು ಕೈಗೊಂಡಿದ್ದು, ಹಲವು ಸಂಚಿಕೆಗಳನ್ನು ಅಧ್ಯಯನ ಮಾಡಲಾಗಿದೆ.

"ನಮ್ಮ ಕನ್ನಡ" ಎಂಬ ಸಂಚಿಕೆಯಲ್ಲಿ **"ಪ್ರಾಥಮಿಕ ಹಂತದ ಶಿಕ್ಷಣದ ಸಮಸ್ಯೆಗಳು"** (ಭಾಷಾ ಬೋಧನೆ ಮತ್ತು ಭಾಷಾ ಕಲಿಕೆಗೆ ಸಂಬಂಧಿಸಿದಂತೆ) ಡಾ.ಅಶೋಕಕುಮಾರ ರಂಜೇರೆ ಅವರ ಲೇಖನವನ್ನು ಗಮನಿಸಿದರೆ ಪ್ರಾಥಮಿಕ ಹಂತದ ಶಿಕ್ಷಣ ಸಮಸ್ಯೆಗಳ ಮಹಾಪೂರವೇ ಆಗಿದೆ ಎನ್ನಬಹುದು. ನಮ್ಮ ಶಿಕ್ಷಣ ವ್ಯವಸ್ಥೆಯನ್ನು ಗಮನಿಸಿದಾಗ ಭಾರತೀಯ ಪರಂಪರೆಯಿಂದ ರೂಪುಗೊಂಡಿದ್ದಲ್ಲ ಅಥವಾ ಭಾರತೀಯರೇ ರೂಪಿಸಿಕೊಂಡಿದ್ದಲ್ಲ. ಬ್ರಿಟಿಷರು ಭಾರತಕ್ಕೆ ಬಂದ ನಂತರ 'ಮೆಕಾಲೆ'ಯಿಂದ ಸೃಷ್ಟಿಯಾದ ಮಾದರಿ ಶಿಕ್ಷಣ ನಮ್ಮಲ್ಲಿ ಜಾರಿಯಲ್ಲಿದೆ. ಸುಮಾರು ಶತಮಾನಗಳಿಂದ ಚಲಾವಣೆಯಲ್ಲಿರುವ ಇಂದಿನ ಬ್ರಿಟಿಷ್ ಮಾದರಿಯ ಈ ಶಿಕ್ಷಣ ಕ್ರಮವನ್ನು ಅಷ್ಟು ಸುಲಭವಾಗಿ ಬದಲಾಯಿಸಲು ಸಾಧ್ಯವಿಲ್ಲ.

ಕಲಿಕೆಯ ಬುನಾದಿ ಪ್ರಾಥಮಿಕ ಶಿಕ್ಷಣ, ಇಲ್ಲಿ ಭದ್ರತೆಯನ್ನು ರೂಪಿಸಿದರೆ ಮಾತ್ರ ವಿದ್ಯಾರ್ಥಿಗಳ ಜೀವನವನ್ನು ರೂಪಿಸಬಹುದು. ಪ್ರಾಥಮಿಕ ಹಂತದಲ್ಲಿ ವಿದ್ಯಾರ್ಥಿ ಮತ್ತು ಶಿಕ್ಷಕರ ಸಮಸ್ಯೆಗಳನ್ನು ಪತ್ತೆಹಚ್ಚಿ ಅವುಗಳಿಗೆ ಪರಿಹಾರಗಳನ್ನು ಹುಡುಕುವ ಪ್ರಯತ್ನ ಮಾಡಲಾಗಿದೆ. ಸಮೀಕ್ಷಾ ವಿಧಾನದಲ್ಲಿ ಬಳ್ಳಾರಿ ಮತ್ತು ಹೊಸಪೇಟೆಯ ಕೆಲವೊಂದು ಶಾಲೆಗಳಿಗೆ ಭೇಟಿ ನೀಡಿ, ಶಿಕ್ಷಕರ ಸಂದರ್ಶನ ಮಾಡಲಾಗಿದೆ. ಶಿಕ್ಷಕರ ಸಮಸ್ಯೆಗಳು ಪಠ್ಯಪುಸ್ತಕದಲ್ಲಿಯ ಕೆಲವೊಂದು ತಪ್ಪುಗಳು ಮತ್ತು ಬೋಧನಾ ಕ್ರಮದ ಕುರಿತು ಹಲವು ಚರ್ಚೆಗಳನ್ನು ಮಾಡಿದ್ದಾರೆ. ಪ್ರಾಥಮಿಕ ಹಂತದ ಶಿಕ್ಷಣ ಪದ್ಧತಿಯಲ್ಲಿ ಅನೇಕ ತಿದ್ದುಪಡಿಗಳನ್ನು ತರುವುದು ಹಾಗೂ ತರಬೇತಿ ಹೊಂದಿದ ಶಿಕ್ಷಕರ ನೇಮಕಾತಿ ಮಾಡುವುದು ಪ್ರಮುಖವಾದ ಅಂಶಗಳಾಗಿವೆ. ಬೋಧನೆಯನ್ನು ಒಂದು ಕಲೆಯಾಗಿ ರೂಪಿಸಿಕೊಳ್ಳುವ ಆಸಕ್ತಿಯುಳ್ಳ ಶಿಕ್ಷಕರನ್ನು ನೇಮಕ ಮಾಡಿದಾಗ ಪ್ರಾಥಮಿಕ ಶಾಲಾ ಹಂತದ ಶಿಕ್ಷಣದ ಸಮಸ್ಯೆಗಳನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಬಹುದು ಎಂಬ ನಿಲುವನ್ನು ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ.

"ನಮ್ಮ ಕನ್ನಡ" ಸಂಚಿಕೆ ೧೧ರಲ್ಲಿ **"ಕನ್ನಡ ಉಳಿಯುವುದೇ?"** ಎಂಬ ಲೇಖನದಲ್ಲಿ ಕೆ.ವಿ.ನಾರಾಯಣ ಅವರು ಭಾಷೆ ನಾಶವಾಗಲು ಹಲವಾರು ಕಾರಣಗಳಿರುತ್ತವೆ ಎಂಬುದನ್ನು ವಿವರಿಸಿದ್ದಾರೆ. ಒಂದು ಭಾಷೆಯನ್ನಾಡುವ ಜನರು ತಮ್ಮ ಭಾಷೆಯನ್ನು ಬಿಟ್ಟು ಮತ್ತೊಂದು ಭಾಷೆಯ ಪ್ರಭಾವಕ್ಕೆ ಒಳಗಾಗಿ ಮುಂದಿನ ದಿನಗಳಲ್ಲಿ ತಮ್ಮ ಭಾಷೆಯನ್ನು ತಮಗೆ ಉಳಿಸಿಕೊಳ್ಳಲು ಆಗದೇ ಹೋಗಬಹುದು. ಅಂತಹ ಪರಿಸ್ಥಿತಿ ನಮ್ಮ ಕನ್ನಡ ಭಾಷೆಗೆ ಬರಬಹುದು ಎಂಬುದನ್ನು ವಿವರಿಸಿದ್ದಾರೆ.

"ನಮ್ಮ ಕನ್ನಡ" ಸಂಚಿಕೆ ೩೪ರಲ್ಲಿ **"ಬರವಣಿಗೆ ದೋಷಗಳು"** ಎಂಬ ಲೇಖನದಲ್ಲಿ ಕೆ.ವಿ.ನಾರಾಯಣ ಅವರು ಕನ್ನಡ ಬರವಣಿಗೆಯಲ್ಲಿ ಮತ್ತು ಮುದ್ರಣದಲ್ಲಿ ಹಲವಾರು ಕಾಗುಣಿತ ದೋಷಗಳು ಉಂಟಾಗುತ್ತವೆ ಎಂದಿದ್ದಾರೆ. ಮುಖ್ಯವಾಗಿ ಮಹಾಪ್ರಾಣ 'ಧ' ಕಾರವನ್ನು ಹೆಚ್ಚಾಗಿ ಅಲ್ಪಪ್ರಾಣವಾಗಿ ಬಳಸುತ್ತಿದ್ದರು. ಅದನ್ನು ಗಮನಿಸದೇ ಹೋಗುವ ಪ್ರಸಂಗಗಳು ಹೆಚ್ಚಾಗುತ್ತಿವೆ.

"ನಮ್ಮ ಕನ್ನಡ" ಎಂಬ ಸಂಚಿಕೆಯ ಸಂಪಾದಕರು ಡಾ.ಡಿ.ಪಾಂಡುರಂಗಬಾಬು ಅವರು ಆಗಿದ್ದು, ಈ ಕೃತಿಯ ೫೯ರ ಸಂಚಿಕೆಯಲ್ಲಿ ಕನ್ನಡ ಭಾಗದಲ್ಲಿ ಮಂಜುಳ ಎನ್.ಕೆ. ಅವರು **'ಬಳ್ಳಾರಿ ಜಿಲ್ಲೆಯ ಕನ್ನಡದ ಮೇಲೆ ತೆಲುಗಿನ ಪ್ರಭಾವ' ಕೆಲವು ಸಾಮಾನ್ಯ ಲಕ್ಷಣಗಳು(ತೆಲುಗು)** ಎಂಬ ಲೇಖನದಲ್ಲಿ ಬಳ್ಳಾರಿ ಪ್ರಾಥಮಿಕ ಶಾಲೆಯ ತೆಲುಗು ಮಾತೃಭಾಷೆಯುಳ್ಳ ಮಕ್ಕಳ ವ್ಯಾವಹಾರಿಕ ಕನ್ನಡ ಭಾಷೆ ಯಾವ ರೀತಿ ಇರುತ್ತದೆ ಎನ್ನುವುದನ್ನು ಇಲ್ಲಿ ಗಮನಿಸಲಾಗಿದೆ. ಆ ಮಕ್ಕಳ ಮಾತೃಭಾಷೆ ತೆಲುಗಾಗಿದ್ದು, ಶಾಲೆಯಲ್ಲಿ ಕನ್ನಡವನ್ನು ಕಲಿಯುತ್ತಾರೆ. ಈ ಮಕ್ಕಳ ವ್ಯಾವಹಾರಿಕ ಕನ್ನಡದ ಮೇಲೆ ತೆಲುಗಿನ ಪ್ರಭಾವ ಧ್ವನಿ ಮತ್ತು ಪದದ ಹಂತದಲ್ಲಿ ಗುರುತಿಸಿದ್ದಾರೆ.

ಉದಾಹರಣೆಗೆ: ಮುಳ್ಳು-ಮುಲ್ಲು- ಮುಲ್ಲು,
ಮಣ್ಣು- ಮನ್ನು- ಮನ್ನು

ಇಲ್ಲಿ ಮಕ್ಕಳು 'ಳ' ಕಾರಕ್ಕೆ ಬದಲಾಗಿ 'ಲ'ಕಾರ, ಮೂರ್ಧನ್ಯ ಅನುನಾಸಿಕ ಧ್ವನಿಯ 'ಣ'ಗೆ ಬದಲಾಗಿ ದಂತ್ಯ ಅನುನಾಸಿಕ ಧ್ವನಿ 'ನ' ಬಳಕೆ ಮಾಡಿದ್ದಾರೆ. ಹಾಗೆಯೇ ಸಂಖ್ಯಾವಾಚಗಳಲ್ಲಿ 'ಹನ್ನೆರಡ'ನ್ನು ಅನ್ನೆಂಡು ಎಂದು ಉಚ್ಚರಿಸುತ್ತಾರೆ ಎಂದು ಹಲವು ಧ್ವನಿ ಪ್ರಯೋಗಗಳನ್ನು ಕುರಿತು ಉಲ್ಲೇಖಿಸಿದ್ದಾರೆ. ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ಅನ್ಯ ಮಾತೃಭಾಷೆಯುಳ್ಳ ಮಕ್ಕಳ ವ್ಯಾವಹಾರಿಕ ಭಾಷೆ

ಭಿನ್ನತೆಯಿಂದ ಕೂಡಿರುತ್ತದೆ ಎಂಬುದನ್ನು ದಾಖಲಿಸುವಲ್ಲಿ ಈ ಲೇಖನ ಅಧ್ಯಯನಕ್ಕೆ ಮಾಹಿತಿಯನ್ನು ಒದಗಿಸುತ್ತದೆ.

**೨.೬ ಪತ್ರಿಕೆಗಳು**

ಪರಮೇಶ್ವರ ಭಟ್ ಅವರ ಲೇಖನ **"ಪ್ರಶ್ನೆ : ವಿದ್ಯಾರ್ಥಿ –ಬೋಧಕ"** ದಿನಾಂಕ; ೨೩–೧೦–೨೦೧೦ರಂದು ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದರಲ್ಲಿ ಅವರು ಬೋಧಕ ಮತ್ತು ವಿದ್ಯಾರ್ಥಿಯ ಮಧ್ಯೆ ಸಂಪರ್ಕ ಸಾಧಿಸುವ, ಬೆಳೆಸುವ ಪ್ರಮುಖ ಸಾಧನವೇ ಪಶ್ನೆ ಎನ್ನುತ್ತಾರೆ. ಬೋಧನೆಯ ಸಂದರ್ಭದಲ್ಲಿ ಪ್ರಶ್ನೆಗಳು ಸಂಶಯಾಸ್ಪದವಾಗಿರಕೂಡದು. ಪ್ರಶ್ನೆ ಅರ್ಥವಾಗಿ ವಿದ್ಯಾರ್ಥಿಗಳು ಉತ್ತರಿಸುವ ರೀತಿಯಲ್ಲಿ ಪ್ರಶ್ನೆಗಳಿರಬೇಕು ಎನ್ನುತ್ತಾರೆ. ಶೈಕ್ಷಣಿಕ ಪ್ರಗತಿಯನ್ನು ಸಾಧಿಸುವಲ್ಲಿ ವಿದ್ಯಾರ್ಥಿ–ಬೋಧಕರ ನಡುವೆ ಪ್ರಶ್ನೋತ್ತರಗಳು ಸಾಧನವಾಗಿ ಕಾರ್ಯನಿರ್ವಹಿಸುತ್ತವೆ ಎಂದು ವಿವರಿಸಿದ್ದಾರೆ.

ಜಯದೇವ ಜಿ.ಎಸ್. ಅವರ ಲೇಖನ **"ಸರಕಾರಿ ಶಾಲೆಗಳನ್ನು ಉಳಿಸಲು ಗುಣಮಟ್ಟದ ಶಿಕ್ಷಣವೆ ಪರಿಹಾರ"** ೨೨–೧೨.೨೦೧೧ರಂದು ಪ್ರಜಾವಾಣಿಯಲ್ಲಿ ಪ್ರಕಟವಾದ ಲೇಖನ. ಸರಕಾರಿ ಶಾಲೆಗಳಲ್ಲಿ ದಾಖಲಾತಿ ಪ್ರಮಾಣ ಕಡಿಮೆಯಾಗಿ ಶಾಲೆ ಮುಚ್ಚುವ ಪರಿಸ್ಥಿತಿಗೆ ಬರಲು ಕಾರಣ ಸರಕಾರಿ ಶಾಲೆಗಳ ಕಲಿಕಾ ಗುಣಮಟ್ಟವೇ ಆಗಿದೆ. ಆದ್ದರಿಂದ ಸರಕಾರಿ ಶಾಲೆಗಳಲ್ಲಿ ಬೋಧನಾ ಗುಣಮಟ್ಟವನ್ನು ಹೆಚ್ಚಿಸಬೇಕು. ಬೋಧಕರಿಗೆ ತರಬೇತಿಗಳನ್ನು ನೀಡಿ ಕಾರ್ಯಾಗಾರಗಳನ್ನು ಆಯೋಜಿಸಬೇಕು ಎಂದಿದ್ದಾರೆ.

ನವೀನ ಕುಮಾರ್ ಎಂ. ಅವರ ಲೇಖನ **"ಗುಣಮಟ್ಟದ ಶಿಕ್ಷಣ ಹೊಸ ಸವಾಲು"** ೩೦–೧–೨೦೧೨ರಂದು ಪ್ರಜಾವಾಣಿ ಪತ್ರಿಕೆಯಲ್ಲಿ ಲೇಖನ ಪ್ರಕಟಗೊಂಡಿತ್ತು. ಇವರ ಲೇಖನದಲ್ಲಿ ಶಿಕ್ಷಣದಿಂದ ಕಲಿಕಾರ್ಥಿಗಳು ಸರ್ಕಾರಿ ಶಾಲೆಗಳಲ್ಲಿ ವಂಚಿತರಾಗುತ್ತಿದ್ದಾರೆ. ಶೇಕಡ ೩೯ರಷ್ಟು ಮಕ್ಕಳು ಒಂದರಿಂದ ಒಂಬತ್ತರವರೆಗಿನ ಅಂಕಿಗಳನ್ನು ಸರಿಯಾಗಿ ಗುರುತಿಸುವುದಿಲ್ಲ ಎಂಬ ಅಂಶಗಳು ಸಮೀಕ್ಷೆಯಲ್ಲಿ ಬಹಿರಂಗವಾಗಿವೆ. ಶಿಕ್ಷಣವನ್ನು ಮೂಲಭೂತ ಹಕ್ಕನ್ನಾಗಿಸಿ ಆ ಮೂಲಕ ಶೇ.೧೦೦ ಸಾಕ್ಷರತೆ ಸಾಧಿಸಲು ಎದುರು ನೋಡುತ್ತಿರುವ ಸರ್ಕಾರ ಗುಣಮಟ್ಟದ ಶಿಕ್ಷಣದ ಬಗ್ಗೆ ಚಿಂತಿಸುವ ಕಾಲ ಬಂದಿದೆ ಎಂದಿದ್ದಾರೆ.

ಲೇಖಕರಾದ ಸಾ.ದು.ಶಿವಮಲ್ಲಯ್ಯ ಸಾಸಲಾಪೂರ ಅವರು **"ಮಕ್ಕಳಿಗೆ ಬೇಕು ಭಾಷಾ ಕೌಶಲ್ಯ"** ೨೧–೫–೨೦೧೨ ರಂದು ಪ್ರಜಾವಾಣಿಯಲ್ಲಿ ಒಂದು ಲೇಖನವನ್ನು ಪ್ರಕಟಿಸಿದರು. ಭಾಷಾ ಕೌಶಲ್ಯ ಮಗುವಿನ ಶೈಕ್ಷಣಿಕ ಬೆಳವಣಿಗೆಯ ಮುಖ್ಯ ಹಂತ.

ಆದರೆ ಈಗಿನ ಮಕ್ಕಳಿಗೆ ಸರಿಯಾಗಿ ಬರೆಯಲು ಓದಲು ಬರುವುದಿಲ್ಲ. ಓದುವ ಹವ್ಯಾಸವು ಕಡಿಮೆ ಆಗುತ್ತಿದೆ. ಇದಕ್ಕೆ ಹೊಣೆ ಯಾರು? ಶಿಕ್ಷಕರೋ? ತಂದೆ ತಾಯಿಯರೋ? ವಿದ್ಯಾರ್ಥಿಗಳೋ ಎಂದು ತಮ್ಮ ನಿಲುವುಗಳನ್ನು ಚರ್ಚಿಸಿದ್ದಾರೆ.

ಅನಂತಮೂರ್ತಿ ಯು. ಆರ್. ಅವರ ಲೇಖನ **"ಗ್ರಹಿಕೆಗೆ ಇಂಗ್ಲೀಷ್ ವಿಷಯ ಜ್ಞಾನಕ್ಕೆ ಕನ್ನಡ"** ೨೧-೭-೨೦೧೨ ರಂದು ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟಗೊಂಡ ಲೇಖನದಲ್ಲಿ ಸರಕಾರಿ ಶಾಲೆಗಳಿಗೆ ಸೇರುವ ಮಕ್ಕಳ ಸಂಖ್ಯೆ ಕಡಿಮೆಯಾಗುತ್ತಿರುವುದರಿಂದ ಸರಕಾರ ನೇಮಿಸಿರುವ ಶಿಕ್ಷಕರಿಗೆ ಕೆಲಸವಿಲ್ಲದಂತಾಗಿ ಹಲವು ಶಿಕ್ಷಕರಿಗೆ ಕೆಲಸ ಮಾಡಿಸಿಕೊಳ್ಳದೇ ಸಂಬಳ ಕೊಡಬೇಕಾದ ಪರಿಸ್ಥಿತಿ ಬಂದಿದೆ. ಇಂತಹ ಸಮಸ್ಯೆಯ ಸ್ವರೂಪ ಕುರಿತು ಖಾಸಗಿ ಶಾಲೆ ಮತ್ತು ಸರಕಾರಿ ಶಾಲೆಗಳ ಕ್ಷೇತ್ರ ಅಧ್ಯಯನ ಕೈಗೊಂಡಾಗ ತಿಳಿದು ಬಂದ ನಿಜಸಂಗತಿ ಎಂದರೆ ಶಿಕ್ಷಕರಾಗಿ ಸೇವೆ ಸಲ್ಲಿಸಲು ಬೇಕಾಗುವ ಕನಿಷ್ಠ ಮಟ್ಟದ ಅರ್ಹತೆಯನ್ನು ಹೊಂದದ ಶಿಕ್ಷಕರು ಖಾಸಗಿ ಶಾಲೆಗಳಲ್ಲಿದ್ದಾರೆ. ಆದರೂ ಜನರು ಇಂಗ್ಲಿಷ್ ವ್ಯಾಮೋಹಕ್ಕೆ ಒಳಗಾಗಿ ಸರಕಾರಿ ಶಾಲೆಗಳಿಗೆ ಕಳುಹಿಸದೆ ಖಾಸಗಿ ಶಾಲೆಗಳಿಗೆ ತಮ್ಮ ಮಕ್ಕಳನ್ನು ಕಳುಹಿಸುತ್ತಿದ್ದಾರೆ. ಇಂಗ್ಲಿಷ್ ಎನ್ನುವುದು ಕೇವಲ ಗ್ರಹಿಸಿಕೊಳ್ಳುವುದಕ್ಕೆ ಮಾತ್ರ. ಕನ್ನಡ ಭಾಷೆಯ ಕಲಿಕೆಯ ಅಗತ್ಯ ಇದೆ ಎನ್ನುತ್ತಾರೆ ಅನಂತಮೂರ್ತಿ ಅವರು.

ಪ್ರದೀಪ್ ಕುಮಾರ್ ವಿ. ಅವರ **"ಪರಿಣಾಮಕಾರಿ ಸಂವಹನ ಹೇಗೆ?"** ಎಂಬ ಲೇಖನವು ಪ್ರಜಾವಾಣಿಯ ಸಪ್ತಾಹಿಕದಲ್ಲಿ (೭-೧೦-೨೦೧೩) ಪ್ರಕಟವಾಗಿದೆ. ಈ ಲೇಖನದಲ್ಲಿ ದಿನನಿತ್ಯದ ಜೀವನಕ್ಕೆ ನಮ್ಮ ವೃತ್ತಿ ಬದುಕಿಗೆ ಎಲ್ಲಕ್ಕೂ ಸಂವಹನ ಕೌಶಲ ಅತ್ಯಂತ ಅಗತ್ಯ. ಜನ್ಮಜಾತವಾಗಿ ಎಲ್ಲರಿಗೂ ಈ ಕಲೆ ಸಿದ್ಧಿಸಿರುವುದಿಲ್ಲ. ನಿರಂತರ ಸಾಧನೆ ಮತ್ತು ಪ್ರಯತ್ನದಿಂದ ಅದನ್ನು ಯಾರು ಬೇಕಾದರೂ ತಮ್ಮದಾಗಿಸಿಕೊಳ್ಳಬಹುದು ಎಂಬ ಅಂಶವನ್ನು ಈ ಲೇಖನವು ಪ್ರತಿಪಾದಿಸುತ್ತದೆ.

ಡಾ.ಎಚ್.ಬಿ.ಚಂದ್ರಶೇಖರ್ ಅವರು **"ಕಲಿಕೆ: ಇಲ್ಲಿದೆ ರಹದಾರಿ"** ಎಂಬ ಲೇಖನವನ್ನು ಪ್ರಜಾವಾಣಿಯ ಸಪ್ತಾಹಿಕ(೭-೧೦-೨೦೧೩)ದಲ್ಲಿ ಬರೆದಿದ್ದು, ಈ ಲೇಖನದಲ್ಲಿ ಮಕ್ಕಳಿಗೆ ಕಲಿಸುವುದೇ ಹಲವರಿಗೆ ಅತಿ ದೊಡ್ಡ ಸಮಸ್ಯೆ. ಯಾವ ರೀತಿ ಕಲಿಸಿದರೂ ಇವರ ತಲೆಗೇ ಹತ್ತುತ್ತಿಲ್ಲ ಎಂಬ ಮಾತುಗಳು ಪೋಷಕರಿಂದ, ಶಿಕ್ಷಕರಿಂದ ಸಾಮಾನ್ಯವಾಗಿ ಕೇಳಿಬರುತ್ತಲೇ ಇರುತ್ತವೆ. ಹಾಗಿದ್ದರೆ ಮಕ್ಕಳಿಗೆ ಕಲಿಸುವುದು ಅಷ್ಟೊಂದು ಕಷ್ಟವೇ?

ಹೌದು ಎಂದಾದರೆ ಅದನ್ನು ಸುಲಭವಾಗಿ ಮಾಡಿಕೊಳ್ಳುವ ಉಪಾಯ ಇಲ್ಲಿದೆ ಎಂಬ ಮಾತನ್ನು ಹೇಳುವ, ಪರಿಹಾರ ಬೋಧನೆಯ ಅಂಶಗಳನ್ನು ಈ ಲೇಖನದಲ್ಲಿ ಚರ್ಚಿಸಿದ್ದಾರೆ.

ಡಾ.ಎಚ್.ಬಿ.ಚಂದ್ರಶೇಖರ್ ಅವರ "ಮಗು ಕೇಂದ್ರಿತ ಶಿಕ್ಷಣ ನೀಡುವತ್ತ...." ಎಂಬ ಶೀರ್ಷಿಕೆಯಡಿಯಲ್ಲಿ ಪ್ರಜಾವಾಣಿಯ ಸಂಗತ ಎಂಬ ಅಂಕಣದಲ್ಲಿ ೧೩-೦೨-೨೦೧೪, ಪು.೬ರಲ್ಲಿ ಪ್ರಕಟವಾಗಿದೆ. ಈ ಅಂಕಣದಲ್ಲಿ ಮಕ್ಕಳ ಜೊತೆ ಒಡನಾಡುವಾಗ ಶಿಕ್ಷಕರಿಗೆ ಅಗತ್ಯವಾದ ಸೂಕ್ಷ್ಮತೆ ಹಾಗೂ ಅಗತ್ಯ ಮನೋಧೋರಣೆಗಳನ್ನು ಹೊಂದಲು ಶೈಕ್ಷಣಿಕ ಮನೋವಿಜ್ಞಾನದ ಪಠ್ಯವಿಷಯವನ್ನು ಸಮರ್ಪಕ ರೀತಿಯಲ್ಲಿ ಪರಿಷ್ಕರಿಸಬೇಕಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ.

ಪದ್ಮನಾಭ ಭಟ್ ಅವರ **"ಕಲಿ-ಕಲಿಸುವ ತರಬೇತಿ"** ಎಂಬ ಲೇಖನವು ಪ್ರಜಾವಾಣಿಯ ಶಿಕ್ಷಣ ವಿಶೇಷಾಂಕ(೨೪-೧೧-೨೦೧೪)ದಲ್ಲಿ ಸರ್ಕಾರ ವತಿಯಲ್ಲಿ ೨೦೦೯ ರಿಂದ 'ಕಲಿ-ಕಲಿಸು' ಎಂಬುದು ಸರ್ಕಾರಿ ಶಾಲಾ ಶಿಕ್ಷಕರಿಗೆ ಕಲಾಶಿಕ್ಷಣದ ತರಬೇತಿ ನೀಡುವ ಉದ್ದೇಶವನ್ನು ಹೊಂದಿರುವ ಕಾರ್ಯಯೋಜನೆ ಜಾರಿಯಾಗಿದೆ. ಅದರಲ್ಲಿ ದೃಶ್ಯ ಮಾಧ್ಯಮ, ನೃತ್ಯ, ರಂಗಭೂಮಿ, ಸಂಗೀತ, ಗೊಂಬೆಯಾಟ ಹೀಗೆ ಹಲವು ಕಲಾಪ್ರಕಾರಗಳನ್ನು ಕೇಂದ್ರೀಕರಿಸಿ ಶಿಕ್ಷಕರಿಗೆ ತರಬೇತಿ ನೀಡಲಾಗುತ್ತಿದೆ. ಇಂದಿನ ಶಿಕ್ಷಣ ಪದ್ಧತಿಯಲ್ಲಿ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಿರುವ ಸೃಜನಕಲೆಯನ್ನು ಸಮರ್ಥವಾಗಿ ಬಳಸಿಕೊಳ್ಳುವುದನ್ನು ಪ್ರೋತ್ಸಾಹಿಸುವ ಉದ್ದೇಶ ಈ ಯೋಜನೆಯದು ಎಂಬುದನ್ನು ವಿವರಿಸಿದ್ದಾರೆ.

ಕುಮಾರ ಟಿ.ಎಂ. ಎನ್ನುವವರು **"ಪಠ್ಯಕ್ರಮ ಉತ್ತಮ ಮಜಲು ಹಲವು ಗೋಜಲು"** ಎನ್ನುವ ಲೇಖನವನ್ನು ವಿಜಯ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟ ಮಾಡಿದ್ದಾರೆ. ರಾಷ್ಟ್ರೀಯ ಪಠ್ಯಕ್ರಮವನ್ನು ರೂಪಿಸುವ ಬಗ್ಗೆ ಕೇಳಿ ಬರುತ್ತಿರುವ ಮಾತುಗಳು ಮತ್ತು ಈ ಕುರಿತು ಪ್ರಯತ್ನಗಳು ಸಾಗಿ ಬಂದ ಹಾದಿ ಯಾವುದು ಹಾಗೂ ಪಠ್ಯಕ್ರಮ ಪರಿಚಯಿಸುವದರ ಹಿಂದಿನ ತೊಡಕುಗಳೇನು ಎಂಬ ವಿಷಯವನ್ನು ಕುರಿತು ತಮ್ಮ ಲೇಖನದಲ್ಲಿ ಸವಿಸ್ತಾರವಾಗಿ ಬರೆದಿದ್ದಾರೆ.

ವೆಂಕಟಸುಬ್ಬಯ್ಯ ಜಿ. ಅವರು ಇವತ್ತಿನ ಕನ್ನಡ ಬರವಣಿಗೆ ಶೈಲಿ ಓದುಗಾರಿಕೆ ಕನ್ನಡ ಕೃತಿಗಳನ್ನು ಕುರಿತು ಮಾತನಾಡುತ್ತಾ, **"ಕನ್ನಡ ಶಬ್ದ ಸಂಪತ್ತು ವಿನಾಶ ತಡೆ ನಮ್ಮೆಲ್ಲರ ಜವಾಬ್ದಾರಿ"** ಎನ್ನುವ ಪತ್ರಿಕಾ ಸಂವಾದದಲ್ಲಿ ಕನ್ನಡಕ್ಕೆ ಬೇಕಾದ ಕೆಲಸಗಳು ಆಗುತ್ತಿಲ್ಲ. ಇಂಗ್ಲಿಷ್ ಅಡುಗೆ ಮನೆಯವರೆಗೆ ಕಾಲಿಟ್ಟಿದೆ. ಹಾಗಾಗಿ ನಮ್ಮ ಮಕ್ಕಳು

ಕನ್ನಡ ಮೊದಲು ಅಭ್ಯಾಸ ಮಾಡಲಿ. ನಂತರ ಬೇಕಿದ್ದರೆ ಬೇರೆ ಭಾಷೆ ಕಲಿಯಲಿ ಎಂದಿದ್ದಾರೆ.

ಡಾ.ಎನ್.ರಘು ಅವರ **"ಮನೆಮಾತು ಉಚ್ಚಾರಣಾ ದೋಷ"** ಎಂಬ ಲೇಖನವನ್ನು ಶಿಕ್ಷಣ ಮಾರ್ಗದರ್ಶಿ ಎಂಬ ವಿಶೇಷಾಂಕ(೧೯-೫-೨೦೧೪) ದಲ್ಲಿ ಬರೆದಿದ್ದಾರೆ. 'ಕನ್ನಡ ನನ್ನ ಮನೆ ಮಾತು. ಆದ್ದರಿಂದ ನಾನು ಕನ್ನಡವನ್ನು ಮಾತನಾಡುವ ಕ್ರಮ ಸರಿಯಾಗಿದೆ' ಎಂಬ ಕನ್ನಡವನ್ನು ಮಾತೃಭಾಷೆಯನ್ನಾಗಿ, ಮನೆಮಾತನ್ನಾಗಿ ಹೊಂದಿರುವ ವ್ಯಕ್ತಿಗಳೆಲ್ಲರೂ ಹೇಳಬಹುದು. ಆದರೆ ಈ ಮಾತನ್ನು ಅವರ ಬರೆವಣಿಗೆ ಮತ್ತು ಉಚ್ಚಾರಣೆ- ಇವರೆಡನ್ನು ಗಮನಿಸಿ ನಿರ್ಧರಿಸುವುದೇ ಸೂಕ್ತ. ಇತ್ತೀಚಿನ ಹಲವಾರು ಸಂದರ್ಭಗಳಲ್ಲಿ ಗಮನಿಸಿದಂತೆ, ಕನ್ನಡ ಮನೆಮಾತಿನ ವ್ಯಕ್ತಿಗಳೂ ಕನ್ನಡದ ಒಪ್ಪಿತ ಉಚ್ಚಾರಣೆಯ ಪ್ರಯತ್ನದಲ್ಲಿ ಸೋಲುತ್ತಿದ್ದಾರೆ ಎಂಬ ಅಂಶವನ್ನು ವ್ಯಕ್ತಪಡಿಸಿದ್ದಾರೆ.

ಮೇಟಿ ಮಲ್ಲಿಕಾರ್ಜುನ ಅವರ **"ಇಂಗ್ಲಿಷ್ ಎಂಬ ಚಿತ್ರದ ಕಬ್ಬು!"** ಎಂಬ ಅಂಕಣವು ಪ್ರಜಾವಾಣಿಯ(೨೩-೦೩-೨೦೧೫) ಸಂಗತ ಅಂಕಣದಲ್ಲಿ ಪ್ರಕಟವಾಗಿದೆ. ಇದರಲ್ಲಿ ಇಂಗ್ಲೀಷ್ ಮಾಧ್ಯಮದ ಶಿಕ್ಷಣ ಸಾಮಾಜಿಕ ಬಿಕ್ಕಟ್ಟಿಗೆ ದಾರಿ, ಕನ್ನಡ ಮಾಧ್ಯಮದ್ದು ಸಮೂಹಗಳ ಬದುಕಿಗೆ ದಾರಿ ಎಂಬ ಅಭಿಪ್ರಾಯವನ್ನು ಪ್ರತಿಪಾದಿಸಿದ್ದಾರೆ.

ನಿರಂಜನಾರಾಧ್ಯ ವಿ.ಪಿ. ಅವರ ಲೇಖನ **"ಮಾತೃಭಾಷೆ ಜೀವ ಉಳಿಸುವ ಹಾಲು"** ಪ್ರಜಾವಾಣಿ ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. ಸರಕಾರವೇ ಸರಕಾರಿ ಶಾಲೆಗಳಲ್ಲಿ ಆರನೇ ತರಗತಿಯಿಂದ ಇಂಗ್ಲಿಷ್ ಮಾಧ್ಯಮದಲ್ಲಿ ಬೋಧಿಸುವ ತೀರ್ಮಾನವನ್ನು ಕೈಗೊಂಡಿದ್ದರಿಂದ ಖಾಸಗಿ ಶಾಲೆಗಳು ಇದರ ಹೆಚ್ಚಿನ ಲಾಭವನ್ನು ಪಡೆದುಕೊಳ್ಳುತ್ತವೆ. ಜೀವನ ರೂಪಿಸಿದ ಮಾತೃ ಭಾಷೆಯನ್ನು ಮರೆತಂತೆ ಆಗುತ್ತದೆ. ಹಾಗಾಗಿ ೧೨ನೇ ತರಗತಿಯವರೆಗೆ ಮಾತೃ ಭಾಷೆಯಲ್ಲಿಯೇ ಬೋಧನೆ ಕಡ್ಡಾಯಗೊಳಿಸಬೇಕು ಎಂದು ತಮ್ಮ ಲೇಖನದಲ್ಲಿ ಚರ್ಚಿಸಿದ್ದಾರೆ.

ಚನ್ನಬಸಪ್ಪ ರೊಟ್ಟಿ ಅವರು ಬರೆದಿರುವ **"ಪೋಷಕರ ಸಭೆ ಏನು ಎತ್ತ?"** ಎಂಬ ಲೇಖನವು ಪ್ರಜಾವಾಣಿಯ ಶಿಕ್ಷಣ ವಿಶೇಷ ಸಂಚಿಕೆಯಲ್ಲಿ (೩೧-೦೮-೨೦೧೫) ಪ್ರಕಟವಾಗಿದೆ. ಶಾಲೆಯಲ್ಲಿ ಆಯೋಜಿಸುವ ಪೋಷಕರ ಸಭೆ ಮಕ್ಕಳ ಪ್ರಗತಿಯನ್ನು ಒರೆಗೆ ಹಚ್ಚುವ, ಮಗುವಿನ ಸಮಸ್ಯೆ, ಸಾಮರ್ಥ್ಯಗಳನ್ನು ಅರಿಯುವ ಒಂದು ಅವಕಾಶ. ಆದರೆ, ಇಂದು ಬಹುತೇಕ ಖಾಸಗಿ 'ಕಾರ್ಪೋರೇಟ್' ಶಾಲೆಗಳಲ್ಲಿ 'ಪೋಷಕರ ಸಭೆ' ಆಯೋಜಿಸುವುದು ಒಂದು ಕಾಟಾಚಾರದ ಪ್ರಕ್ರಿಯೆಯಾಗಿದೆ ಎಂದು ವಿಷಾದ ವ್ಯಕ್ತಪಡಿಸಿದ್ದಾರೆ.

## ೨.೭ ನಿಯತಕಾಲಿಕೆಗಳು

"ಶಿಕ್ಷಣ ಶಿಲ್ಪಿ" ಎಂಬ ನಿಯತಕಾಲಿಕೆ(ಡಿಸೆಂಬರ್-೨೦೧೬)ಯಲ್ಲಿ **ಪಠ್ಯಕ್ಷೇತ್ರಗಳು, ಶಾಲಾ ಹಂತಗಳು ಮತ್ತು ಮೌಲ್ಯಮಾಪನ** ಎಂಬ ಲೇಖನವನ್ನು ರಾಷ್ಟ್ರೀಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಮಂಡಳಿಯ ಎಸ್.ಎಸ್.ಯದುರಾಜನ್ ಅವರು ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಮಗುವಿನ ಸೃಜನಶೀಲತೆಯ ಮುಖ್ಯ ತಾಣಗಳಾಗಿರುವ ಕಲಾ ವಿಷಯಗಳನ್ನು ನೇರವಾಗಿ ಪಠ್ಯಕ್ರಮದ ಪರಿಧಿಯೊಳಗೆ ತರಲೇಬೇಕು. ಕಲಿಕೆಯ ಎಲ್ಲ ಕ್ಷೇತ್ರಗಳಲ್ಲೂ ಸೂಕ್ತ ಘಟ್ಟಗಳಲ್ಲಿ ಅವುಗಳಿಗೆ ತಮ್ಮದೇ ಆದ ಮಾನ್ಯತೆ ನೀಡಿ ಅವುಗಳನ್ನು ತುಂಬಬೇಕು. ಬೆಳವಣಿಗೆಯಲ್ಲಿ ಮಕ್ಕಳು ಸ್ವಾವಲಂಬನೆ, ಸಮೃದ್ಧಿ, ಶಾಂತಿ ಅಭಿಮುಖವಾದ ಮೌಲ್ಯಗಳು ಮತ್ತು ಆರೋಗ್ಯ ತಮ್ಮ ಸಂಸ್ಕೃತಿ ಸಮಾಜೀಕರಿಸುವುದನ್ನು ದೃಢಪಡಿಸುವಲ್ಲಿ ಶಾಲೆಗಳು ಮಹತ್ವದ ಪಾತ್ರವನ್ನು ಹೊಂದಿವೆ ಎಂದು ಹೇಳಿದ್ದಾರೆ.

ಡಾ.ಕೋ.ವೆಂ.ರಾಮಕೃಷ್ಣೇಗೌಡ ಅವರು "ಶಿಕ್ಷಣ ಶಿಲ್ಪಿ" ನಿಯತಕಾಲಿಕೆ (ನವೆಂಬರ್-೨೦೧೬)ಯಲ್ಲಿ **"ಸಂಘರ್ಷದಿಂದ ಉತ್ಕರ್ಷಕ್ಕೇರಿದ ಕನ್ನಡ"** ಎಂಬ ಬರೆದ ಲೇಖನದ ಸಂಪಾದಕೀಯದಲ್ಲಿ ಭಾಷೆಯೊಂದು ಸಾಹಿತ್ಯ ರಚನೆಗೆ ತನ್ನನ್ನು ತೆರೆದುಕೊಳ್ಳುವ ಮೊದಲು ಅದು ಜನಮಾನಸದಲ್ಲಿ ನಲಿದಾಡುವುದು. ಜನಪದರ ಒಡನಾಡಿಯಾಗುತ್ತಲೇ ಅವರ ಬಾಯಲ್ಲಿ ಪದಗಳಾಗಿ ವಿನ್ಯಾಸ ಪಡೆದು ಮುದ ನೀಡುವ ಪ್ರಕ್ರಿಯೆಯಲ್ಲಿ ತೊಡಗುತ್ತದೆ. ಎರಡೂವರೆ ಸಾವಿರ ವರ್ಷಗಳ ಭಾಷಿಕ ಚರಿತ್ರೆ ನಮ್ಮ ಕನ್ನಡ ಭಾಷೆಗಿರುವುದು ಸ್ಪಷ್ಟ. ಭೂಮಿಯು ರಚನೆಗೊಂಡ ಕಾಲದಿಂದಲೂ ಕನ್ನಡ ನಾಡಿನ ಭೂಭಾಗ ಅಸ್ತಿತ್ವದಲ್ಲಿತ್ತು ಎಂಬುದನ್ನು ಪುಷ್ಟೀಕರಿಸುವ ದಾಖಲೆಗಳು ನಮ್ಮಲ್ಲಿವೆ ಎಂಬುದನ್ನು ಕನ್ನಡ ನಾಡು ನುಡಿಯ ಇತಿಹಾಸದ ಮೇಲೆ ಬೆಳಕು ಚೆಲ್ಲಿದ್ದಾರೆ.

ಬ್ರಿಟಿಷರು ಭಾರತದಲ್ಲಿ ಶಿಕ್ಷಣವನ್ನು ಸಾರ್ವತ್ರೀಕರಣಗೊಳಿಸಿದ ಮೇಲೆ ಕನ್ನಡ ಪಠ್ಯಗಳ ಕೊರತೆ ಎದ್ದು ತೋರಿತು. ಕನ್ನಡ ಪಠ್ಯಗಳ ಕೊರತೆಯು ದೊಡ್ಡ ಸಮಸ್ಯೆಯಾಗಿ ಮಾರ್ಪಟ್ಟಾಗ ಅವುಗಳ ಪೂರೈಕೆಯ ಅಗತ್ಯ ಕಂಡು ಬಂದಿತು. ಆ ಕಾರ್ಯದಲ್ಲಿ ತೊಡಗಿಕೊಳ್ಳುವ ಪ್ರಧಾನ ಉದ್ದೇಶಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ರಚನೆಯಾಯಿತು. ಕನ್ನಡ ಭಾಷಾ ಮಾಧ್ಯಮ ಶಾಲೆಗಳು ತಲೆಯೆತ್ತತೊಡಗಿದವು. ಸಾಹಿತಿಗಳೂ ಪಠ್ಯ ನಿರ್ಮಾಣದಲ್ಲಿ ತೊಡಗಿದ್ದರ ಪರಿಣಾಮವಾಗಿ ಕನ್ನಡ ಮಾಧ್ಯಮ ಶಾಲೆಗಳು ತಮ್ಮ ಶ್ರೇಷ್ಠತೆಯನ್ನು ಕಾಯ್ದುಕೊಂಡು ಬಂದವು. ಬ್ರಿಟಿಷರು ಸ್ಥಾಪಿಸಿದ್ದ ಆಂಗ್ಲಮಾಧ್ಯಮ ಶಾಲೆಗಳಿಗೆ ಸೆಡ್ಡು ಹೊಡೆಯುವಂತೆ ದೇಶೀಯ ವಿದ್ಯಾಸಂಸ್ಥೆಗಳು ಆಂಗ್ಲರು ಭಾರತದಲ್ಲಿದ್ದಾಗ

ಪ್ರಬಲವಾಗಿ ಬೆಳೆದವು. ಆಂಗ್ಲ ಭಾಷೆಯ ಜೊತೆಗೆ ಸಂಘರ್ಷವನ್ನು ಮಾಡುತ್ತಲೇ ಬೆಳೆದ ಕನ್ನಡ ಸಾಹಿತ್ಯ ಆಧುನಿಕ ಕಾಲದಲ್ಲೂ ವಿವಿಧ ಸಾಹಿತ್ಯ ದಿಗ್ಗಜರಿಂದ ರಚನೆಗೊಂಡಿತು. ಶಾಲಾ ಪಠ್ಯಗಳು, ಸಾಹಿತ್ಯ ಕೃತಿಗಳು ಕನ್ನಡಿಗರ ಬೌದ್ಧಿಕ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರ ವಹಿಸಿದವು.

ಬ್ರಿಟಿಷರ ಕಾಲದಲ್ಲಿ ಕನ್ನಡ ಮಾಧ್ಯಮ ಶಾಲೆಗಳು ಬೆಳೆದು ಪವಾಡವಾಗಿ ಕಂಡು ಬಂದರೆ, ನಮ್ಮವರೇ ಆಡಳಿತ ನಡೆಸುತ್ತಿರುವ ಸಂದರ್ಭದಲ್ಲಿ ಕನ್ನಡ ಮಾಧ್ಯಮ ಶಾಲೆಗಳು ಮುಚ್ಚುವ ಪರಿಸ್ಥಿತಿಗೆ ತಲುಪಿವೆ ಎಂದು ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಶಿಕ್ಷಕರ ಕೊರತೆ ಗುಣಮಟ್ಟದ ಶಿಕ್ಷಣಕ್ಕೆ ಕೊಡಲಿ ಪೆಟ್ಟಿನಂತಾಗಿದೆ. ಶಿಕ್ಷಣ ಉದ್ಯಮಿಗಳ ಕೈಗೆ ಜಾರಿರುವ ಶಿಕ್ಷಣ ಉಳ್ಳವರನ್ನು ಆಲಂಗಿಸುವ, ಇಲ್ಲದವರನ್ನು ದೂರೀಕರಿಸುವ ಪ್ರವೃತ್ತಿಯನ್ನು ಪ್ರಕಟಿಸುವ ಮೂಲಕ ಸಂವಿಧಾನದ ಆಶಯಗಳನ್ನು ಗಾಳಿಗೆ ತೂರುತ್ತಿವೆ. ಶಿಕ್ಷಣ ಮೂಲಕ ಮಾತ್ರ ಕನ್ನಡ ಉಳಿಯಬೇಕಾಗಿದೆ. ಅದು ಮರೀಚಿಕೆಯಾದರೆ ಕನ್ನಡ ಭಾಷೆಗಾಗಲಿ, ಜನರಿಗಾಗಲಿ, ಸಾಹಿತ್ಯಕ್ಕಾಗಲಿ ಬೆಲೆ ಬರುವುದಿಲ್ಲ. 'ನಿಮ್ಮ ನುಡಿ ನಿಮ್ಮ ಗಂಡಸುತನಕೆ ಸಾಕ್ಷಿ. ಬಲವಿದ್ದರದಕೆ ನಿಮಗಿಹುದು ಶಕ್ತಿ' ಎಂಬ ರಾಷ್ಟ್ರಕವಿ ಕುವೆಂಪು ಅವರ ಕವನದ ಸಾಲುಗಳನ್ನು ಉಲ್ಲೇಖಿಸಿದ್ದಾರೆ.

ವೈ.ಬಿ.ಕಡಕೋಳ ಅವರು **"ಶಿಕ್ಷಣ ಶಿಲ್ಪಿ ನಿಯತಕಾಲಿಕೆ"** (ಮೇ–೨೦೧೭)ಯಲ್ಲಿ **"ಮಕ್ಕಳ ಶೈಕ್ಷಣಿಕ ಪ್ರಗತಿಯಲ್ಲಿ ಶಿಕ್ಷಕರ ಪಾತ್ರ"** ಎಂಬ ಲೇಖನವನ್ನು ಬರೆದಿದ್ದು, ಅವರು ಶಿಕ್ಷಕ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವವರು ಮೊದಲು ವೇಳೆಗೆ ಮಹತ್ವ ನೀಡಬೇಕು. ಸರಿಯಾಗಿ ತರಗತಿಗೆ ಬರಬೇಕು. ವಿದ್ಯಾರ್ಥಿಗಳು ಗುರುಗಳನ್ನು ಅನುಕರಿಸುತ್ತಾರೆ. ಮಕ್ಕಳಿಗೆ ನೀತಿ ಹೇಳುವ, ಸಮಾಜಕ್ಕೆ ಅನುಕರಣೀಯವಾದ ವೃತ್ತಿ ಇದು. ಶಿಕ್ಷಕರೇ ನಿಮ್ಮಲ್ಲಿ ದುರಭ್ಯಾಸಗಳಿರಕೂಡದು. ಅಂದರೆ ಗುಟ್ಕಾ ತಿನ್ನುವುದು. ಧೂಮಪಾನ, ಕುಡಿತ, ಮೊದಲಾದ ಚಟಗಳನ್ನು ಹೊಂದಬೇಡಿ, ಚಟ ನಮ್ಮ ಬದುಕನ್ನು ಚಟ್ಟಕ್ಕೆ ಏರಿಸುವುದು. ವೃತ್ತಿ ನೈಪುಣ್ಯತೆಯನ್ನು ಉಳಿಸಿಕೊಳ್ಳಬೇಕೆಂದು ವೃತ್ತಿ ಮಹತ್ವವನ್ನು ತಿಳಿಸಿದ್ದಾರೆ.

ಮನೋಹರ್ ಅವರು **"ಶಿಕ್ಷಣ ಶಿಲ್ಪಿ ನಿಯತಕಾಲಿಕೆ"** (ಮಾರ್ಚ್–೨೦೧೭) ಯಲ್ಲಿ **"ಯಶಸ್ವಿ ಶೈಕ್ಷಣಿಕ ಸಮ್ಮಿಲನ, ಬದುಕಲು ಅನ್ನ ನೀಡುವ ಭಾಷೆ ಬೆಳೆಯುತ್ತದೆ"** ಎಂಬ ಲೇಖನದಲ್ಲಿ ಮಕ್ಕಳಿಗೆ ಯಾಂತ್ರಿಕ, ತಾಂತ್ರಿಕ ಶಿಕ್ಷಣದ ಹೊರತಾಗಿ ನಿಜವಾದ ಮನುಷ್ಯನನ್ನಾಗಿ ರೂಪಿಸಲು ಮಾನವೀಯ ಮೌಲ್ಯಗಳುಳ್ಳ ಶಿಕ್ಷಣ ನೀಡುವ ಜವಾಬ್ದಾರಿ ಶಿಕ್ಷಕರ ಮೇಲೆ ಇದೆ. ಇಂದು ಸಮಾಜದಲ್ಲಿ ನೈತಿಕ, ಸ್ಥೈರ್ಯ, ಮಾನವೀಯ ಮೌಲ್ಯಗಳನ್ನು ಬೆಳೆಸುವ ಜವಾಬ್ದಾರಿಯನ್ನು ಶಿಕ್ಷಕ ಸಮುದಾಯ ಮಾಡಬೇಕಿದೆ ಎಂದು ಹೇಳಿದ್ದಾರೆ.

ಮೇಲ್ಕಂಡ ಎಲ್ಲಾ ಪಿಎಚ್.ಡಿ ಮಹಾಪ್ರಬಂಧಗಳನ್ನು ಗಮನಿಸಿದಾಗ ನಾಗರಾಜ ಚಿಂತ್ರಪಳ್ಳಿ ಅವರ ಕನ್ನಡ ಕಲಿಕೆಯ ಸಮಸ್ಯೆಗಳು ಎನ್ನುವ ಅಧ್ಯಯನದಲ್ಲಿ ಕಲಿಕಾ ಸಮಸ್ಯೆಗಳನ್ನು ಗುರ್ತಿಸಿ ಪರಿಹಾರಗಳನ್ನು ತಿಳಿಸಿದ್ದಾರೆ. ಕನ್ನಡ ಮನೆ ಮಾತು ಇರುವ ವಿದ್ಯಾರ್ಥಿಗಳ ಕಲಿಕಾ ಸಮಸ್ಯೆಗಳನ್ನು ಮಾತ್ರ ಗಮನಿಸಿದ್ದಾರೆ. ಸೋಮಕ್ಕ ಎಂ. ಭೀಮಣ್ಣ ಮೇಟಿ ಅವರ ಮಹಾಪ್ರಬಂಧಗಳು ಒಂದು ಭಾಷಿಕ ವರ್ಗದ ವಿದ್ಯಾರ್ಥಿಗಳ ಮೇಲೆ ಭಾಷಿಕ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಲಂಬಾಣಿ, ಉರ್ದು ಮತ್ತು ಕನ್ನಡ ಭಾಷಿಕ ಮಕ್ಕಳ ಕನ್ನಡ ಕಲಿಕೆಯನ್ನು ಭಾಷಾ ಹಿನ್ನೆಲೆಯಲ್ಲಿ ಚರ್ಚಿಸಿ ಅಧ್ಯಯನವನ್ನು ಮಂಡಿಸಿರುತ್ತಾರೆ. ಇಲ್ಲಿ ಕನ್ನಡ ಕಲಿಕೆಯ ಮೇಲೆ ಉರ್ದು, ಲಂಬಾಣಿ ಭಾಷೆ ಹೇಗೆ ಪ್ರಭಾವ ಬೀರುತ್ತದೆ ಎಂಬುದನ್ನು ವಿವರಿಸಿದ್ದಾರೆ. ಇತರ ಭಾಷೆಗಳ ಪ್ರಭಾವ ಕುರಿತು ಚರ್ಚೆಗೊಳಪಡಿಸಿರುವುದನ್ನು ಗಮನಿಸಬಹುದು. ವಾಗೀಶ್ ನಂದ ಇಟಕರ್ ಮತ್ತು ಚಲಪತಿ ಆರ್ ಇವರ ಮಹಾಪ್ರಬಂಧಗಳು ಸಹ ಕನ್ನಡ ಭಾಷಾ ಕಲಿಕೆ, ಬೋಧನೆ ಮತ್ತು ಪಠ್ಯ ಪುಸ್ತಕಗಳ ರಚನೆ, ಸ್ವರೂಪ ಬಳಕೆ ಕುರಿತ ಅಧ್ಯಯನಗಳಾಗಿವೆ. ಪ್ರಾಥಮಿಕ ಮತ್ತು ಪದವಿ ಹಂತದಲ್ಲಿ ಕನ್ನಡ ಕಲಿಕೆಯ ಸಮಸ್ಯೆಗಳು ಮತ್ತು ಪಠ್ಯರಚನೆಯ ಸಮಸ್ಯೆಗಳನ್ನು ವಿಸ್ತೃತವಾಗಿ ಅಧ್ಯಯನ ಮಾಡಿದ್ದಾರೆ. ಆದರೆ ಕನ್ನಡ ಕಲಿಕೆಯಲ್ಲಿ ಆಂಗ್ಲ ಮಾಧ್ಯಮದ ಪ್ರಭಾವ ಮತ್ತು ದ್ವಿತೀಯ ಭಾಷೆಯಾಗಿ ಕನ್ನಡ ಬೋಧನೆ ಹಾಗೂ ಕಲಿಕೆಗೆ ಸಂಬಂಧಿಸಿದ ಚರ್ಚೆಗಳು ಈ ಅಧ್ಯಯನಗಳಲ್ಲಿ ನಡೆದಿರುವುದಿಲ್ಲ. ಆದ್ದರಿಂದ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ಮತ್ತು ಬೋಧಿಸುವ ಪ್ರಕ್ರಿಯೆಯಲ್ಲಿ ನನ್ನ ಅಧ್ಯಯನ ಈ ಎಲ್ಲ ಅಧ್ಯಯನಗಳಿಗಿಂತಲೂ ಭಿನ್ನವಾಗಿದೆ.

ಎಂ.ಫಿಲ್ ಸಂಪ್ರಬಂಧಗಳಲ್ಲಿ ಮುಖ್ಯವಾಗಿ ಬಸವರಾಜ ಕೊಡಗಂಟಿ ಅವರ **ಮಕ್ಕಳ ಭಾಷೆ ಒಂದು ಅಧ್ಯಯನ**, ಓಂಪ್ರಕಾಶ್ ಅವರ ವ್ಯಾವಹಾರಿಕ ಕನ್ನಡ, ಸಿದ್ಧಲಿಂಗಪ್ಪ ಅವರ ಕಾಗುಣಿತ ದೋಷಗಳು ಹಾಗೂ ನಾರಾಯಣ ಡಿ.ಎಸ್. ಅವರ ಇಂಗ್ಲಿಷ್ ಕನ್ನಡ ಸಂಬಂಧ ಕುರಿತ ಚಿಂತನೆಗಳು ಈ ಎಲ್ಲಾ ಅಧ್ಯಯನಗಳಲ್ಲಿ ಕನ್ನಡ ಭಾಷೆಯ ಕುರಿತಾಗಿ ಹಾಗೂ ಮಕ್ಕಳ ಭಾಷೆ ಕುರಿತಾಗಿ ಚರ್ಚಿಸಲಾಗಿದೆ. ನಾರಾಯಣ ಅವರ ಇಂಗ್ಲಿಷ್ ಕನ್ನಡ ಸಂಬಂಧ ಸಂಪ್ರಬಂಧವು ನನ್ನ ಅಧ್ಯಯನಕ್ಕೆ ಪೂರಕ ಮಾಹಿತಿಯನ್ನು ಒದಗಿಸುತ್ತದೆ. ಆದರೆ ಭಿನ್ನ ಮಾತೃಭಾಷಾ ಕಲಿಕೆ ಮತ್ತು ಆಂಗ್ಲ ಮಾಧ್ಯಮದಲ್ಲಿ ಕನ್ನಡ ಕಲಿಕೆ ವಿಷಯದ ಕುರಿತು ಈ ಅಧ್ಯಯನಗಳಲ್ಲಿ ಚರ್ಚಿಸಿರುವುದಿಲ್ಲ. ಕಾರಣ ಈ

ಅಧ್ಯಯನಗಳಿಗಿಂತಲೂ ನನ್ನ ಅಧ್ಯಯನ ಭಿನ್ನವಾಗಿದೆ. ಆಂಗ್ಲ ಮಾಧ್ಯಮ ಕನ್ನಡ ಕಲಿಕೆಯ ಮೇಲೆ ಹೇಗೆ ಪ್ರಭಾವ ಬೀರುತ್ತಿದೆ ಎನ್ನುವುದನ್ನು ಕಂಡುಕೊಳ್ಳುವುದೇ ನನ್ನ ಅಧ್ಯಯನದ ಉದ್ದೇಶವಾಗಿದೆ.

ಕರ್ನಾಟಕದ ವಿವಿಧ ವಿಶ್ವವಿದ್ಯಾಲಯಗಳಲ್ಲಿ ಶಿಕ್ಷಣ ಸ್ನಾತಕೋತ್ತರ ಪದವಿಗಾಗಿ ಸಲ್ಲಿಸಿದ ಎಂ.ಇಡಿ. ಕಿರುಪ್ರಬಂಧಗಳನ್ನು ಸಮೀಕ್ಷಿಸಿದಾಗ ಮೀನಾ, ಬಣಕಾರ ಮಮತ, ರವೀಂದ್ರ ಕರ್ಜಗಿ, ಕಲಾವತಿ, ಪುಷ್ಪಾವತಿ ಮತ್ತು ಮೃತ್ಯುಂಜಯ ಕೆ. ಇವರ ಪ್ರಬಂಧಗಳೆಲ್ಲವೂ ಕನ್ನಡ ಕಲಿಕೆಯ ಒಂದಂಶವನ್ನು ಮಾತ್ರ ಗಣನೆಗೆ ತೆಗೆದುಕೊಂಡಿರುವುದು ಕಂಡುಬರುತ್ತದೆ. ಪ್ರಾಥಮಿಕವಾಗಿ ಒಂದು ತರಗತಿಯನ್ನು ಮಾತ್ರ ಗಣನೆಗೆ ತೆಗೆದುಕೊಂಡು ಬರವಣಿಗೆಯ ದೋಷಗಳನ್ನು ಮಾತ್ರ ಅಧ್ಯಯನಕ್ಕೊಳಪಡಿಸಿದ್ದಾರೆ. ಆದ್ದರಿಂದ ಈ ಎಲ್ಲಾ ಅಧ್ಯಯನಗಳಿಗಿಂತ ನನ್ನ ಅಧ್ಯಯನ ಭಿನ್ನವಾಗಿದ್ದು, ಕನ್ನಡ ಬೋಧನೆ ಮತ್ತು ಕಲಿಕಾ ಸಮಸ್ಯೆಗಳನ್ನು ಸವಿಸ್ತಾರವಾಗಿ ಅಧ್ಯಯನ ಮಾಡಲಾಗಿದೆ. ಹಾಗೆಯೇ ಭಾಷಾ ಬೋಧನೆ ಮತ್ತು ಕಲಿಕೆಗೆ ಪೂರಕವಾಗಿ ದ್ವಿತೀಯ ಭಾಷಾ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆಯನ್ನು ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಸಂಶೋಧನಾ ಕೃತಿಗಳು, ಪತ್ರಿಕಾ ಲೇಖನಗಳು, ನಿಯತಕಾಲಿಕೆಗಳು ನನ್ನ ಅಧ್ಯಯನಕ್ಕೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಾಹಿತಿಯನ್ನು ಒದಗಿಸಿವೆ. ಕೆಲವು ಅಧ್ಯಯನಗಳು ಒಂದೇ ವಿಷಯದ ಚೌಕಟ್ಟಿನೊಳಗೆ ವಿಷಯವನ್ನು ಮಂಡಿಸಿವೆ. ಇಲ್ಲಿ ಭಾಷೆ, ಕಲಿಕೆ, ಬೋಧನೆ, ಪಠ್ಯಕ್ರಮ ಕುರಿತಾಗಿ ವಿಸ್ತೃತವಾಗಿ ಅಧ್ಯಯನಗಳು ನಡೆದಿವೆ. ಪ್ರಥಮ ಭಾಷೆ ಕನ್ನಡ ಕುರಿತಾದ ಹಲವು ಅಧ್ಯಯನಗಳು ಲಭ್ಯವಿದೆ. ಆದರೆ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ಮತ್ತು ಬೋಧಿಸುವ ಪ್ರಕ್ರಿಯೆಯಲ್ಲಿ ಅಧ್ಯಯನಗಳು ಒಳಗೊಂಡಿಲ್ಲ. ಹಾಗಾಗಿ ನನ್ನ ಅಧ್ಯಯನ ಈ ಎಲ್ಲ ಅಧ್ಯಯನಗಳಿಗಿಂತಲೂ ಭಿನ್ನವಾಗಿದೆ. ನನ್ನ ಅಧ್ಯಯನದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಆಂಗ್ಲ ಮಾಧ್ಯಮದಲ್ಲಿ ಅಧ್ಯಯನ ಮಾಡುವಾಗ ಕಲಿಕಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳೇನು? ಅದಕ್ಕೆ ಕಾರಣಗಳೇನು? ಹಾಗೆಯೇ ಬೋಧಕ ವರ್ಗ, ದ್ವಿತೀಯ ಭಾಷೆಯನ್ನಾಗಿ ಕನ್ನಡವನ್ನು ಬೋಧಿಸುವ ಸಂದರ್ಭದಲ್ಲಿ ಎದುರಿಸುತ್ತಿರುವ ಸವಾಲುಗಳೇನು? ದ್ವಿತೀಯ ಭಾಷೆ ಪಠ್ಯ ಪುಸ್ತಕದ ಸ್ವರೂಪ, ರಚನೆ ಕುರಿತಾಗಿ ಭಿನ್ನವಾಗಿ ಅಧ್ಯಯನ ಮಾಡಲಾಗಿದೆ. ವಿದ್ಯಾರ್ಥಿ, ಬೋಧಕ, ಶಿಕ್ಷಕರು, ಮುಖ್ಯೋಪಾಧ್ಯಾಯರು, ಪಾಲಕರ ಒಟ್ಟಾರೆ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

## ಅಧ್ಯಾಯ : ಮೂರು

# ಭಾಷಾ ಬೋಧನೆ ಮತ್ತು ಕಲಿಕೆಯ ಸ್ವರೂಪ : ಚಾರಿತ್ರಿಕ ನೋಟ

೩.೧. ಸ್ವಾತಂತ್ರ್ಯ ಪೂರ್ವ ಶಿಕ್ಷಣದ ಚರಿತ್ರೆ

೩.೨. ಸ್ವಾತಂತ್ರ್ಯೋತ್ತರ ಶಿಕ್ಷಣದ ಚರಿತ್ರೆ

ಅಧ್ಯಾಯ : ಮೂರು

# ಭಾಷಾ ಬೋಧನೆ ಮತ್ತು ಕಲಿಕೆಯ ಸ್ವರೂಪ : ಚಾರಿತ್ರಿಕ ನೋಟ

ಪ್ರಾಚೀನ ಕಾಲದಿಂದಲೂ ಮಗುವಿನ ಶಿಕ್ಷಣದಲ್ಲಿ ಬೋಧನೆಗೆ ಅಧ್ಯತೆ ನೀಡುತ್ತಾ ಬರಲಾಗಿದೆ. ಬೋಧನೆಯಿಲ್ಲದೆ ಕಲಿಕೆ ಇಲ್ಲ. ಉತ್ತಮ ಕಲಿಕೆಗೆ ಉತ್ತಮ ಬೋಧನೆ ಅವಶ್ಯಕ. ಬೋಧನೆ ಮಾರ್ಗಸೂಚಿಯಾಗಿ ಮಾರ್ಗದರ್ಶನ ಮಾಡುತ್ತದೆ. ಬೋಧನೆ ಎಂಬ ಪದಕ್ಕೆ ಇತ್ತೀಚಿಗೆ ಹೊಸ ಅರ್ಥ ಬೆಳೆದು ಬಂದಿದೆ. ಆಧುನಿಕ ಶಿಕ್ಷಣ ಪದ್ಧತಿಯಲ್ಲಿ ವೈವಿಧ್ಯತೆ ಬಂದಂತೆಲ್ಲಾ ಬೋಧನೆಯ ಅರ್ಥವೂ ವಿಶಾಲವಾಗಿ ಬೋಧನೆಯೂ ಸಹ ಒಂದು ವೃತ್ತಿಯಾಗಿ ಪರಿಣಮಿಸಿದೆ.[೧]

ಬೋಧನೆಯು ಒಂದು ಕಲೆಯಾಗಿದ್ದು, ಉದ್ದೇಶ ಪೂರ್ವಕ ಹಾಗೂ ಪ್ರಜ್ಞಾ ಪೂರ್ವಕ ಕ್ರಿಯೆಯಾಗಿದೆ. ಮನಸ್ಸಿಗೆ ತೋಚುವ ವಿಚಾರಗಳನ್ನು ವ್ಯಕ್ತಪಡಿಸುವುದು ಬೋಧನೆಯಾಗುವುದಿಲ್ಲ. ಬೋಧನೆ ಒಂದು ಮನೋವೈಜ್ಞಾನಿಕ ಕ್ರಿಯೆ. ಇರುವ ವಿಷಯವನ್ನು ವಿವರಿಸುವುದರ ಬದಲಾಗಿ ಆ ವಿಷಯವನ್ನು ಮಕ್ಕಳ ಮಟ್ಟಕ್ಕೆ ಇಳಿದು ಪರಿಣಾಮಕಾರಿಯಾಗಿ ಬೋಧಿಸಿ ಕಲಿಕೆಯಲ್ಲಿ ತೊಡಗುವಂತೆ ಮಾಡುವುದೇ ಬೋಧನೆ ಎನಿಸುತ್ತದೆ. ಬೋಧನೆ ಮತ್ತು ಶಿಕ್ಷಣ ಎನ್ನುವಂತಹದ್ದು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಮಕ್ಕಳು ವಿಷಯದಲ್ಲಿ ತೊಡಗುವಂತೆ ಮತ್ತು ಕಲಿಯುವಂತೆ ಮಾಡುವುದೇ ಬೋಧನೆಯ ಪ್ರಮುಖ ಉದ್ದೇಶ. ಪ್ರಾಥಮಿಕ ಶಾಲೆಯಲ್ಲಿ ಬೋಧನೆಯು ತುಂಬಾ ಕ್ರಿಯಾತ್ಮಕವಾಗಿ ಕೂಡಿರಬೇಕು. ಏಕೆಂದರೆ ಮಕ್ಕಳು ಚಿಕ್ಕ ವಯಸ್ಸಿನಲ್ಲಿ ನಾಲ್ಕು ಭಾಷೆಗಳನ್ನು ಕಲಿಯುವಷ್ಟು ಸಾಮರ್ಥ್ಯವಿರುತ್ತದೆ ಎಂದು ಭಾಷಾ ವಿಜ್ಞಾನಿಗಳು ಅಭಿಪ್ರಾಯ ಪಡುತ್ತಾರೆ. ಶಿಕ್ಷಣವು ಮಕ್ಕಳಿಗೆ ಭದ್ರವಾದ ಬುನಾದಿಯನ್ನು ಹಾಕುತ್ತದೆ. ಅದಕ್ಕೆ ಉತ್ತಮ ಬೋಧನೆ ತುಂಬಾ ಅಗತ್ಯವಾಗಿದೆ. ಇದರಿಂದ ಶಿಕ್ಷಣದ ಗುಣಮಟ್ಟವು ಹೆಚ್ಚುತ್ತಾ ಹೋಗುತ್ತದೆ.

ಬೋಧನೆಯು ವಿಶಿಷ್ಟವಾದ, ವೈವಿಧ್ಯಮಯವಾದ, ವೈಜ್ಞಾನಿಕವಾದ ಒಂದು ಕೌಶಲ್ಯ. ಸಮರ್ಥ ಬೋಧಕನು ವಿದ್ಯಾರ್ಥಿಗಳನ್ನು ವ್ಯವಸ್ಥಿತವಾಗಿ ಕಲಿಯುವಂತೆ ಪ್ರೇರಣೆ ಮಾಡಬೇಕು. ಯಾವುದೇ ವಿಷಯವನ್ನು ಶಿಕ್ಷಕನು ಕಲಿಸಬೇಕಾದರೆ ಆತನಿಗೆ ಬೋಧನಾ ವಿಧಾನಗಳ ಅರಿವು ಇರಬೇಕು. ಆಗಿದ್ದಾಗ ಮಾತ್ರ ಆತನು ಪರಿಣಾಮಕಾರಿಯಾಗಿ ಕಲಿಸಬಲ್ಲನು. ಬೇರೆ ಬೇರೆ ವಿಷಯಗಳನ್ನು ಕಲಿಸುವಾಗ ಬೇರೆ ಬೇರೆ ವಿಧಾನಗಳನ್ನು ಶಿಕ್ಷಕ ಅಳವಡಿಸಿಕೊಳ್ಳಬೇಕು. ಆಗ ಬೋಧನೆ ಪರಿಣಾಮಕಾರಿಯಾಗುತ್ತದೆ. ಬೋಧನೆಯು ಒಂದು ಕಲೆಯಾಗಿದ್ದು, ಅದನ್ನು ಶಿಕ್ಷಕರು ಕರಗತ ಮಾಡಿಕೊಳ್ಳಬೇಕು. ಒಬ್ಬ ಶಿಕ್ಷಕ ಎಲ್ಲ ವಿಷಯಗಳಲ್ಲಿ ಪರಿಣಿತನಾಗಲು ಸಾಧ್ಯವಿಲ್ಲ. ಆದರೆ ಆತನು ತರಬೇತಿ ಮತ್ತು ವಿಧಾನಗಳ ಮೂಲಕ ಉತ್ತಮ ಶಿಕ್ಷಕನಾಗಬಲ್ಲ. ಬೋಧನೆಯು ಎಲ್ಲಾ ಕಾಲಕ್ಕೂ ಒಂದೇ ತೆರನಾಗಿ ಇರುವುದಿಲ್ಲ. ಅದು ಕಾಲದಿಂದ ಕಾಲಕ್ಕೆ ಪ್ರದೇಶದಿಂದ ಪ್ರದೇಶಕ್ಕೆ ವಿಭಿನ್ನವಾಗಿರುತ್ತದೆ. ಉತ್ತಮವಾದ ಬೋಧನೆಯನ್ನು ಅಳವಡಿಸಿಕೊಂಡು ವಿದ್ಯಾರ್ಥಿಗಳಿಗೆ ಮನಮುಟ್ಟುವಂತೆ ಹೇಗೆ ವಿಷಯವನ್ನು ಮಂಡಿಸಬೇಕೆಂಬುದನ್ನು ಬೋಧಕನು ಕರಗತ ಮಾಡಿಕೊಳ್ಳುವುದು ಅನಿವಾರ್ಯವಾಗುತ್ತದೆ. ಇಲ್ಲವಾದಲ್ಲಿ ವಿದ್ಯಾರ್ಥಿಗಳು ಅಂತಹ ಶಿಕ್ಷಕನನ್ನು ತಿರಸ್ಕರಿಸುತ್ತಾರೆ. ಆದ್ದರಿಂದ ಮಕ್ಕಳಲ್ಲಿ ನವೀನ ದೃಷ್ಟಿಕೋನವನ್ನು ಬೆಳೆಸಿ ಕಲಿಕೆಗೆ ಪ್ರಚೋದಿಸಿ ಕಾರ್ಯೋನ್ಮೂಖರಾಗುವಂತೆ ಮಾಡಿ ಮಕ್ಕಳ ಅವಶ್ಯಕತೆಗಳನ್ನು ತೃಪ್ತಿಕರವಾಗಿ ಪೂರೈಸಿಕೊಳ್ಳುವಂತೆ ಮಾಡುವುದಾಗಿದೆ.

**ವ್ಯಾಖ್ಯೆಗಳು**

- ಪಿನ್ಸೆಟ್ ಅವರ ಪ್ರಕಾರ: "ಬೋಧನೆ ಮಕ್ಕಳು ಬೌದ್ಧಿಕ ವಿಕಾಸಕ್ಕೆ ಪರಿಣಾಮಕಾರಿಯಾದ ಪ್ರಭಾವ ಬೀರುವ ಮಾಧ್ಯಮವಾಗಿದೆ".
- ಬರ್ಟನ್ ಅವರ ಪ್ರಕಾರ : "ಬೋಧನೆಯು ಒಂದು ಪ್ರೇರಕ ಶಕ್ತಿ, ಉತ್ತೇಜನಕಾರಿ ಹಾಗೂ ಮಾರ್ಗದರ್ಶನ ನೀಡುವುದಾಗಿದೆ".
- ರೈಬರ್ನ್ ಅವರ ಪ್ರಕಾರ: "ಮಕ್ಕಳ ಉದ್ವೇಗಗಳನ್ನು ನಿಯಂತ್ರಿಸಿ ಯೋಗ್ಯ ರೀತಿಯಲ್ಲಿ ಕಲಿಯಲು ಸಹಾಯವಾಗುವುದೇ ಬೋಧನೆ".[೨]

ಈ ಮೇಲಿನ ವ್ಯಾಖ್ಯೆಗಳನ್ನು ಗಮನಿಸಿದಾಗ ವ್ಯಕ್ತಿ ಜೀವನ ಪರ್ಯಂತ ತನ್ನ ಅವಶ್ಯಕತೆ ಉದ್ದೇಶಗಳನ್ನು ಈಡೇರಿಸಿಕೊಂಡು, ಸುತ್ತಲಿನ ಪರಿಸರಕ್ಕೆ ಹೊಂದಿಕೊಂಡು ಜೀವಿಸಲು ಅನೇಕ ಔಪಚಾರಿಕ, ಅನೌಪಚಾರಿಕ ಸಂಸ್ಥೆಗಳ ಮೂಲಕ ದೊರೆಯುವ ಮಾರ್ಗದರ್ಶನವೇ ಬೋಧನೆ. ಬೋಧನೆ ಕೇವಲ ವಿಷಯಗಳ ವರ್ಗಾವಣೆ ಅಲ್ಲ.

ಅದು ಒಂದು ರೀತಿಯ ನಿರ್ದೇಶನ, ಮಾರ್ಗಸೂಚಿ ನೀಡುವುದಾಗಿದೆ. ಕಲಿಯುವವರಲ್ಲಿ ಕೌಶಲ್ಯಗಳನ್ನು ವೃದ್ಧಿಸಬೇಕು. ಮಕ್ಕಳ ಭೌತಿಕ ಮತ್ತು ಮಾನಸಿಕ ಬೆಳವಣಿಗೆಗೆ ಕೌಶಲ್ಯಗಳು ಆಧಾರವಾಗುತ್ತವೆ. ಬರವಣಿಗೆ ಕೌಶಲ್ಯ, ಓದುವ ಕೌಶಲ್ಯಗಳನ್ನು ಬೆಳೆಸಬೇಕು. ರಾಬರ್ಟ್ ಬೆರ್‌ಸ್ಪರ್ಡ್ ಹೇಳಿರುವಂತೆ ಬೋಧನೆ ಸಾಮಾಜಿಕ ಅನುವರ್ತನೆಗೆ ಕಾರಣೀಭೂತವಾದ ಅಂಶಗಳಲ್ಲೊಂದಾಗಿದೆ. ಅವರ ಪ್ರಕಾರ ಅಭ್ಯಾಸ ಬಲ, ಉಪಯುಕ್ತತೆ ಹಾಗೂ ಸಮೂಹದೊಂದಿಗಿನ ಅನನ್ಯತೆಗಳು ಇದಕ್ಕೆ ಕಾರಣೀಭೂತವಾಗುತ್ತವೆ.

ಬೋಧನೆಯ ಸ್ವರೂಪವನ್ನು ಗಮನಿಸುವುದಾದರೆ ಪೂರ್ವ ಪ್ರಾಥಮಿಕ ಹಂತ, ಪ್ರಾಥಮಿಕ ಹಂತ, ಹಿರಿಯ ಪ್ರಾಥಮಿಕ ಹಂತ ಮತ್ತು ಪ್ರೌಢ ಶಿಕ್ಷಣ ಹಂತ ಎಂದು ವಿಭಾಗ ಮಾಡಲಾಗಿದ್ದು, ಭೋಧನೆಯು ಹಂತ ಹಂತವಾಗಿ ಮಗುವಿನ ಭೌತಿಕ, ಮಾನಸಿಕ, ಭಾವನಾತ್ಮಕ ಸಾಮಾಜಿಕ ಬೆಳವಣಿಗೆಗೆ ಪೂರಕವಾಗುವಂತೆ ಸರ್ವಾಂಗೀಣ ಬೆಳವಣಿಗೆಯನ್ನು ಮಾಡುವುದಾಗಿದೆ. ಬೋಧನಾ ವೈಶಿಷ್ಟ್ಯಗಳನ್ನು ಅಧ್ಯಯನ ಮಾಡಿದಾಗ ಕನ್ನಡ ಭಾಷಾ ಬೋಧನಾ ವಿಧಾನಗಳು ಪ್ರಮುಖವಾಗಿವೆ. ಭಾಷೆಯು ಚಿಂತನೆಗೆ, ಭಾವನೆಗೆ, ಅನುಭವಕ್ಕೆ ರೂಪ ಕೊಡುವ ಸಾಧನವಾಗಿದೆ. ಭಾಷಾ ಬೋಧನೆ ಎನ್ನುವುದು ಮಾನವನಷ್ಟೇ ಪ್ರಾಚೀನವಾದದ್ದು. ಮನುಷ್ಯ ಮಾತನಾಡುವುದನ್ನು ಕಲಿತನೋ ಅಂದಿನಿಂದಲೇ ಭಾಷೆ ಎನ್ನುವಂತದ್ದು ಉದಯಿಸಿತೆಂದು ಹೇಳಬಹುದು.[೩] ತಾಯಿಯೇ ಭಾಷಾ ಬೋಧನೆಯ ಮೊದಲ ಗುರುವಾಗುತ್ತಾಳೆ. ಹಾಗಾಗಿ ಎಲ್ಲ ಸಂದರ್ಭಗಳಲ್ಲಿಯೂ ವ್ಯಕ್ತಿಗಳ ಮಾತೃ ಭಾಷೆ ಪ್ರಶ್ನೆ ಉದ್ಭವಿಸುತ್ತದೆ. ಮಗುವು ತಾನು ಹುಟ್ಟಿ ಬೆಳೆಯುವ ಪರಿಸರದಲ್ಲಿ ಬಳಕೆಯಿರುವ ಭಾಷೆಯನ್ನು ಸ್ವಾಭಾವಿಕವಾಗಿ ಕಲಿಯುತ್ತದೆ. ಮಗು ಕಣ್ಣು ಬಿಟ್ಟ ಕೂಡಲೇ ಕಾಣುವುದು ತನ್ನ ತಾಯಿಯನ್ನು, ಕೇಳುವುದು ತನ್ನ ತಾಯಿಯ ಧ್ವನಿಯನ್ನು. ಇದನ್ನು ಕುರಿತು ಬಿ.ಎಂ.ಶ್ರೀಕಂಠಯ್ಯ ಅವರು ಹೀಗೆ ಹೇಳಿದ್ದಾರೆ.

*"ಮೊದಲ ತಾಯಿ ಹಾಲ ಕುಡಿದು*
*ಲಲ್ಲೆಯಿಂದ ತೊದಲ ನುಡಿದು*
*ಗೆಳೆಯರೊಡನೆ ಬೆಳೆದು ಬಂದ*
*ಮಾತದಾವುದು...*
*ನಲ್ಲೆಯೊಲವ ತೆರೆದು ತಂದ*
*ಮಾತದಾವುದು"*[೪]



ಎಂದು ಮಾತೃಭಾಷೆಯ ಪ್ರಧಾನ್ಯತೆಯನ್ನು ವಿವರಿಸಿದ್ದಾರೆ. ಭಾಷೆಯು ಒಂದು ಕೌಶಲ್ಯ, ಯಾವುದೇ ಕೌಶಲ್ಯವು ಕರಗತವಾಗಬೇಕಾದರೆ ಸತತ ಅಭ್ಯಾಸ ಮತ್ತು ಸ್ವಾನುಭವ

ಅಗತ್ಯ. ಮಗುವಿಗೆ ಭಾಷಾ ಸ್ವಾಮಿಪ್ಯವನ್ನು ಉಂಟು ಮಾಡುವಾಗ ಭಾಷೆಯ ವಿಶಿಷ್ಟ ಸಾಮರ್ಥ್ಯಗಳಿಂದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಇವುಗಳನ್ನು ಮಕ್ಕಳಲ್ಲಿ ಬೆಳೆಸಿ ಬಲಪಡಿಸಿದಷ್ಟು ಅವರು ಬಳಸುವ ಭಾಷೆ ಸಮೃದ್ಧವಾಗುವುದು. ಆಲಿಸುವುದು ಮತ್ತು ಓದುವುದರ ಸಾಮರ್ಥ್ಯಗಳನ್ನು ಬಲಪಡಿಸುವುದರಿಂದ ಭಾಷಾ ಬೋಧನೆಯ ಉದ್ದೇಶವಾದ 'ಗ್ರಹಿಕೆ' ವಿಷಯ ಗ್ರಹಣ ಗುರಿಯನ್ನು ತಲುಪಬಹುದು. ಮಾತನಾಡುವುದು ಮತ್ತು ಬರೆಯುವ ಸಾಮರ್ಥ್ಯಗಳನ್ನು ಬಲಪಡಿಸುವುದರಿಂದ 'ಅಭಿವ್ಯಕ್ತಿ'ಯ ಉದ್ದೇಶವನ್ನು ಸಾಧಿಸಬಹುದು. ಭಾಷಾ ಬೋಧನೆಯ ಮತ್ತೊಂದು ಉದ್ದೇಶವಾದ ಪ್ರಶಂಸೆಯನ್ನು ತಲುಪಬೇಕಾದರೆ ಮೇಲಿನ ನಾಲ್ಕು ಸಾಮರ್ಥ್ಯಗಳನ್ನು ಪರಿಪೂರ್ಣವಾಗಿ ಅಭಿವೃದ್ಧಿಗೊಳಿಸಿಕೊಳ್ಳಲು ಸಾಧ್ಯ.

ಭಾಷಾ ಬೋಧನೆಯನ್ನು ಕಲಿಸಲು ಹಲವು ಮಾರ್ಗಗಳಿವೆ. ಅವುಗಳೆಂದರೆ ಗದ್ಯ, ಪದ್ಯ, ಪ್ರಬಂಧ ವ್ಯಾಕರಣ ಮತ್ತು ಪತ್ರಲೇಖನ ಮುಂತಾದವು. ಪ್ರತಿಯೊಂದಕ್ಕೂ ಬೋಧಿಸಲು ಪ್ರತ್ಯೇಕವಾದ ಬೋಧನಾ ವಿಧಾನಗಳಿವೆ. ನಗರದಲ್ಲಿ ಬೋಧನಾ ವಿಧಾನಗಳು ಬೇರೆಯಾಗಿರುತ್ತವೆ. ಗ್ರಾಮೀಣ ಭಾಗದಲ್ಲಿ ಬೋಧನಾ ವಿಧಾನಗಳು ಬೇರೆಯಾಗಿರುತ್ತವೆ. ನಗರದ ಮಕ್ಕಳಂತೆ ಗ್ರಾಮೀಣ ಭಾಗದ ಮಕ್ಕಳು ಕಲಿಯುವುದು ಸಾಧ್ಯವಿಲ್ಲ. ಇದರ ಅರಿವು ಶಿಕ್ಷಕರಿಗೆ ಇರಬೇಕು. ಆಯಾ ಶಿಕ್ಷಕನು ಬೋಧನಾ ವಿಧಾನವನ್ನು ಅನುಸರಿಸಲು ಸ್ವತಂತ್ರನಾಗಿರಬೇಕು. ಈ ಹಿನ್ನಲೆಯಲ್ಲಿ ಗಮನಿಸಿದಾಗ ಮಕ್ಕಳು ಭಾಷಾ ಕಲಿಕೆಯಲ್ಲಿ ಹಿಂದುಳಿಯಲು ಕಾರಣಗಳನ್ನು ಹುಡುಕಿದಾಗ ಅಲ್ಲಿ ಪರಿಣಾಮಕಾರಿಯಾದ ಬೋಧನೆ ಮಾಡಲು ಸಹಾಯಕವಾಗುತ್ತದೆ. ಆದ್ದರಿಂದ ಬೋಧಕರು ಸ್ವಯಂ ಆಸಕ್ತಿ, ಅಭ್ಯಾಸ ಮತ್ತು ಬೋಧನಾ ಸೂಕ್ಷ್ಮಗಳನ್ನು ರೂಢಿಸಿಕೊಂಡಾಗ ಮಾತ್ರ ಆತನು ಉತ್ತಮ ಬೋಧಕನಾಗಲು ಸಾಧ್ಯ.

ಹೀಗೆ ಬೋಧನೆ ಮತ್ತು ಕಲಿಕೆ ಒಂದೇ ಆಗಿದ್ದು, ಬೋಧನೆಯಿಲ್ಲದೆ ಕಲಿಕೆ ಇಲ್ಲ, ಕಲಿಕೆ ಇಲ್ಲದೆ ಬೋಧನೆಯಿಲ್ಲ. ಭಾಷಾ ಬೋಧನೆಯ ಪ್ರಾಮುಖ್ಯತೆಯನ್ನು ತಿಳಿಸಿಕೊಡುವುದರಲ್ಲಿ ಬೋಧಕ ರ ಪಾತ್ರ ಎಷ್ಟು ಪ್ರಮುಖವೋ ಕಲಿಕಾರ್ಥಿಗಳೂ ಅಷ್ಟೇ ಪ್ರಾಮುಖ್ಯತೆಯನ್ನು ಪಡೆಯುತ್ತಾರೆ. ಕಲಿಕೆಯ ಮೌಲ್ಯ ಬೋಧನೆಯನ್ನು ಅವಲಂಬಿಸಿದಂತೆ, ಬೋಧನೆಯ ಮೌಲ್ಯಮಾಪನ ಕಲಿಕೆಯನ್ನು ಅವಲಂಬಿಸಿದೆ.

**ಕಲಿಕೆ**

ಮಾನವನು ಪ್ರಕೃತಿಯಲ್ಲಿ ಅನುಕರಣೆ ಮಾಡಿ ಕಲಿತಿರುವುದೇ ಬಹಳಷ್ಟಿದೆ. ಆದ್ದರಿಂದ ಕಲಿಕೆಯು ಮಾನವರಲ್ಲಿ ಕಂಡು ಬರುವ ಸಹಜ ಗುಣ. ಆಯಾ ಪ್ರದೇಶಗಳಿಗೆ ತಕ್ಕಂತೆ ಅಲ್ಲಿನ ಜನರು ನುಡಿಯುವ ಭಾಷೆಯನ್ನು ಕಲಿಯಬೇಕಾದುದು ಅನಿವಾರ್ಯವಾಗಿದೆ.

ಇಂತಹ ಕಲಿಕೆ ಶಿಕ್ಷಣ ಮಾಧ್ಯಮದ ಅವಿಭಾಜ್ಯ ಅಂಗ. ಶಿಕ್ಷಕರು ಮತ್ತು ಪೋಷಕರು ತಮ್ಮ ಮಕ್ಕಳಿಗೆ ಶಿಕ್ಷಣ ಕಲಿಕೆಗೆ ಉತ್ತಮವಾದ ವಾತಾವರಣವನ್ನು ಕಲ್ಪಿಸಬೇಕಾಗಿದೆ. ಅವರು ದೊಡ್ಡವರಾದ ಮೇಲೆ ಅವರ ಕಲಿಕೆಯೇ ಅವರ ಎಲ್ಲ ಭವಿಷ್ಯವನ್ನು ನಿರ್ಧರಿಸುತ್ತದೆ. ಆದುದರಿಂದ ಶಿಕ್ಷಣ ಕ್ಷೇತ್ರದಲ್ಲಿ ಕಲಿಕೆಗೆ ಪ್ರಮುಖ ಸ್ಥಾನವಿದೆ.

ಕೇವಲ ಓದುವುದು ಮತ್ತು ಬರೆಯುವುದನ್ನು ಮಾತ್ರ ಕಲಿಕೆ ಎನ್ನುವುದಿಲ್ಲ. ಅದು ಅತ್ಯಂತ ವಿಶಾಲವಾದ ಅರ್ಥವನ್ನು ಒಳಗೊಂಡಿರುತ್ತದೆ. ಕಲಿಕೆ ಎಂದರೆ ಅಭ್ಯಾಸ ಮೂಲಕ ಶಿಕ್ಷಣವನ್ನು ಪಡೆದು ಶಾಶ್ವತವಾದ ಬದಲಾವಣೆಯಾಗುವುದೇ ಕಲಿಕೆ ಎನಿಸುತ್ತದೆ. ಕಲಿಕೆ ಎಂಬುದು ಕೇವಲ ನಾಲ್ಕು ಗೋಡೆಗಳ ಮಧ್ಯೆ ತರಗತಿ ಕೊಠಡಿಗಳಲ್ಲಿ ಮಾತ್ರ ನಡೆಯುವುದಿಲ್ಲ. ಮಗುವು ತಾನು ಹುಟ್ಟಿ ಬೆಳದ ಪರಿಸರದಿಂದಲೂ ಕಲಿಯುತ್ತಿರುತ್ತದೆ. ತಂದೆ-ತಾಯಿಗಳು ಮಾತನಾಡುವ ಭಾಷೆ, ಅವರ ನಡೆ, ನುಡಿ, ಸಂಸ್ಕೃತಿ ಎಲ್ಲವನ್ನು ಗಮನಿಸುತ್ತಿರುತ್ತದೆ. ಹಾಗಾಗಿ ಮಗುವು ಬೆಳೆಯುವ ವಾತಾವರಣವೂ ಸಹ ಕಲಿಕೆಗೆ ಪೂರಕವಾಗಿರುತ್ತದೆ. ಪ್ರತಿಯೊಬ್ಬ ಮನುಷ್ಯನು ಸಹಜವಾಗಿಯೇ ಜನಿಸುತ್ತಾನೆ. ಆತನು ಅಲ್ಲಿನ ವಾತಾವರಣಕ್ಕೆ ತಕ್ಕಂತೆ ಬೆಳೆಯುತ್ತಾನೆ. ಇಡೀ ಪ್ರಪಂಚವು ಇಷ್ಟೊಂದು ವಿಜ್ಞಾನ, ತಂತ್ರಜ್ಞಾನ ಸೇರಿದಂತೆ ಎಲ್ಲ ಕ್ಷೇತ್ರಗಳಲ್ಲಿ ಮುಂದುವರೆದಿದ್ದರೆ ಅದು ಶಿಕ್ಷಣದಿಂದ ಮಾತ್ರ ಸಾಧ್ಯ ಎಂಬುದನ್ನು ಗಮನಿಸಬೇಕು. ಯಾವುದೇ ವ್ಯಕ್ತಿ ಜೀವನದಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಏನನ್ನಾದರೂ ಕಲಿಯುತ್ತಲೇ ಇರುತ್ತಾನೆ. ಒಟ್ಟಿನಲ್ಲಿ ವ್ಯಕ್ತಿಯು ಹುಟ್ಟಿನಿಂದ ಸಾವಿನವರೆಗೂ ನಿರಂತರವಾಗಿ ಹೊಸ ಹೊಸ ಅನುಭವಗಳನ್ನು ಅನುಭವಿಸುತ್ತಲೇ ಇರುತ್ತಾನೆ. ಇದರಿಂದ ಅವನ ಚಟುವಟಿಕೆಗಳು ಬದಲಾವಣೆಯಾಗುತ್ತ ಹೋಗುತ್ತವೆ. ಹೀಗೆ ಮನುಷ್ಯನ ಅನುಭವಗಳಿಂದ ಚಟುವಟಿಕೆಗಳಲ್ಲಿ ಉಂಟಾಗುವ ಪರಿವರ್ತನೆಯೇ ಕಲಿಕೆಯಾಗಿದೆ.

ಕಲಿಕೆ ಮಾನವ ಜೀವನದ ಅವಿಭಾಜ್ಯ ಅಂಗವಾಗಿದೆ. ಕಲಿಕೆಯಿಂದ ವ್ಯಕ್ತಿ ಸದಾ ಪರಿವರ್ತನೆಗೊಳಗಾಗುತ್ತಾನೆ. ಜೀವನದಲ್ಲಿ ಮಾರ್ಪಾಡುಗಳನ್ನು ಮಾಡಿಕೊಳ್ಳುತ್ತಾನೆ. ಕಲಿಕೆಯು ವ್ಯಕ್ತಿಯ ವರ್ತನೆಯಲ್ಲಿ ಬದಲಾವಣೆಯನ್ನು ತರುವುದಾಗಿದೆ. ಮಾನವರು ತಮ್ಮ ಜೀವನ ಪೂರ್ತಿ ಅನೇಕ ಬದಲಾವಣೆಗಳನ್ನು ಹೊಂದುತ್ತಿರುತ್ತಾರೆ. ಮಾನವನಿಗೆ ಕಲಿಕೆ ಅನಿವಾರ್ಯ ಹಾಗೂ ಅಗತ್ಯ. ಕಲಿಕೆಯು ನಾನಾ ರೀತಿಯ ಜ್ಞಾನ, ಕುಶಲತೆ, ಆಸಕ್ತಿ, ಸಾಮರ್ಥ್ಯ ಮತ್ತು ಅಭಿರುಚಿಗಳನ್ನು ಒಳಗೊಂಡಿರುತ್ತದೆ. ಇವೆಲ್ಲವುಗಳನ್ನು ವ್ಯವಸ್ಥಿತ ರೂಪದಲ್ಲಿ ಒದಗಿಸುವುದೇ ಭಾಷಾ ಶಿಕ್ಷಣದ ಮುಖ್ಯ ಗುರಿಯಾಗಿರುತ್ತದೆ. ಆದುದರಿಂದ ಶಿಕ್ಷಣದ

ಯಾವುದೇ ಹಂತದಲ್ಲಿ ಕಲಿಕೆ ಮುಖ್ಯವಾಗುತ್ತದೆ. ಮಗು ಏನನ್ನು ಕಲಿಯಬೇಕು? ಹೇಗೆ ಕಲಿಯಬೇಕು? ಕಲಿಕಾ ವಿಧಾನಗಳೇನು? ಯಾವ ರೀತಿ ಕಲಿಯಬೇಕು? ಹಾಗೂ ಯಾವ ಭಾಷೆಯಲ್ಲಿ? ಯಾವ ಮಾಧ್ಯಮದಲ್ಲಿ ಕಲಿಯಬೇಕು ಎನ್ನುವ ಹಲವಾರು ಪ್ರಶ್ನೆಗಳು ಕಲಿಕಾ ಬೋಧನಾ ಸಂದರ್ಭದಲ್ಲಿ ಎದುರಾಗುತ್ತವೆ. ಈ ನಿಟ್ಟಿನಲ್ಲಿ ಕಲಿಕೆಯ ಕುರಿತಾದ ವ್ಯಾಖ್ಯಾನಗಳನ್ನು ಅಧ್ಯಯನ ಮಾಡಲಾಗಿದೆ.

- ಹೆನ್ರಿ ಡಿಸ್ಮಿತ್ ಅವರ ಪ್ರಕಾರ: "ಒಳಗಿನ ಮತ್ತು ಹೊರಗಿನ ಪ್ರಚೋಧನೆಗಳಿಗೆ ಯಾವ ಪ್ರತಿಕ್ರಿಯೆ ಫಲಕಾರಿಯಾದೀತೆಂಬುದನ್ನು ಮನಗಂಡು ಆಯಾ ಪ್ರಚೋದನೆಗೆ ಅಂಥದೇ ಪ್ರತಿಕ್ರಿಯೆಯನ್ನು ಮಾಡುತ್ತಾ ಬರುವುದೇ ಕಲಿಕೆ".
- ಹಿಲ್ ಗಾರ್ಡ್ ಅವರ ಪ್ರಕಾರ: "ಹೊಸ ವರ್ತನೆಗಳನ್ನು ಸಂಗ್ರಹಿಸುವುದು, ಇಲ್ಲವೇ ಹಳೆಯ ವರ್ತನೆಗಳನ್ನು ಅನುಭವಕ್ಕನುಗುಣವಾಗಿ ಮಾರ್ಪಾಡಿಸಿಕೊಳ್ಳುವುದಾಗಿದೆ".[೫]
- ಗೇಟ್ಸ್ ಅವರ ಪ್ರಕಾರ : "ಕಲಿಕೆ ಅನುಭವದ ಮೂಲಕ ವರ್ತನೆಯಲ್ಲಾಗುವ ಬದಲಾವಣೆ".

ಮೇಲಿನ ವ್ಯಾಖ್ಯೆಗಳನ್ನು ವಿಶ್ಲೇಷಿಸಿದಾಗ ಕಲಿಕಾ ಪ್ರಕ್ರಿಯೆಯು ಅನುಭವದ ಪರಿಣಾಮವಾಗಿ ವರ್ತನೆಯಲ್ಲಾಗುವ ಬದಲಾವಣೆ ಆಗಿದ್ದು, ವ್ಯಕ್ತಿಯ ಚಟುವಟಿಕೆಯಲ್ಲಿ ಅವನ ಅಭ್ಯಾಸಗಳಲ್ಲಿ ಗಮನಿಸಬಹುದು. ಹಾಗೆಯೇ ಅನುಕರಣೆಯಲ್ಲೂ ಗುರುತಿಸಬಹುದು. ವರ್ತನೆಯಲ್ಲಿ ಹೇಗೆ ಬದಲಾವಣೆಗಳು ಸಾಧ್ಯವೋ ಹಾಗೆಯೇ ಭಾಷಾ ಕಲಿಕೆ ನಿರಂತರ ಪ್ರಕ್ರಿಯೆಯಾಗಿದೆ. ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುವುದನ್ನು ಗಮನಿಸಬಹುದು. ಇವೆಲ್ಲವುದರ ನಡುವೆ ಭಾಷೆಯ ಮೇಲೆ ಹೇಗೆ ಮಾಧ್ಯಮದ ಪ್ರಭಾವ ಬೀರುತ್ತದೆ ಎಂಬುದನ್ನು ಅಧ್ಯಯನ ಮಾಡಬೇಕಾಗಿದೆ. ಇವೆಲ್ಲವುಗಳ ಹಿನ್ನೆಲೆಯಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಬೋಧನೆ ಮತ್ತು ಕಲಿಕಾ ಪದ್ಧತಿ ಭಾರತದಲ್ಲಿ ಹೇಗೆ ಬೆಳೆದು ಬಂದಿತು ಎಂಬುದನ್ನು ತಿಳಿಯುವುದು ಅನಿವಾರ್ಯ ಮತ್ತು ಅಗತ್ಯವಾಗಿದೆ.

### ೬.೧ ಸ್ವಾತಂತ್ರ್ಯ ಪೂರ್ವದ ಶಿಕ್ಷಣ ಚರಿತ್ರೆ

ಭಾರತದ ಶಿಕ್ಷಣದ ಇತಿಹಾಸವು ಭಾರತೀಯ ನಾಗರೀಕತೆಯ ಇತಿಹಾಸದಂತೆಯೇ ಪ್ರಾಚೀನವಾದುದಾಗಿದೆ. ಭಾರತದ ಶಿಕ್ಷಣವು ಯುಗದಿಂದ ಯುಗಕ್ಕೆ ಸಮಾಜದ ಅಗತ್ಯತೆಗಳಿಗೆ ಮತ್ತು ಬೇಡಿಕೆಗಳಿಗೆ ಅನುಗುಣವಾಗಿ ಅನೇಕ ಬದಲಾವಣೆಗಳನ್ನು ಹೊಂದುತ್ತಾ ಬಂದಿದೆ.

ಈ ಅವಧಿಯಲ್ಲಿ ಅನೇಕ ಪಂಥಗಳು, ಧರ್ಮಗಳು, ಸಂಸ್ಕೃತಿಗಳು ತಮ್ಮದೇ ಆದ ವೈವಿಧ್ಯಮಯ ಶಿಕ್ಷಣ ಪದ್ಧತಿಯನ್ನು ಪ್ರಕಟಿಸುತ್ತ ಬರುವುದರ ಜೊತಗೆ ವೈವಿಧ್ಯತೆಯನ್ನು ಸಾಧಿಸಿದೆ. ಭಾರತದಲ್ಲಿ ವಿವಿಧ ಕಾಲಗಳಲ್ಲಿಯ ಶಿಕ್ಷಣದ ಬೆಳವಣಿಗೆಯ ವಿವಿಧ ಅಂಶಗಳನ್ನು ಅರಿತುಕೊಳ್ಳುವುದಕ್ಕೆ ಈ ಕೆಳಗಿನ ವಿಭಾಗ ಕ್ರಮವನ್ನು ಗಮನಿಸಬಹುದಾಗಿದೆ.

- ವೇದಗಳ ಕಾಲದ ಬೋಧನಾ ಪದ್ಧತಿ
- ಬೌದ್ಧರ ಕಾಲದ ಬೋಧನಾ ಪದ್ಧತಿ
- ಮಹಮ್ಮದೀಯರ ಕಾಲದ ಬೋಧನಾ ಪದ್ಧತಿ
- ಬ್ರಿಟಿಷರ ಕಾಲದ ಬೋಧನಾ ಪದ್ಧತಿ
- ಸ್ವಾತಂತ್ರ್ಯೋತ್ತರ ಕಾಲದ ಬೋಧನಾ ಪದ್ಧತಿ

**ವೇದಗಳ ಕಾಲದ ಬೋಧನಾ ಪದ್ಧತಿ**

ಪ್ರಾಚೀನ ಭಾರತದಲ್ಲಿ ಜೀವನದ ವಿವಿಧ ಕ್ಷೇತ್ರಗಳಂತೆ ಶಿಕ್ಷಣ ಕ್ಷೇತ್ರದ ಮೇಲೂ ಧರ್ಮದ ಪ್ರಭಾವ ಇರುವುದನ್ನು ಕಾಣಬಹುದು. ಪ್ರಾಯೋಗಿಕವಾಗಿ ಧರ್ಮವು ಎಲ್ಲಾ ವಲಯಗಳಲ್ಲಿ ಪ್ರಭುತ್ವವನ್ನು ಹೊಂದಿತ್ತು. ಪ್ರಾಚೀನ ಭಾರತೀಯರ ಧಾರ್ಮಿಕ ನಂಬಿಕೆಗಳು, ಕಲ್ಪನೆಗಳು ಹಾಗೂ ಆದರ್ಶಗಳೆಲ್ಲವೂ ವೇದಗಳಿಂದಲೇ ಉತ್ಪನ್ನವಾದವುಗಳು. ವೇದಗಳ ಕಾಲದಲ್ಲಿ ಶಿಕ್ಷಣದ ಗುರಿ ಜ್ಞಾನವನ್ನು ಪಡೆಯುವುದು, ಮೋಕ್ಷ ಜ್ಞಾನ ಸಾಧನೆಯಾಗಿದೆ. ವೇದಗಳ ಕಾಲದಲ್ಲಿ ಶಿಕ್ಷಣವು ವ್ಯಕ್ತಿಯನ್ನು ಅಂಧಕಾರದಿಂದ ಬೆಳಕಿನೆಡೆಗೆ ಅಂದರೆ ಜ್ಞಾನದಿಂದ ಅಜ್ಞಾನದ ಕಡೆಗೆ ಕೊಂಡೊಯ್ಯುವ ಸಾಧನ ಎಂದು ತಿಳಿಯಲಾಗಿತ್ತು. ಗುರು ಮತ್ತು ಶಿಷ್ಯರ ಸಂಬಂಧ ಆಧ್ಯಾತ್ಮಿಕವಾದದ್ದು. ವಿದ್ಯಾರ್ಥಿಯು ಗುರುವಿನ ನೇರ ಸಂಪರ್ಕದಲ್ಲಿ ಬಾಳುತ್ತಿದ್ದನು.

ಶಿಕ್ಷಣ ಪದ್ಧತಿ ಗುರುಕುಲ ಪದ್ಧತಿಯಾಗಿತ್ತು. ಆರು ವರ್ಷ ತುಂಬಿದ ಮಗುವಿಗೆ ಉಪನಯನ ಕಾರ್ಯ ಮಾಡಿದ ನಂತರ ಕಲಿಕೆ ಆರಂಭವಾಗುತಿತ್ತು. ವಿದ್ಯಾರ್ಥಿಗಳು ಬ್ರಹ್ಮಚರ್ಯ ಪಾಲಿಸಬೇಕಾಗಿತ್ತು. ವೇದ ಮತ್ತು ವೇದಾಂಗಗಳನ್ನು ಬೋಧಿಸಲಾಗುತ್ತಿತ್ತು. ಸಂಸ್ಕೃತ ಭಾಷೆ ಶಿಕ್ಷಣದ ಮಾಧ್ಯಮವಾಗಿತ್ತು. ವೇದ, ಉಪನಿಷತ್ತುಗಳ ಜೊತೆಗೆ ಖಗೋಳಶಾಸ್ತ್ರ, ಭೂಮಿತಿ, ಜ್ಯೋತಿಷ್ಯಶಾಸ್ತ್ರ, ಛಂದಸ್ಸಶಾಸ್ತ್ರ, ವ್ಯಾಕರಣ, ನಿರುಕ್ತಿ, ತರ್ಕಶಾಸ್ತ್ರ, ಲಲಿತಕಲೆಗಳು, ಕಾವ್ಯ, ಪುರಾಣ, ಮುಂತಾದ ವಿಷಯಗಳನ್ನು ಪಠ್ಯಕ್ರಮದಲ್ಲಿ

ಬೋಧಿಸಲಾಗುತ್ತಿತ್ತು. ವಿದ್ಯಾರ್ಥಿಯ ಸರ್ವಾಂಗೀಣ ಬೆಳವಣಿಗೆ ಮುಖ್ಯವಾಗಿತ್ತು. ಇವೆಲ್ಲವುಗಳನ್ನು ಅಧ್ಯಯನ ಮಾಡಿದವನಿಗೆ "ದಶಗ್ರಂಥಿ ಮಾನವ" ಎನ್ನುತ್ತಿದ್ದರು.[೬]

ಬೋಧನಾ ವಿಧಾನವು ಎರಡು ರೀತಿಯಲ್ಲಿ ನಡೆಯುತ್ತಿತ್ತು. ವೈಯಕ್ತಿಕ ಬೋಧನಾ ಪದ್ಧತಿ ಮತ್ತು ಮೌಖಿಕ ಪದ್ಧತಿ. ಕಲಿಕೆಯ ಪ್ರಮುಖ ಪದ್ಧತಿಗಳು ಶ್ರವಣ, ಮನನ ಮತ್ತು ನಿದಿಧ್ಯಾಸನ, ಶ್ರವಣ ಮಾಡಿ ಅಂಶಗಳ ಮೇಲೆ ತನ್ನ ಗಮನವನ್ನು ಕೇಂದ್ರೀಕರಿಸಬೇಕಿತ್ತು. ಶಿಕ್ಷಕರು ವಿದ್ಯಾರ್ಥಿಗಳ ಮತ್ತು ವಿಷಯಗಳ ಮೇರೆಗೆ ವಿವಿಧ ಬೋಧನಾ ಪದ್ಧತಿಗಳನ್ನು ಉಪಯೋಗಿಸುತ್ತಿದ್ದರು. ಹಿರೇಮಣಿ ಪದ್ಧತಿಯನ್ನು ಅನ್ವಯಿಸುತ್ತಿದ್ದರು. ಉಪನ್ಯಾಸ, ಚರ್ಚಾ ಪದ್ಧತಿಯನ್ನು ಪ್ರಾಯೋಗಿಕ ಪದ್ಧತಿಗಳನ್ನು ಅನುಸರಿಸುತ್ತಿದ್ದರು. ವೇದ, ಮಂತ್ರಗಳನ್ನು ಕಂಠಪಾಠ ಪದ್ಧತಿಯಿಂದ ಕಲಿಯುತ್ತಿದ್ದರು. ಗುರುವಿನ ಉಪದೇಶ, ಅವನ ರೀತಿ ನೀತಿಗಳಿಂದ ಸ್ಫೂರ್ತಿ ಹೊಂದಿ ವಿದ್ಯಾರ್ಥಿಯು ಗುರುವನ್ನು ಅನುಕರಿಸುತ್ತಿದ್ದನು. ಸಮಾಜ ಸೇವಾ ಭಾವನೆ, ಪೌರನ ಕರ್ತವ್ಯಗಳು, ವ್ಯಕ್ತಿತ್ವ ವಿಕಾಸ, ಸಾಂಸ್ಕೃತಿಕ ಪರಂಪರೆಯನ್ನು ಅಭಿವೃದ್ಧಿಗೊಳಿಸುವ ನಿಟ್ಟಿನಲ್ಲಿ ವೇದಗಳ ಕಾಲದ ಶಿಕ್ಷಣ ಪದ್ಧತಿಯಿತ್ತು.

**ಬೌದ್ಧರ ಕಾಲದ ಬೋಧನಾ ಪದ್ಧತಿ**

ವೇದಗಳ ಕಾಲದ ಶಿಕ್ಷಣ ಪದ್ಧತಿಯಂತೆಯೇ ಇಲ್ಲಿಯೂ ಮೋಕ್ಷ ಸಾಧನೆಯೇ ಶಿಕ್ಷಣದ ಮುಖ್ಯ ಗುರಿಯಾಗಿತ್ತು, ಬೌದ್ಧರ ಕಾಲದ ಕಲಿಕಾ ಪದ್ಧತಿಯು ಸಮೂಹ ಶಿಕ್ಷಣ ನೀಡುವುದಾಗಿತ್ತು. ಎರಡು ಹಂತಗಳಲ್ಲಿ ಬೋಧನೆಯನ್ನು ಮಾಡುತ್ತಿದ್ದರು. ಪ್ರಾಥಮಿಕ ಹಂತ, ಮತ್ತೊಂದು ಉನ್ನತ ಶಿಕ್ಷಣ ಹಂತ. ಬೌದ್ಧರ ಕಾಲದಲ್ಲಿ ಪಬ್ಬಜ ಅಥವಾ ದೀಕ್ಷೆಯನ್ನು ಪಡೆದು ಶಿಕ್ಷಣಕ್ಕಾಗಿ ಸಂಘವನ್ನು ಸೇರುತ್ತಿದ್ದರು. ಪಬ್ಬಜ ಎಂದರೆ 'ಹೊರಗೆ ಹೋಗುವುದು' ಎಂದರ್ಥ. ಈ ಅರ್ಹತೆಗಳೊಂದಿಗೆ ವಿದ್ಯಾರ್ಥಿ ಹನ್ನೆರಡು ವರ್ಷಗಳ ದೀರ್ಘಾವಧಿ ಶಿಕ್ಷಣ ಪಡೆದುಕೊಳ್ಳುತ್ತಿದ್ದರು. ವಿದ್ಯಾರ್ಥಿಗಳು ಜೀವನದಲ್ಲಿ ಸತ್ಯ, ಶಾಂತಿ, ಸಹಕಾರ ಉತ್ತಮ ನಡತೆಯನ್ನು ಬೆಳೆಸಿಕೊಳ್ಳುವುದು ಮೂಲ ಉದ್ದೇಶವಾಗಿತ್ತು.

ಬೌದ್ಧರ ಕಾಲದ ಶಿಕ್ಷಣದಲ್ಲಿ ಧಾರ್ಮಿಕ ಮತ್ತು ಆಧ್ಯಾತ್ಮಿಕತೆ ಮುಖ್ಯ ಗುರಿಯಾಗಿತ್ತು. ಧಾರ್ಮಿಕ ಗ್ರಂಥಗಳ ಅಧ್ಯಯನವು ಮಹತ್ವದ್ದಾಗಿತ್ತು. ಸುತ್ತ ಪಿಟಕ, ವಿನಯ ಪಿಟಕ ಮತ್ತು ಅಭಿದಮ್ಮ ಪಿಟಕ ಎಂಬ ತ್ರಿಪಿಟಕಗಳ ಅಧ್ಯಯನದ ಪ್ರಮುಖ ಧರ್ಮ

ಗ್ರಂಥಗಳಾಗಿದ್ದವು. ನೂಲುವುದು, ನೇಯುವುದು, ಬರವಣಿಗೆ, ಅಂಕಗಣಿತ ಮುಂತಾದ ವಿಷಯಗಳನ್ನು ಪಠ್ಯಕ್ರಮದಲ್ಲಿ ಬೋಧಿಸುತ್ತಿದ್ದರು. ಉನ್ನತ ಶಿಕ್ಷಣದಲ್ಲಿ ಸಂಸ್ಕೃತ, ಸಾಹಿತ್ಯ, ವ್ಯಾಕರಣ, ಖಗೋಳ, ಜ್ಯೋತಿಷ್ಯ, ಪ್ರಕೃತಿ ಅಧ್ಯಯನ, ಚಿತ್ರಕಲೆ ಮೊದಲಾದವುಗಳು ಪಠ್ಯಕ್ರಮದ ವಿಷಯಗಳಾಗಿದ್ದವು.[೭]

ಇವರ ಕಾಲದಲ್ಲಿ ವೇದಗಳ ಕಾಲದಲ್ಲಿ ಇದ್ದಂತೆ ಮೌಖಿಕ ಶಿಕ್ಷಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ಇತ್ತು. ಚರ್ಚಾ ಪದ್ಧತಿ, ಉಪನ್ಯಾಸ ಪದ್ಧತಿ, ಪ್ರಶ್ನೋತ್ತರ ಪದ್ಧತಿ, ಪ್ರಯೋಗ ಪದ್ಧತಿ ಮೊದಲಾದ ಪದ್ಧತಿಗಳನ್ನು ಅಳವಡಿಸಿಕೊಂಡು ವಿಷಯವನ್ನು ಬೋಧಿಸಲಾಗುತ್ತಿತ್ತು. ಪ್ರಾಥಮಿಕ ಹಂತದಲ್ಲಿ ಪಾಳಿ ಭಾಷೆ, ಉನ್ನತ ಶಿಕ್ಷಣದಲ್ಲಿ ಸಂಸ್ಕೃತವು ಶಿಕ್ಷಣದ ಮಾಧ್ಯಮವಾಗಿತ್ತು. ವಿದ್ಯಾರ್ಥಿಯ ಬುದ್ಧಿಶಕ್ತಿಗೆ ಸರಿಯಾದ ತರಬೇತಿಯನ್ನು ನೀಡಲು ಆಗಮದ ಪದ್ಧತಿಯನ್ನು ಅನುಸರಿಸುತ್ತಿದ್ದರು. ವಿದ್ಯಾರ್ಥಿಗಳಿಗೆ ಲೌಕಿಕ ಜ್ಞಾನವನ್ನು ನೀಡುವ ಸಲುವಾಗಿ ಶಿಕ್ಷಣದ ಕೊನೆಗೆ ಪ್ರವಾಸ ಮತ್ತು ಪ್ರಾತ್ಯಕ್ಷಿಕೆ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು. ಅನೇಕ ಅಂತರಾಷ್ಟ್ರೀಯ ವಿಶ್ವವಿದ್ಯಾಲಯಗಳು ಇವರ ಕಾಲದಲ್ಲಿ ಅಸ್ತಿತ್ವಕ್ಕೆ ಬಂದವು. ನಳಂದಾ, ವಿಕ್ರಮಶಿಲಾ, ವಲ್ಲಭಿ ಎಂದು ಹೆಸರು ವಾಸಿಯಾದವು. ಜನಸಾಮಾನ್ಯರ ಶಿಕ್ಷಣ, ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಾಯಿತು. ನೈತಿಕ ಮತ್ತು ಧಾರ್ಮಿಕ ಶಿಕ್ಷಣಕ್ಕೆ ಪ್ರಾಶಸ್ತ್ಯ ನೀಡಿರುವುದನ್ನು ಗಮನಿಸಬಹುದಾಗಿದೆ.

**ಮಹಮ್ಮದೀಯರ ಕಾಲದ ಬೋಧನಾ ಪದ್ಧತಿ**

ಮುಸ್ಲಿಂ ಆಡಳಿತದ ಅವಧಿಯಲ್ಲಿ ಭಾರತದಲ್ಲಿ ಶಿಕ್ಷಣ ಪ್ರಸಾರವಾಯಿತು. ಮುಸ್ಲಿಂ ಶಿಕ್ಷಣವು ಕೇವಲ ಜನರ ಬೌದ್ಧಿಕ ಹಸಿವನ್ನು ನೀಗಿಸದೆ ಅವರ ಆರ್ಥಿಕ ಸಮಸ್ಯೆಗಳನ್ನು ಸಹ ಪರಿಹರಿಸಿತು. ಮುಸ್ಲಿಂ ಶಿಕ್ಷಣದ ಪ್ರಮುಖ ಗುರಿ ಮುಸ್ಲಿಂ ಧರ್ಮದ ತತ್ವ ಮತ್ತು ಸಿದ್ಧಾಂತಗಳನ್ನು ಪ್ರಸಾರ ನೀಡುವುದಾಗಿತ್ತು. ಮುಸ್ಲಿಂ ಆಳ್ವಿಕೆಯ ಸಂದರ್ಭದಲ್ಲಿ ಹೊಸ ಮಾದರಿಯಲ್ಲಿ ಶಿಕ್ಷಣವನ್ನು ಪ್ರಸಾರ ಮಾಡತೊಡಗಿದರು. ಬೌದ್ಧ ಧರ್ಮ ಭಾರತದಲ್ಲಿ ಕ್ಷೀಣಿಸುತ್ತಾ ಬಂದಂತೆ ಮುಸ್ಲಿಂರ ಆಳ್ವಿಕೆ ಭಾರತದಲ್ಲಿ ಆರಂಭವಾಯಿತು.

ಇಸ್ಲಾಂ ತತ್ವಗಳು, ಸಿದ್ಧಾಂತಗಳು, ಕಾಯ್ದೆಗಳು ಮತ್ತು ಸಾಮಾಜಿಕ ಪದ್ಧತಿಗಳನ್ನು ಅಭಿವೃದ್ಧಿ ಪಡಿಸುವುದು ಮತ್ತು ಪ್ರಚಾರ ಮಾಡುವುದು ಮತ್ತೊಂದು ಗುರಿಯಾಗಿತ್ತು. ಶಿಕ್ಷಣ ಪ್ರಸಾರ ಮಾಡಲು ಬೇರೆ ಬೇರೆ ಸಂಸ್ಥೆಗಳು ಇದ್ದವು. ಮಕ್ತಾಬ್‌ಗಳು, ಮದರಸಾಗಳು, ಖಾನಖಾಸ್, ದರ್ಗಾ ಮತ್ತು ಮಸೀದಿಗಳಲ್ಲಿ ಪ್ರಾಥಮಿಕ ಶಿಕ್ಷಣ ಮತ್ತು ಉನ್ನತ ಶಿಕ್ಷಣವನ್ನು ನೀಡುತ್ತಿದ್ದರು. ಮೊದಲು ಓದುವುದು, ಬರೆಯುವುದು ಮತ್ತು ಅಂಕಗಣಿತದ

ಬಗ್ಗೆ ಶಿಕ್ಷಣವನ್ನು ನೀಡುತ್ತಿದ್ದರು. ಖುರಾನಿನ ಕೆಲವು ಅಧ್ಯಾಯಗಳನ್ನು ಹೇಳಿ ಕೊಡುತ್ತಿದ್ದರು. ಬಿಸ್ಮಿಲ್ಲಾ ಎಂಬ ಧಾರ್ಮಿಕ ಕ್ರಿಯೆಯ ನಂತರ ಶಿಕ್ಷಣ ಪ್ರಾರಂಭವಾಗುತ್ತಿತ್ತು. ಅರಮನೆಗಳಲ್ಲಿ ಅರೇಬಿಕ್, ಪರ್ಶಿಯನ್ ಮತ್ತು ಮಸ್ಲಿಂ ಧರ್ಮದ ಬಗ್ಗೆ ಬೋಧಿಸಲಾಗುತ್ತಿತ್ತು.

ಮಕ್ತಾಬ್‌ಗಳಲ್ಲಿ ಶಿಕ್ಷಣ ಪಡೆದು ಉನ್ನತ ಶಿಕ್ಷಣವನ್ನು ಪಡೆಯಲು ಮದರಸಾಕ್ಕೆ ಬರಬೇಕಾಗಿತ್ತು. ಮದರಸಾಗಳಲ್ಲಿ 'ಮುಸ್ಲಿಂ' ಧರ್ಮವನ್ನು ಕಡ್ಡಾಯವಾಗಿ ಬೋಧಿಸಲಾಗುತ್ತಿತ್ತು. ವೈದ್ಯಕೀಯ ಶಾಸ್ತ್ರ, ನೀತಿ ಶಾಸ್ತ್ರ, ಖಗೋಳ ಶಾಸ್ತ್ರ, ಕಾನೂನು, ತತ್ವಶಾಸ್ತ್ರ, ಗಣಿತಶಾಸ್ತ್ರ, ಅರ್ಥಶಾಸ್ತ್ರ, ವ್ಯವಸಾಯ, ಇತಿಹಾಸ, ಸಂಗೀತ ಮುಂತಾದ ವಿಷಯಗಳನ್ನು ಬೋಧಿಸಲಾಗುತ್ತಿತ್ತು. ಸೈನಿಕ ಶಿಕ್ಷಣ ಪಡೆಯುವುದು ಕಡ್ಡಾಯವಾಗಿತ್ತು. ಇವರ ಕಾಲದಲ್ಲಿ ಬೋಧನಾ ಪದ್ಧತಿಗಳು ಮೌಖಿಕ ಪದ್ಧತಿ, ಕಂಠಪಾಠ ಮಾಡುವ ಪದ್ಧತಿ, ಅನುಗಮನ ಪದ್ಧತಿ, ಹಿರೇಮಣಿ ಪದ್ಧತಿ, ಕಂಠಪಾಠ ಮಾಡುವ ಪದ್ಧತಿ, ಸ್ವಯಂ ಅಧ್ಯಯನ ಪದ್ಧತಿ, ವರ್ಣಮಾಲಾ, ಪದಮಾಲಾ ಮತ್ತು ವಾಕ್ಯಮಾಲಾ ಪದ್ಧತಿ ಜಾರಿಯಲ್ಲಿದ್ದು ನಿರಂತರ ಮೌಲ್ಯಮಾಪನ ಪದ್ಧತಿಯನ್ನು ಅನುಸರಿಸುತ್ತಿದ್ದರು. ಅಸಾಮಾನ್ಯರು ಶಿಕ್ಷಣದಿಂದ ವಂಚಿತರಾಗುತ್ತಿದ್ದರು. ಸ್ತ್ರೀ ಶಿಕ್ಷಣ ನಿರ್ಬಂಧನೆಗೆ ಒಳಪಟ್ಟಿತ್ತು.

ಕನ್ನಡ ನಾಡಿನ ಉತ್ತರಕ್ಕೆ ಬಹುಮನಿಗಳು, ಅದಿಲ್‌ಶಾಹಿಗಳು, ದಕ್ಷಿಣಕ್ಕೆ ಹೈದರಾಲಿ, ಟಿಪ್ಪು ಸುಲ್ತಾನರು ರಾಜ್ಯವಾಳಿ ಕರ್ನಾಟಕದ ಇತಿಹಾಸಕ್ಕೆ ತಿರುವು ಕೊಟ್ಟಿದ್ದಾರೆ. ಬಹಮನಿಗಳು ಉತ್ತರದ ಮುಸ್ಲಿಂ ರಾಜ್ಯಗಳಿಂದ ಪ್ರತ್ಯೇಕವಾದ ರಾಜ್ಯ ಕಟ್ಟಿ ಕಲೆ, ತತ್ವಜ್ಞಾನಗಳಿಗೆ ಕೊಡುಗೆ ನೀಡಿದ್ದಾರೆ. ಧರ್ಮ ಬೋಧನೆಗಾಗಿ ಮಸೀದಿಯ ಭಾಗವಾಗಿ ಮಖ್ತಾಬ್ ಅಥವಾ ಪ್ರಾಥಮಿಕ ಶಾಲೆಗಳನ್ನು ನಡೆಸಲಾರಂಭಿಸಿದರು. ಇಲ್ಲಿ ಖುರಾನ್ ಪಠಣ, ಪ್ರಾರ್ಥನೆ, ಅರಬ್ಬಿ ಭಾಷೆಯ ಪರಿಚಯ, ಅಂಕ ಗಣಿತಗಳನ್ನು ಹೇಳಿ ಕೊಡುತ್ತಿದ್ದರು. ಬರುಬರುತ್ತ ಫಾರಸಿ ಭಾಷೆಯನ್ನು ಕಲಿಸಲಾರಂಭಿಸಿದರು. ಎಲ್ಲರಿಗೂ ಜೊತೆಯಾಗಿಯೇ ಓದಿಸಲಾಗುತ್ತಿತು. ಖುರಾನ್‌ನ್ನು ಕಂಠಪಾಠ ಮಾಡಿಸಲಾಗುತ್ತಿತ್ತು.[೮] ಹೀಗೆ ಬ್ರಿಟಿಷರು ಭಾರತಕ್ಕೆ ಬರುವುದಕ್ಕೆ ಪೂರ್ವದಲ್ಲಿ ವೇದಗಳ ಕಾಲದ ಬೋಧನಾ ಪದ್ಧತಿ, ಬೌದ್ಧರ ಕಾಲದ ಬೋಧನಾ ಪದ್ಧತಿ ಮತ್ತು ಮುಸ್ಲಿಂ ಕಾಲದ ಬೋಧನಾ ಪದ್ಧತಿಗಳನ್ನು ಗಮನಿಸಬಹುದಾಗಿದೆ.

ಒಟ್ಟಿನಲ್ಲಿ ಪ್ರಾಚೀನ ಕಾಲದ ಶಿಕ್ಷಣ ವ್ಯವಸ್ಥೆ ಒಂದು ಸೀಮಿತ ಚೌಕಟ್ಟಿಗೆ ಒಳಪಟ್ಟಿತ್ತು. ಧಾರ್ಮಿಕ ಹಾಗೂ ಆಧ್ಯಾತ್ಮಿಕತೆಯ ಕಡೆ ಹೆಚ್ಚು ಒಲವಿದ್ದು, ಈ ಸಂಸ್ಥೆಗಳು ಪ್ರಾದೇಶಿಕ ಭಾಷೆಯನ್ನು ಕಡೆಗಣಿಸಿ ತಮ್ಮದೇ ಆದ ಪ್ರಮುಖ ಭಾಷೆಯಲ್ಲಿ ಶಿಕ್ಷಣ ನೀಡುತ್ತಿದ್ದರಿಂದ

ಜನ ಸಾಮಾನ್ಯರು ಸಹಜವಾಗಿಯೇ ಶಿಕ್ಷಣದಿಂದ ದೂರ ಉಳಿಯುತ್ತಿದ್ದರು. ಆದರೆ ಆ ಕಾಲದ ಬೋಧನೆ ಮತ್ತು ಕಲಿಕೆಯ ಪದ್ಧತಿಗಳು ಮಾತ್ರ ವಿಭಿನ್ನವಾಗಿರುತ್ತಿದ್ದವು ಎಂಬುದನ್ನು ಕಾಣಬಹುದು. ಆದರೆ ಆ ಎಲ್ಲಾ ಬೋಧನೆ ಮತ್ತು ಕಲಿಕೆಯ ವಿಧಾನಗಳು ಬ್ರಿಟಿಷರ ಕಾಲದಲ್ಲಿ ಸಂಪೂರ್ಣವಾಗಿ ಬದಲಾವಣೆಗೊಂಡು ಆಧುನಿಕ ಶಿಕ್ಷಣ ಪದ್ಧತಿಯು ಜಾರಿಗೆ ಬಂದಿತು.

**ಬ್ರಿಟಿಷರ ಕಾಲದ ಬೋಧನಾ ಪದ್ಧತಿ**

ಕರಾವಳಿಯಿಂದ ಕರ್ನಾಟಕಕ್ಕೆ ಆಗಮಿಸಿದ ಈಸ್ಟ್ ಇಂಡಿಯಾ ಕಂಪನಿಯು ವ್ಯಾಪಾರ ಮಾಡಿ, ಬೊಕ್ಕಸ ತುಂಬಿಸಿಕೊಳ್ಳುವದರಲ್ಲಿ ಆಸಕ್ತಿ ತಳೆದಿತ್ತೇ ವಿನಃ ಸ್ಥಾನೀಯರ ಶಿಕ್ಷಣಾವಶಕಾಶಗಳನ್ನು ಬೆಳಸುವುದರಲ್ಲಿ ಅಲ್ಲ. ಆದರೆ ಅದರೊಂದಿಗೆ ಮಿಶನರಿಗಳಿಗೆ, ಕನ್ನಡಿಗರನ್ನು ಹೆಚ್ಚೆಚ್ಚು ಸಂಖ್ಯೆಯಲ್ಲಿ ಕ್ರೈಸ್ತರನ್ನಾಗಿ ಮಾಡುವ ಹಂಬಲವಿದುದ್ದರಿಂದ ಸ್ಥಳೀಯರ ಸಾಮಾಜಿಕ ಜೀವನ, ಶಿಕ್ಷಣ ಕ್ರಮವನ್ನು ಅಭ್ಯಸಿಸಿದರು. ಇಲ್ಲಿಯ ಖರ್ಚಿಲ್ಲದ ವಿದ್ಯಾ ಪದ್ಧತಿ ನೋಡಿ ಅತ್ಯಂತ ವಿಸ್ಮಯಪಟ್ಟರು. ಗವರ್ನರ್ ಜನರಲ್‌ನ ಆದೇಶದ ಮೇರೆಗೆ ೧೯ನೇ ಶತಮಾನದ ಪ್ರಾರಂಭದಲ್ಲಿ ಜಿಲ್ಲಾಧಿಕಾರಿಗಳು ಕೈಗೊಂಡ ಮುಂಬೈ, ಮದ್ರಾಸ್ ಪ್ರಾಂತ್ಯಗಳ ಸರ್ವೇಗಳು ಶತಕಗಳಿಂದ ನಡೆದು ಬಂದ ಶಿಕ್ಷಣದ ಕ್ರಮದ ಮೇಲೆ ಬೆಳಕು ಚೆಲ್ಲುತ್ತವೆ. ಹಳ್ಳಿಯ ಜನ ಸಾಮೂಹಿಕವಾಗಿ ಕಾಳು-ಕಡ್ಡಿ ಕೊಟ್ಟೋ, ಧನಸಹಾಯ ಮಾಡಿಯೋ ನಡೆಸುವ ಏಕೋಪಾಧ್ಯಾಯ ಶಾಲೆಗಳು ಮತ್ತು ಜಾಣ ವಿದ್ಯಾರ್ಥಿಗಳನ್ನು ಹಿರೇಮಾಣಿಯಾಗಿ ನೇಮಿಸಿ ಇತರ ವಿದ್ಯಾರ್ಥಿಗಳಿಗೆ ಬೋಧಿಸುವ ಕ್ರಮ ಅದ್ವಿತೀಯವಾದದ್ದೆಂದು ಬ್ರಿಟಿಷರು ಒಪ್ಪಿಕೊಂಡರು. ಮಗ್ಗಿ, ಕವಿತೆ, ಕೋಷ್ಟಕಗಳನ್ನು ಸಾಮೂಹಿಕವಾಗಿ ಕಂಠಪಾಠ ಮಾಡುವುದು, ಮೇಲಿನ ವರ್ಗದವರು, ಕೆಳಗಿನ ವರ್ಗದವರಿಗೆ ಕಲಿಸುವುದು, ಜಾಣನಿಂದ, ಓದಿನಲ್ಲಿ ಹಿಂದುಳಿದವನನ್ನು ತಿದ್ದಿ ತೀಡಿಸುವ ಕೆಲಸ ಮಾಡಿಸುವುದು ಮುಂತಾದವು ಅತ್ಯಂತ ಪ್ರಭಾವಶಾಲಿ ಶಿಕ್ಷಣ ಕ್ರಮಗಳೆಂದು ಹೊಗಳಿದರು. ಡಾ.ಎಂಡ್ರ್ಯೂಬೆಲ್ ಎಂಬಾತನು ನಮ್ಮ ಹಿರೇಮಾಣಿ ಅಥವಾ ಮಾನಿಟರ್ ಪದ್ಧತಿಯನ್ನು ಇಂಗ್ಲಂಡ್‌ನಲ್ಲಿ ಬಳಕೆಗೆ ತಂದನೆಂದರೆ ಅದರ ಹಿರಿಮೆಯ ಅರಿವಾಗದೇ ಇರದು. ಆದರೆ ಈ ಪ್ರಚಲಿತ ಪದ್ಧತಿಯಿದ್ದ ರಾಜ್ಯಗಳು, ಪ್ರದೇಶಗಳು, ಬ್ರಿಟಿಷರ ಕೈ ಸೇರಲಾರಂಭಿಸಿದ್ದರಿಂದ ಮತ್ತು ದಾನ ಧರ್ಮ ಮಾಡುತ್ತಿದ್ದ ಧರ್ಮಿಷ್ಟರು ಬಡವರಾಗಿದ್ದರಿಂದ ಶಿಕ್ಷಣವೆಂಬ ಮಹಾವೃಕ್ಷದ ಒಂದೊಂದೆ ಬೇರು ಕಳೆದು ಹೋಗಿ ಮರ ಬರಡಾಯಿತು.[೯]

ಇಟಲಿಯ ಪ್ರವಾಸಿ ಪೀಟ್ರೋಡೆಲ್ಲಾವಾಲ್ಲೆಯು ಕ್ರಿ.ಶ. ೧೬೨೩ರಲ್ಲಿ ಇಕ್ಕೇರಿಯನ್ನು ಸಂದರ್ಶಿಸಿದ್ದ. ದೇವಾಲಯದ ಆವರಣದಲ್ಲಿ ತಾನು ನೋಡಿದ ಹಳ್ಳಿಯ ಶಾಲೆಯ ಗಣಿತ ಪಾಠದ (ಎಣಿಕೆಯ) ಕ್ರಮವನ್ನು ಕಂಡು, ಮೆಚ್ಚಿಕೊಂಡು, ವಿವರಗಳನ್ನು ಬರೆದಿಟ್ಟಿದ್ದಾನೆ. ದೇವಸ್ಥಾನದ ಮುಖಮಂಟಪದಲ್ಲಿ ನಾಲ್ಕು ಹುಡುಗರಿದ್ದರು. ಗುರುವಿನ ಬಳಿ ಈ ಮೊದಲು ಕಲಿತ ಪಾಠವನ್ನು ಮರೆಯದಂತೆ ಕಂಠಪಾಠ ಮಾಡಿಡಲು ರಾಗವಾಗಿ ಹೇಳುತ್ತಿದ್ದರು. 'ಒಂದೊಂದ್ಲೆ ಒಂದು' ಈ ರೀತಿ ಒಬ್ಬ ಹುಡುಗ, ರಾಗವಾಗಿ ಹೇಳುತ್ತ ಹೇಳಿದ್ದನ್ನು ಪೆನ್ ಮತ್ತು ಕಾಗದವನ್ನು ಬಳಸದೇ ಎದುರಿಗೆ ಒಟ್ಟಿದ ಮರಳು ರಾಶಿಯ ಮೇಲೆ ಬೆರಳಿನಿಂದ ಬರೆಯುತ್ತಿದ್ದ. ಈತ ಉಚ್ಚರಿಸಿ ಬರೆದ ಮೇಲೆ ಇತರರೂ ಅದನ್ನೇ ಉಚ್ಚರಿಸಿ ಅನುಕರಿಸಿದರು. ತುಂಬಿದ ನಂತರ ಮೊದಲ ಬಾಲಕ ಮತ್ತೆ ಹಾಡಿ ಬರೆದ. ಇತರ ಹುಡುಗರು ಅನುಕರಿಸಿದರು. ಸ್ಥಳವೆಲ್ಲ ಅಂಕಿಗಳಿಂದ ತುಂಬಿದಾಗ, ಕೈಯಿಂದ ಬರೆದದ್ದನ್ನು ಅಳಿಸಿ, ಬೇಕಾದಾಗ ಇನ್ನಷ್ಟು ಮರಳು ಹಾಕಿ ಪಾಠವನ್ನು ಮುಂದುವರಿಸಿದರು. ಇದೇ ರೀತಿ ಇತರ ವಿಷಯಗಳ ಓದು-ಬರಹಗಳನ್ನು ಲೇಖನಿ ಮತ್ತು ಕಾಗದ ಬಳಸದೆ ಕಲಿಯುತ್ತಿರುವುದಾಗಿ ಹೇಳಿದರು. ಗುರುವು ಇಲ್ಲದಾಗ ಈ ಅಂಶ ಮರೆತರೆ ಅಥವಾ ತಪ್ಪಿದರೆ ಏನು ಮಾಡುತ್ತೀರಾ ಎಂದು ಕೇಳಿದಾಗ, ನಾಲ್ವರಿಗೂ ಒಂದೇ ಭಾಗ, ಒಂದೇ ಬಾರಿಗೆ ಮರೆಯುವ ಇಲ್ಲವೇ ತಪ್ಪಿಹೋಗುವ ಸಾಧ್ಯತೆ ಇಲ್ಲವೆಂದು ಸರಿಯಾಗಿಯೇ ಹೇಳಿದರು. ಒಬ್ಬನು ತಪ್ಪಿದರೆ ಇತರರು ತಿದ್ದಲಿಕ್ಕೆ ಅವಕಾಶವಿದ್ದು, ಎಲ್ಲರೂ ಜೊತೆಗೂಡಿ ಅಭ್ಯಸಿಸುತ್ತೇವೆಂದರು. ಇದೊಂದು ತುಂಬಾ ಚೆನ್ನಾದ, ಸರಳ, ಸುಭದ್ರ ಮತ್ತು ಅಗ್ಗದ ಅಭ್ಯಾಸ ಕ್ರಮವೆನಿಸಿತು ಎಂದು ಹೇಳುತ್ತಾನೆ.[೧೦]

ಈಸ್ಟ್ ಇಂಡಿಯಾ ಕಂಪನಿಯಿಂದ ಬ್ರಿಟಿಷ್ ಸರ್ಕಾರ ರಾಜ್ಯಾಡಳಿತವನ್ನು ವಹಿಸಿಕೊಂಡಾಗ ನಮ್ಮ ಶಿಕ್ಷಣ ಪದ್ಧತಿ ಸಂಪೂರ್ಣ ನೆಲಸಮವಾಗಿ ಹೋಗಿತ್ತು. ಅದಕ್ಕೆ ಜೀವಕಳೆ ತುಂಬಲು, ದೇಶೀಯ ಶಿಕ್ಷಣ ಪದ್ಧತಿ ಹೇಗಿತ್ತು? ಎಂದು ಕೂಲಂಕಷವಾಗಿ ಅಭ್ಯಸಿಸಿ ವರದಿ ಒಪ್ಪಿಸಲು ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಲಾಗಿತ್ತಷ್ಟೆ? ಹೆಚ್ಚಿನ ಅಧಿಕಾರಿಗಳಿಗೆ ಇಲ್ಲಿಯ ವಿದ್ಯಾಪದ್ಧತಿಯ ಬಗ್ಗೆ ಸಂಪೂರ್ಣ ಅಜ್ಞಾನವಿದ್ದುದರಿಂದ ಅವರು ತಮ್ಮ ದೇಶದಲ್ಲಿಯಂತೆ, ಶಾಲಾ ಕಟ್ಟಡಗಳು, ಅವುಗಳ ವಿಸ್ತಾರ, ಶಿಕ್ಷಕ-ವಿದ್ಯಾರ್ಥಿಗಳ ಪ್ರಮಾಣ ವಾಚನಾಲಯಗಳ ಸೌಲಭ್ಯ, ಲಭ್ಯವಿರುವ ಧನಸಹಾಯ ಮುಂತಾದವುಗಳನ್ನು ಅಳತೆಗೋಲು ಮಾಡಿಕೊಂಡು ಹೆಚ್ಚಿನ ಜಿಲ್ಲೆಗಳಲ್ಲಿ ಹೆಸರಿಸಬಹುದಾದಂತಹ ಶಿಕ್ಷಣ ಸಂಸ್ಥೆಗಳು ಇಲ್ಲವೆಂದು ವರದಿ ಮಾಡಿದರು. ಆದರೆ ಬಳ್ಳಾರಿ ಜಿಲ್ಲೆಯ ಕಲೆಕ್ಟರ್ ಏ.ಡಿ.ಕ್ಯಾಂಪಬೆಲ್ ಮಾತ್ರ ಅಪಾರ ಪರಿಶ್ರಮದಿಂದ ದೇಶೀಯ

ಶಿಕ್ಷಣ ಪದ್ಧತಿಯನ್ನು ಸಮಗ್ರವಾಗಿ ಅಭ್ಯಸಿಸಿ, ಸ್ಥಳೀಯರು ಬುದ್ಧಿವಂತರೂ, ಕುಶಾಗ್ರಮತಿಗಳೂ ಆಗಿದ್ದು ಅವರಿಗೆ ಶಿಕ್ಷಣ ಸೌಕರ್ಯಗಳನ್ನು ಕೊಡ ಮಾಡಿದರೆ ಅದರ ಸಂಪೂರ್ಣ ಲಾಭ ಪಡೆಯುವಂತಿದ್ದರೆ ಎಂದು ನೈಜ ಸ್ಥಿತಿಯನ್ನು ೧೮೨೨ರಲ್ಲಿ ವರದಿ ಮಾಡಿದರು.

ಕ್ಯಾಂಪ್‌ಬೆಲ್ ಅವರು ಬೋಧನೆ ಮತ್ತು ಕಲಿಕೆಯ ಸ್ವರೂಪವನ್ನು ತುಂಬಾ ಮನೋಜ್ಞವಾಗಿ ವರದಿಯಲ್ಲಿ ವ್ಯಕ್ತಪಡಿಸಿದ್ದಾರೆ. ಸಾಮಾನ್ಯವಾಗಿ ಐದು ವರ್ಷ ದಾಟಿದ ಮೇಲೆ, ಹಿಂದೂ ಬಾಲಕರ ಶಿಕ್ಷಣ ಪ್ರಾರಂಭವಾಗುತ್ತದೆ. ಹುಡುಗನನ್ನು ಕಳಿಸುವ ಶಾಲೆಯ ಶಿಕ್ಷಕನಿಗೆ ಮತ್ತು ಅವನ ವಿದ್ಯಾಥಿಗಳಿಗೆ, ಆ ಹುಡುಗನ ಕುಟುಂಬದವರ ಮನೆಯಲ್ಲಿ ಔತಣ ನೀಡಲಾಗುತ್ತದೆ. ಎಲ್ಲರೂ ಗಣೇಶನ ವಿಗ್ರಹದ ಸುತ್ತಲೂ ಕೂತಿರುತ್ತಾರೆ. ಕಲಿಯಲು ಉಪಕ್ರಮಿಸುವ ಹುಡುಗನನ್ನು ಮೂರ್ತಿಯ ಮುಂದೆ ಮುಖ ಮಾಡಿ ಕೂಡಿಸಿರುತ್ತಾರೆ. ಅವನ ಸಮೀಪ ಕುಳಿತು ಶಾಲಾ ಶಿಕ್ಷಕನು ಧೂಪ ಸುಟ್ಟು, ನೈವೇದ್ಯ ಅರ್ಪಿಸಿ, ಶ್ರೀ ಗಣೇಶನು ಜ್ಞಾನವನ್ನು ದಯಪಾಲಿಸುವ ಒಂದು ಪ್ರಾರ್ಥನೆಯನ್ನು ಬಾಲಕನಿಂದ ಹೇಳಿಸುತ್ತಾನೆ. ಆಮೇಲೆ ಅವನು ಬಾಲಕನಿಂದ ಆ ದೇವತೆಯ ಸಂಕೇತನಾಮವನ್ನು ಅಕ್ಕಿಯಲ್ಲಿ ಬೆರಳಿನಲ್ಲಿ ಬರೆಸುತ್ತಾನೆ. ಬಾಲಕನ ಪಾಲಕರು ತಮ್ಮ ಶಕ್ತ್ಯಾನುಸಾರ ಶಿಕ್ಷಕನಿಗೆ ಕಾಣಿಕೆ ಸಲ್ಲಿಸಿ ಕಳಿಸುತ್ತಾರೆ. ಮರುದಿನ ಮುಂಜಾನೆ ಬಾಲಕನು ತನ್ನ ವಿದ್ಯಾಭ್ಯಾಸದ ಮಹತ್ಕಾರ್ಯವನ್ನು ಆರಂಭಿಸುತ್ತಾನೆ. ಕೆಲವು ಬಾಲಕರು ಶಾಲೆಯಲ್ಲಿ ಕೇವಲ ಐದು ವರ್ಷ ಕಲಿಯುತ್ತಾರೆ. ಬಡತನ ಇಲ್ಲವೆ ಬೇರೆ ಕಾರಣಗಳಿಂದ ಪಾಲಕರು ತಮ್ಮ ಹುಡುಗರ ಶಿಕ್ಷಣ ನಿಲ್ಲಿಸಬೇಕಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಮಕ್ಕಳಿಗೆ ಬರೀ ಕಲಿಕೆಯ ಸೋಂಕು ಮಾತ್ರ ತಟ್ಟುತ್ತದೆ. ಕೆಲವರು ತಮ್ಮ ಮಕ್ಕಳ ಮನಸ್ಸನ್ನು ಸಂಸ್ಕರಣಗೊಳಿಸುವುದರಲ್ಲಿ ತುಂಬ ಅಸ್ಥೆ ವಹಿಸುವುದರಿಂದ ಸಂಬಂಧಪಟ್ಟ ವಿದ್ಯಾರ್ಥಿಗಳು ಹದಿನಾಲ್ಕು, ಹದಿನೈದು ವರ್ಷಗಳವರೆಗೂ ಶಾಲೆಗಳಲ್ಲಿ ತಮ್ಮ ಶಿಕ್ಷಣ ಮುನ್ನಡೆಸಿದ ಉದಾಹರಣೆಗಳು ಅಪರೂಪವಾಗಿಲ್ಲ ಎಂದು ಹೇಳಿದ್ದಾರೆ.[೧೧]

ಮಾತನಾಡುವ ಭಾಷೆಗೂ ಮತ್ತು ಲಿಪಿಯ ಭಾಷೆಗೂ ವ್ಯತ್ಯಾಸವಿರುವುದನ್ನು ಗುರುತಿಸಿರುವ ಅವರು, ಬಳ್ಳಾರಿ ಜಿಲ್ಲೆಯಲ್ಲಿ ಬಹುಸಂಖ್ಯೆಯಲ್ಲಿರುವ ಕನ್ನಡ ಮತ್ತು ತೆಲುಗು ಶಾಲೆಗಳಲ್ಲಿದ್ದ ಪುಸ್ತಕಗಳು ಧಾರ್ಮಿಕವಾಗಿರಲಿ, ಹಾಸ್ಯ ಪ್ರಧಾನವಾಗರಿಲಿ, ಇಲ್ಲವೆ ಭಾಷಾ ವಿಜ್ಞಾನದ ಪುಸ್ತಕ ಆಗಿರಲಿ ಎಲ್ಲವೂ ಪದ್ಯಗಳಲ್ಲಿ ರಚಿತವಾಗಿವೆ. ಸಂಭಾಷಣೆ, ವ್ಯವಹಾರಗಳಲ್ಲಿ ಉಪಯೋಗಿಸುವ ನುಡಿಗಿಂತ ಅವುಗಳಲ್ಲಿದ್ದ ಭಾಷೆ

ಭಿನ್ನವಾಗಿದೆ. ಎರಡೂ (ಗ್ರಾಂಥಿಕ ಮತ್ತು ವ್ಯಾವಹಾರಿಕ) ಭಾಷೆಗಳ ವರ್ಣಮಾಲೆ ಒಂದೇ, ಯಾರಾದರೂ ಎರಡನ್ನೂ ಓದಬಹುದು. ಆದರೆ ಒಂದನ್ನು ಅರಿತವನು ಮತ್ತೊಂದನ್ನು ಅರಿಯಲಾರ. ಆದ್ದರಿಂದ ಇಲ್ಲಿಯ ಜನರು ತಮಗೆ ತಿಳಿಯದಿದ್ದ ಭಾಷೆಯಲ್ಲಿ ಬರೆದ ಪುಸ್ತಕಗಳನ್ನು ಕಲಿಯಬೇಕಾಗುತ್ತದೆ. ಆದರೂ ಸಾಮಾನ್ಯ ಲಿಪಿ ಇದ್ದದ್ದರಿಂದ, ಪತ್ರಗಳನ್ನು ಓದಲು ಮತ್ತು ವ್ಯವಹಾರದಲ್ಲಿ ಉಪಯೋಗಿಸಲು ಶಕ್ಯವಾಗುತ್ತದೆ.

ಪಠ್ಯಪುಸ್ತಕಗಳಲ್ಲಿದ್ದ ಗದ್ಯ-ಪದ್ಯಗಳ ಭಾಷೆ, ಮಾತನಾಡುವ ಭಾಷೆಗಿಂತ ಭಿನ್ನವಾದರೂ ಅದನ್ನು ಓದಲು ಕಲಿಯುತ್ತಾರೆ. ಓದಿದರೂ ಅದನ್ನು ತಿಳಿದುಕೊಳ್ಳುವುದಕ್ಕಿಂತ ಸ್ವರೋಚ್ಚಾರದ ಸಲುವಾಗಿ ಶ್ರಮಿಸುತ್ತಾರೆ. ವಾಸ್ತವಿಕವಾಗಿ ಕೆಲವೇ ಶಿಕ್ಷಕರು ಗ್ರಂಥಗಳ ಅರ್ಥ ಹೇಳಬಲ್ಲರು. ಅವರಿಗಿಂತ ಕಡಿಮೆ ಸಂಖ್ಯೆಯಲ್ಲಿದ್ದ ವಿದ್ಯಾರ್ಥಿಗಳು ತಿಳಿದುಕೊಳ್ಳಬಲ್ಲರು. ಆದರೆ ಎಲ್ಲರೂ ನೆನಪಿನಿಂದ ಬಾಯಿಪಾಠ ಒಪ್ಪಿಸಬಲ್ಲರು. ಪ್ರತಿ ಒಬ್ಬ ವಿದ್ಯಾರ್ಥಿಗೆ ಬಹಳಷ್ಟು ಕವಿತೆಗಳನ್ನು ಪದಾನುಪದವಾಗಿ ಬಾಯಿಪಾಠ ಹೇಳಲು ಬರುತ್ತದೆ. ಆದರೆ ಕೆಲವೇ ಶಬ್ದಗಳನ್ನು ಉಚ್ಚರಿಸಲು ಕಲಿಸಿದ ಗಿಳಿಗಿಂತ ಹೆಚ್ಚಾಗಿ ಇವರಿಗೆ ಅವುಗಳ ಅರ್ಥ ಅರಿವಾಗುವುದಿಲ್ಲ. ಹೀಗಾಗಿ ಬಹಳ ಕಾಲ ಕಷ್ಟಪಟ್ಟು ಅಭ್ಯಾಸದಲ್ಲಿ ನಿರತರಾಗಿ ಕಲಿತದ್ದು ನಿರರ್ಥಕವಾಗುತ್ತದೆ. ಕೇವಲ ಸ್ಮರಣಶಕ್ತಿ ಬೆಳಸಿ, ಅವರು ನಿತ್ಯೋಪಯೋಗಿ ವ್ಯವಹಾರಕ್ಕೆ ಬೇಕಾಗುವ ಓದುಬರಹ ಮಾಡಬಲ್ಲರು. ತಮ್ಮ ಜ್ಞಾನ ಸಂಚಯಕ್ಕೆ ಎಳ್ಳಷ್ಟೂ ಕೂಡಿಸಿಕೊಳ್ಳಲಾರರು. ಅವರ ಮನಸ್ಸಿನ ಮೇಲೆ ಶಿಕ್ಷಣದ ನೈತಿಕ ಪ್ರಭಾವ ಅಚ್ಚೊತ್ತುವುದಿಲ್ಲ. ತಮ್ಮ ತಾರುಣ್ಯವನ್ನು ಅವರು ಕಾಗುಣಿತಗಳನ್ನು ಉಚ್ಚರಿಸುವುದರಲ್ಲಿ ಹಾಳುಗೆಡವಿದ್ದಾರೆ, ಶಬ್ದಾರ್ಥ ಕಲಿತಿಲ್ಲ ಎಂದಿದ್ದಾರೆ. ಜೀವನಯಾತ್ರೆ ಪ್ರಾರಂಭಿಸಿದಾಗ ನೂರಾರು ಪುಸ್ತಕಗಳನ್ನು ಕಾಣುತ್ತಾರೆ. ಆದರೆ ಅವುಗಳ ಬಗ್ಗೆ ಕಿಂಚಿತ್ತಾದರೂ ಊಹಾಪೋಹ ಮಾಡಲಾರರು. ಒಂದು ನಾಮಪದದ ವಿಭಕ್ತಿರೂಪವನ್ನು, ಕ್ರಿಯಪದ ಧಾತು ರೂಪವನ್ನು ನುಡಿಯಲು ಶಕ್ತರಲ್ಲ. ಕ್ಲಿಷ್ಟ ಜಾಮಿತಿ ಸೂತ್ರ ಸಿದ್ಧಾಂತಕ್ಕೆ ಅವರ ಧೀಶಕ್ತಿ ತಲುಪಿಲ್ಲ. ಆದ್ದರಿಂದ ಇಲ್ಲಿಯ ವಿದ್ಯಾರ್ಥಿಗಳಿಗೆ ಇಂಥ ಅಪೂರ್ಣ ಶಿಕ್ಷಣದಿಂದ ತಮ್ಮ ಗೆಳೆಯರಿಗೆ ಒಂದು ಸಾಧಾರಣ ಪತ್ರ ಬರೆಯುವಾಗ, ಅಕ್ಷರ ಸಂಯೋಜನೆಯಲ್ಲಿ ತಪ್ಪುಗಳು, ವ್ಯಾಕರಣ ನಿಯಮಗಳಲ್ಲಿ ಪ್ರಮಾದಗಳು ಪ್ರತಿಯೊಂದು ಸಾಲಿನಲ್ಲಿ ಕಂಡು ಬರುವುವು ಎಂದು ಹೇಳಿದ್ದಾನೆ.

ದೇಶಿ ಶಾಲೆಗಳಲ್ಲಿನ ಶಿಕ್ಷಣ ಪದ್ಧತಿಯನ್ನು ವಿವರಿಸುತ್ತಾ ಕ್ಯಾಂಪ್‌ಬೆಲ್ ಹೀಗೆ ಹೇಳುತ್ತಾರೆ "ದೇಶಿ ಶಾಲೆಗಳಲ್ಲಿ ಬರೆಯಲಿಕ್ಕೆ ಕಲಿಸುವ ಪದ್ಧತಿ ಮತ್ತು ಮುಂದುವರಿದ

ವಿದ್ಯಾರ್ಥಿಗಳು ಹಿಂದುಳಿದವರಿಗೆ ಕಲಿಸುವ ಬಗೆ ಮತ್ತು ಅದೇ ಹೊತ್ತಿಗೆ ತಾವು ಆ ವಿಷಯದಲ್ಲಿ ನೈಪುಣ್ಯ ಗಳಿಸುವಿಕೆ, ಈ ಎಲ್ಲ ಖಂಡಿತವಾಗಿ ಮಿತವ್ಯಯ ಸಾಧಿಸುತ್ತವೆ. ಈ ಪದ್ಧತಿ ಮೆಚ್ಚತಕ್ಕದ್ದಾದ್ದರಿಂದ ಇಂಗ್ಲೆಂಡಿನಲ್ಲಿ ಅನುಕರಿಸಲು ಅರ್ಹತೆ ಪಡೆಯಿತು. ದೇಶಿ ಶಿಕ್ಷಣದಲ್ಲಿರುವ ಮುಖ್ಯ ದೋಷಗಳೆಂದರೆ ಒಳ್ಳೆಯ ಪುಸ್ತಕಗಳ ಅಭಾವ, ಕಲಿಯುವಿಕೆಯ ಕೆಳ ಮಟ್ಟ ಮತ್ತು ಸಮರ್ಥ ಶಿಕ್ಷಕರ ಕೊರತೆ"[೧೨] ಎಂದು ಹೇಳಿದ್ದಾರೆ.

ಲಾರ್ಡ್ ವಿಲಿಯಂ ಬೆಂಟಿಂಕ್‌ನು ಭಾರತದ ಗರ್ವನರ್ ಜನರಲ್‌ನಾಗಿ ಕ್ರಿ.ಶ. ೧೮೨೮ರಲ್ಲಿ ಅಧಿಕಾರ ವಹಿಸಿಕೊಂಡಾಗ ಭಾರತೀಯರಿಗೆ ಪಾಶ್ಚಾತ್ಯ ಶಿಕ್ಷಣ ವ್ಯವಸ್ಥೆಯ ನಾಂದಿಯಾಯಿತು. ಲಾರ್ಡ್ ಮೆಕಾಲೆ ಮತ್ತು ಭಾರತ ಶ್ರೇಷ್ಠ ಧೀಮಂತರಾಗಿದ್ದ ರಾಜಾರಾಮ್ ಮೋಹನರಾಯ್ ಅಂಥವರು ಈ ಯತ್ನಕ್ಕೆ ಬೆಂಬಲ ಕೊಟ್ಟಿದ್ದರಿಂದ ರಾಜ್ಯಾಡಳಿತವನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಲು ಸುಶಿಕ್ಷಿತರ ನೆರವು ಸಿಗುವಂತೆ ಶಿಕ್ಷಣವನ್ನು ರೂಪಿಸಿದ್ದು ಆಯಿತು. ಈ ಶಿಕ್ಷಣದ ಅಡಿಯಲ್ಲಿ ಪಳಗಿದ ಗೋಪಾಲಕೃಷ್ಣ ಗೋಖಲೆ, ಬಾಲಗಂಗಾಧರ್ ತಿಲಕ್, ಮೋತಿಲಾಲ್ ನೆಹರು, ಮಹಾತ್ಮಾ ಗಾಂಧಿ, ಸುಭಾಷ್‌ಚಂದ್ರ ಬೋಸ್, ಜವಾಹರಲಾಲ್ ನೆಹರು, ಡಾ.ಬಿ.ಆರ್.ಅಂಬೇಡ್ಕರ್ ಮೊದಲಾದವರು ಭಾರತೀಯರ ಹಕ್ಕು ಬಾಧ್ಯತೆ, ದೇಶಾಭಿಮಾನವನ್ನು ಅರಳಿಸುವಲ್ಲಿ ಯಶಸ್ವಿಯಾದರು. ಇದರಿಂದ ಜನರಲ್ಲಿ ಆತ್ಮವಿಶ್ವಾಸ ಮೂಡುವಂತೆ ಮಾಡಿದರು.

**ಸ್ವಾತಂತ್ರ್ಯ ಪೂರ್ವದಲ್ಲಿ ಶಿಕ್ಷಣ ಆಯೋಗಗಳು**

ಸ್ವಾತಂತ್ರ್ಯ ಪೂರ್ವದಲ್ಲಿ ರಚನೆಯಾದ ಆಯೋಗಗಳು ಬೋಧನೆ ಮತ್ತು ಕಲಿಕೆಯ ಕುರಿತು ಅನೇಕ ವರದಿಗಳು, ಆದೇಶಗಳನ್ನು ಜಾರಿ ಮಾಡಿವೆ. ಅವುಗಳಲ್ಲಿ ೧೮೩೫ರ ಲಾರ್ಡ್ ಮೆಕಾಲೆ ವರದಿಯೂ ಒಂದು. ಈ ವರದಿಯಲ್ಲಿ ಮೆಕಾಲೆ ಅವರು ಶಿಕ್ಷಣ ಪದ್ಧತಿಯೊಂದಕ್ಕೆ ಶಾಶ್ವತವಾದ ಬುನಾದಿಯನ್ನು ಹಾಕಲು ಸಹಾಯವಾಯಿತು. ಆದರೆ ಭಾಷಾ ಬೋಧನೆಯ ಬಗ್ಗೆ ಹೇಳುವಾಗ "ದೇಸೀ ಭಾಷೆಗಳನ್ನು ಕಡೆಗಣಿಸಿ 'ಇಂಗ್ಲೀಷ್' ಬೋಧನಾ ಮಾಧ್ಯಮವಾಗಿರಬೇಕೆಂದು" ಸಮರ್ಥಿಸಿಕೊಂಡಿದ್ದಾರೆ. "ಮೆಕಾಲೆಯಿಂದ ಅರ್ಧಮುಖಗೊಳಿಸುವಿಕೆ ಸೋಸುವಿಕೆ ಸಿದ್ಧಾಂತ" ಪ್ರತಿಷ್ಠಾಪಿಸಲ್ಪಟ್ಟಿತ್ತು. ಅವರ ಪ್ರಕಾರ ಭಾರತೀಯರು ರಕ್ತ ಬಣ್ಣದಲ್ಲಿ ಇರಬೇಕೆ ವಿನಃ ರುಚಿಗಳು, ಅಭಿಪ್ರಾಯಗಳು, ನೈತಿಕತೆ ಮತ್ತು ಬೌದ್ಧಿಕತೆಯು ಇಂಗ್ಲೀಷ್ ಆಗಬೇಕು. ಅಂದಾಗ ಮಾತ್ರ ಅಧೋಮುಖ ಸೋಸುವಿಕೆ ಸಿದ್ಧಾಂತ ಯಶಸ್ವಿಯಾಗಬಲ್ಲದು."[೧೩] ಎಂದು ಸ್ಪಷ್ಟಪಡಿಸಿತು.

**ವುಡ್ಸ್ ವರದಿ**

೧೮೫೪ರಲ್ಲಿ ರಚನೆಯಾದ ವುಡ್ಸ್ ವರದಿಯು ಅನೇಕ ಮಹತ್ವದ ಶಿಫಾರಸ್ಸುಗಳನ್ನು ಒಳಗೊಂಡಿದೆ. ಇದು ಭಾರತೀಯರ ಪ್ರಚಲಿತ ಶಿಕ್ಷಣದ ಸಮಸ್ಯೆಗೆ ಪರಿಹಾರ ನೀಡಿದೆ. ಇದು ಭಾರತೀಯ ಶಿಕ್ಷಣದ ಭದ್ರ ಬುನಾದಿ ಅಥವಾ ಮೈಲುಗಲ್ಲಾಗಿದ್ದರೂ ಭಾಷಾ ಬೋಧನೆಯ ವಿಷಯದಲ್ಲಿ ಈ ವಿಚಾರ ಹೇಳಿದೆ. “ಅಂದು ಭಾರತೀಯ ಭಾಷೆ ಅಭಿವೃದ್ಧಿಯಾಗಿರಲಿಲ್ಲ. ಅದರ ಕೊರತೆಯನ್ನು ಗಮನದಲ್ಲಿಟ್ಟುಕೊಂಡು ಆಯೋಗ ಇಂಗ್ಲೀಷ್ ಭಾಷೆಯನ್ನು ಶಿಕ್ಷಣದ ಮಾಧ್ಯಮವನ್ನಾಗಿ ಉಪಯೋಗಿಸುವುದು ಗಂಡಾಂತರಕಾರಿಯಾಗುವುದು. ಇದಕ್ಕನುಸಾರವಾಗಿ ಸ್ಥಳೀಯ ದೇಶೀಯ ಭಾಷೆಗಳನ್ನು ಕೂಡ ಶಿಕ್ಷಣದ ಮಾಧ್ಯಮದಂತೆ ಉಪಯೋಗಿಸುವುದು ಒಳ್ಳೆಯದು ಎಂದು ಹೇಳಿತು”.[೧೪] ಹೀಗಾಗಿ ಯುರೋಪಿಯನ್ನರ ಜ್ಞಾನವನ್ನು ಭಾರತೀಯರಲ್ಲಿ ಒಡಮೂಡಲು ಇಂಗ್ಲೀಷ್ ಭಾಷೆ ಹಾಗೂ ದೇಶೀಯ ಭಾಷೆಗಳೆರಡು ಬೋಧನಾ ಮಾಧ್ಯಮಗಳೆಂದು ಭಾವಿಸಲಾಯಿತು.

**ಹಂಟರ್ ಆಯೋಗ**

೧೮೮೨ರಲ್ಲಿ ರಚನೆಯಾದ ಭಾರತೀಯ ಶಿಕ್ಷಣ ಆಯೋಗವು ಪ್ರಾಥಮಿಕ ಶಿಕ್ಷಣದತ್ತ ಗಮನ ಹರಿಸಿತು. ನಿಜವಾಗಿಯೂ ಪ್ರಾಥಮಿಕ ಶಿಕ್ಷಣವೇ ಅದರ ಪ್ರಮುಖವಾದ ತನಿಖಾ ಕ್ಷೇತ್ರವಾಗಿತ್ತು. ಪ್ರಸಕ್ತ ದಿನಗಳಲ್ಲಿ ಪ್ರಾಥಮಿಕ ಶಿಕ್ಷಣದ ಮಹತ್ವವನ್ನು ಅರಿತು ಆಯೋಗವು ಪ್ರಶಿಕ್ಷಣದ ಯೋಜನೆ, ಸಂಘಟನೆ, ಪಠ್ಯಕ್ರಮ, ಶಿಕ್ಷಕರ ತರಬೇತಿ, ಅನುದಾನ, ಸಂಹಿತೆ ಮುಂತಾದ ವಿಷಯಗಳು ಪ್ರಾಥಮಿಕ ಶಿಕ್ಷಣವನ್ನು ಯಾವ ಮಾಧ್ಯಮದಲ್ಲಿ ಬೋಧನೆ ಮಾಡಬೇಕು ಎಂಬುದರ ಬಗ್ಗೆಯೂ ಹೇಳಿದೆ. ಇದು ಪ್ರಾಥಮಿಕ ಶಿಕ್ಷಣದ ಬೋಧನೆಯು ಮಾತೃ ಭಾಷೆಯಲ್ಲಿ ನಡೆಯಬೇಕು ಎಂದು ಹೇಳಿದೆ. ೧೯೦೪ ಭಾರತ ಸರ್ಕಾರದ ಗೊತ್ತುವಳಿ, ೧೯೧೭ರಲ್ಲಿ ಕಲ್ಕತ್ತಾ ವಿಶ್ವವಿದ್ಯಾಲಯ ಆಯೋಗ, ೧೯೨೧-೨೭ರಲ್ಲಿ ವೈಸ್‌ರಾಯ್ ಜೇಮ್ಸ್ ಫರ್ಡ್‌ನು ಜಾರಿಗೆ ತಂದ ದ್ವಿದಳ ಪದ್ಧತಿಯ ಅಡಿಯಲ್ಲಿ “ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದಲ್ಲಿ ಮಾತೃಭಾಷೆ ಬೋಧನಾ ಮಾಧ್ಯಮವಾಯಿತು”[೧೫] ಎಂದು ಹೇಳಿದೆ.

ಸ್ವಾತಂತ್ರ್ಯ ಪೂರ್ವದಲ್ಲಿ ಶಿಕ್ಷಣ ಆಯೋಗಗಳ ಪ್ರಮುಖ ಉದ್ದೇಶ ದೇಶೀಯ ಭಾಷೆಗಳನ್ನು ಕಡೆಗಣಿಸಿ ಇಂಗ್ಲೀಷ್ ಭಾಷೆಯನ್ನು ಬೋಧನಾ ಮಾಧ್ಯಮವಾಗಿಸಿ ಭಾರತೀಯರಲ್ಲಿ ಇಂಗ್ಲಿಷ್ ಭಾಷೆಯ ಜ್ಞಾನವನ್ನು ನೀಡುವುದಾಗಿತ್ತು. ತಮ್ಮ ಭಾಷೆಯ ಮೂಲಕವಾಗಿ ಭಾರತೀಯರ ಮನಸ್ಸಿನಲ್ಲಿ ಪಾದಾರ್ಪಣೆ ಮಾಡಿದ ಬ್ರಿಟಿಷರು

ಸಾಂಸ್ಕೃತಿಕವಾಗಿ ಜನರ ಮನದಲ್ಲಿ ನೆಲೆಸಿದರು. ಅದಕ್ಕಾಗಿ ಶಿಕ್ಷಣವನ್ನು ತಮ್ಮ ಇಚ್ಛೆಯಂತೆ ಪರಿವರ್ತಿಸಿದರು. ಇಂಗ್ಲಿಷ್ ಸಾಹಿತ್ಯ, ಸಂಸ್ಕೃತಿಗಳನ್ನು ಭಾರತೀಯರಲ್ಲಿ ಬಿಂಬಿಸುವ ಮಹದಾಸೆ ಅವರದಾಗಿತ್ತು. ಹೀಗೆ ಆಂಗ್ಲ ಶಿಕ್ಷಣ ಪಡೆದ ಭಾರತೀಯರು ಪ್ರತಿಯೊಂದರಲ್ಲಿಯೂ ಯುರೋಪನ್ನು ಅನುಸರಿಸಿದರು. ಇಂಗ್ಲಿಷ್ ಭಾಷೆಯ ಪರವಾಗಿದ್ದ ಮೆಕಾಲೆ ಬೋಧನಾ ಮಾಧ್ಯಮವನ್ನಾಗಿಸಿದರು. ಸ್ಥಳೀಯ ಭಾಷೆಯನ್ನು ನಿರಾಕರಿಸಿ ಆಂಗ್ಲ ಭಾಷೆಯನ್ನು ಬೋಧನಾ ಮಾಧ್ಯಮವಾಗಿಸಿದರು. ಹೀಗೆಯೇ ಮುಂದೆ ಬಂದಂತಹ ಎಲ್ಲಾ ಆಯೋಗಗಳು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದಲ್ಲಿ ಮಾತೃಭಾಷೆಯನ್ನೇ ಮಾಧ್ಯಮವಾಗಿಸಿದರೆ ಇಂಗ್ಲಿಷನ್ನು ದ್ವಿತೀಯ ಭಾಷೆಯನ್ನಾಗಿ ನಿಗದಿ ಪಡಿಸಲಾಯಿತು.

## ೬.೨ ಸ್ವಾತಂತ್ರ್ಯೋತ್ತರ ಶಿಕ್ಷಣ ಚರಿತ್ರೆ

ಸ್ವತಂತ್ರ ಭಾರತದ ಸಂದರ್ಭದಲ್ಲಿ ಬೋಧನಾ ಮತ್ತು ಕಲಿಕೆಯ ಮಾಧ್ಯಮಗಳನ್ನು ಪರಿಷ್ಕರಿಸಿ ೦೪, ನವೆಂಬರ್ ೧೯೪೮ರಲ್ಲಿ ಡಾ.ಸರ್ವಪಲ್ಲಿ ರಾಧಾಕೃಷ್ಣನ್ ಅವರು ಸಮಿತಿ ರಚಿಸಿದರು. ಅಲ್ಲದೆ ಬೋಧನಾ ಮಾಧ್ಯಮ ಕುರಿತು ಮೂರು ಭಾಷೆಯಲ್ಲಿ ಪ್ರಭುತ್ವವಾಗಿರಬೇಕು. ಕನ್ನಡ ಪ್ರಾದೇಶಿಕ ಭಾಷೆಯನ್ನಾಗಿ, ರಾಷ್ಟ್ರೀಯ ಭಾಷೆಯಾಗಿ ಹಿಂದಿ, ವ್ಯವಹಾರಿಕ ಭಾಷೆಯಾಗಿ ಇಂಗ್ಲಿಷ್ ಕಲಿಯಬೇಕು ಎಂದಿದ್ದಾರೆ.[೧೬] ಈ ಹಿನ್ನೆಲೆಯಲ್ಲಿ ಇಂಗ್ಲಿಷ್ ಮಾಧ್ಯಮದ ಶಾಲೆಗಳಲ್ಲಿ ವಿದ್ಯಾರ್ಥಿಗಳು ಇಂಗ್ಲಿಷನ್ನು ಪ್ರಥಮ ಭಾಷೆಯಾಗಿ, ಕನ್ನಡವನ್ನು ದ್ವಿತೀಯ ಭಾಷೆಯಾಗಿ ಹಾಗೂ ಹಿಂದಿಯನ್ನು ತೃತೀಯ ಭಾಷೆಯಾಗಿ ಕಲಿಯುತ್ತಿದ್ದಾರೆ. ಹೀಗೆ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ವಿದ್ಯಾರ್ಥಿಗಳ ಬೋಧನೆ ಮತ್ತು ಕಲಿಕೆಯ ಇತಿಹಾಸವನ್ನು ಅವಲೋಕಿಸಿದಾಗ ಸಾಕಷ್ಟು ಏಳುಬೀಳುಗಳು ಗೋಚರಿಸುತ್ತದೆ.

### ಮಾಧ್ಯಮಿಕ ಶಿಕ್ಷಣ ಆಯೋಗ

ರಾಧಾಕೃಷ್ಣನ್ ಆಯೋಗದ ನಂತರ ೧೯೫೨ ಸೆಪ್ಟಂಬರ್ ೨೩ರಂದು ಮಾಧ್ಯಮಿಕ ಶಿಕ್ಷಣ ಆಯೋಗ ಶಿಕ್ಷಣ ವ್ಯವಸ್ಥೆಯನ್ನು ಪರಿಶೀಲಿಸಲು ಮತ್ತು ಅದರ ಪುನರ್ ವ್ಯವಸ್ಥೆ ಹಾಗೂ ಸುಧಾರಣೆಗೆ ಕ್ರಮಗಳನ್ನು ಸಲಹೆ ನೀಡಲು ಸಿಎಬಿಎ ಶಿಫಾರಸ್ಸಿನ ಅನ್ವಯ ಭಾರತ ಸರ್ಕಾರ ಆಗಿನ ಮದ್ರಾಸ್ ವಿಶ್ವವಿದ್ಯಾಲಯದ ಉಪಕುಲಪತಿಗಳಾದ ಖ್ಯಾತ ಶಿಕ್ಷಣ ತಜ್ಞರಾದ ಡಾ.ಎ.ಲಕ್ಷ್ಮಣಸ್ವಾಮಿ ಮೊದಲಿಯಾರ್ ಅವರನ್ನು ಆಯೋಗದ ಅಧ್ಯಕ್ಷರನ್ನಾಗಿ ನೇಮಿಸಲಾಯಿತು. ಈ ಆಯೋಗವು ಮಾಧ್ಯಮಿಕ ಶಿಕ್ಷಣದ ಹಲವು

ದೋಷಗಳನ್ನು ಬೋಧನಾ ಮಾಧ್ಯಮದ ಬಗ್ಗೆ ಕುರಿತು ತನ್ನದೇ ಆದ ಶಿಫಾರಸ್ಸು ನೀಡಿದೆ. ಬೋಧನಾ ಮಾಧ್ಯಮ ಕುರಿತು ಕಿರಿಯ ಮಾಧ್ಯಮಿಕ ಹಂತದಲ್ಲಿ ಕನಿಷ್ಠ ಎರಡು ಭಾಷೆಗಳನ್ನು ಕಲಿಸಬೇಕು ಎಂದು ಹೇಳಿದೆ.[೧೭]

**ಭಾರತೀಯ ಶಿಕ್ಷಣ ಆಯೋಗ**

ಡಾ.ಡಿ.ಎಸ್. ಕೊಠಾರಿ ಆಯೋಗ ಎಂದೇ ಖ್ಯಾತವಾದ ಭಾರತೀಯ ಶಿಕ್ಷಣ ಆಯೋಗ ಶಿಕ್ಷಣದ ಸಮಗ್ರ ಬದಲಾವಣೆಗೆ ೧೪-೦೭-೧೯೬೪ರಲ್ಲಿ ಕೊಠಾರಿ ಅವರ ಅಧ್ಯಕ್ಷತೆಯಲ್ಲಿ "ರಾಷ್ಟ್ರೀಯ ಶಿಕ್ಷಣ ಆಯೋಗ"ವನ್ನು ನೇಮಿಸಿತು. ಇದು ಶಿಕ್ಷಣದ ಪುನರ್ ಸಂಘಟನೆ, ರಾಷ್ಟ್ರೀಯ ಗುರಿಗಳು, ಸಾಧನೆ ಶಿಕ್ಷಣದ ಗುಣಮಟ್ಟ ಸುಧಾರಣೆ, ಶಿಕ್ಷಕರ ತರಬೇತಿ, ಶಿಕ್ಷಣದ ವಿಸ್ತರಣೆ, ಪೂರ್ವ ಪ್ರಾಥಮಿಕ ಶಿಕ್ಷಣ, ಪ್ರಾಥಮಿಕ, ಮಾಧ್ಯಮಿಕ ಹಾಗೂ ಎಲ್ಲ ಶಿಕ್ಷಣ ಕುರಿತು ಶಿಫಾರಸ್ಸುಗಳನ್ನು ಮಾಡಿತು. ಪಠ್ಯಕ್ರಮದ ರಚನೆ, ವಿನ್ಯಾಸ, ಬೋಧನಾ ಪದ್ಧತಿ, ಮಾಧ್ಯಮ, ಮೌಲ್ಯಮಾಪನ, ಭಾಷಾ ನೀತಿ ಕುರಿತು ಅಧ್ಯಯನ ಮಾಡಿ ಶಿಫಾರಸ್ಸುಗಳನ್ನು ಜಾರಿಗೆ ತಂದಿತು.

**ರಾಷ್ಟ್ರೀಯ ಶಿಕ್ಷಣ ನೀತಿ**

ಭಾರತದ ಸರ್ಕಾರವು ರಾಷ್ಟ್ರೀಯ ಹೊಸ ಶಿಕ್ಷಣ ನೀತಿಯನ್ನು ಮಾನವ ಸಂಪನ್ಮೂಲ ಅಭಿವೃದ್ಧಿ ಇಲಾಖೆಯ ಮುಖಾಂತರ ರಾಷ್ಟ್ರೀಯ ಶಿಕ್ಷಣ ಅನುದಾನ ಹಾಗೂ ಪ್ರಶಿಕ್ಷಣ ಪರಿಷತ್ತಿನ ಮೂಲಕ ರೂಪಿಸಿ ಅದನ್ನು ಮಾಜಿ ಪ್ರಧಾನ ಮಂತ್ರಿ ದಿ||ರಾಜೀವ್ ಗಾಂಧಿ ನೇತೃತ್ವದಲ್ಲಿ ಸಂಸತ್ತಿನಲ್ಲಿ ಮಂಡಿಸಿ ಒಪ್ಪಿಗೆಯನ್ನು ಪಡೆಯಿತು. ನಾಲ್ಕು ಹಂತಗಳಲ್ಲಿ ತನ್ನ ಕಾರ್ಯಾಚರಣೆಗಳನ್ನು ಮಾಡಲು ಪ್ರಾರಂಭಿಸಿತು. ಅಲ್ಲದೆ ಭಾಷಾ ಬೋಧನೆ ಕುರಿತು ಪ್ರಾದೇಶಿಕ ಭಾಷೆ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಭಾಷೆಗಳನ್ನು ಮಕ್ಕಳು ಕಲಿಯಬೇಕು ಎಂದು ಹೇಳುತ್ತದೆ. "ಈ ಯೋಜನೆಯನ್ನು ಆಗಸ್ಟ್ ೮, ೧೯೮೬ರಂದು ಸಂಸತ್ತಿಗೆ ನೀಡಲಾಯಿತು. ಲೋಕಸಭೆ ಮತ್ತು ರಾಜ್ಯಸಭೆಗಳು ಕಾರ್ಯಯೋಜನೆಯನ್ನು ಚರ್ಚಿಸಿ ೧೯೮೬ ಆಗಸ್ಟ್ ೨೨-೨೩ರಂದು ಒಪ್ಪಿಕೊಂಡವು. ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿ ಸೂಚಿಸಿದಂತೆ ಅದು ರಾಷ್ಟ್ರದಾದ್ಯಂತ ಏಕರೂಪ ಶಿಕ್ಷಣ ನೀತಿಯನ್ನು ಜಾರಿಗೆ ತರಲು ಪ್ರಯತ್ನಿಸುತ್ತದೆ.[೧೮] ನಮ್ಮ ದೇಶದಲ್ಲಿ ವಿವಿಧ ಶಿಕ್ಷಣ ಪದ್ಧತಿಗಳು ಮಾಧ್ಯಮಗಳು ಜಾರಿಯಲ್ಲಿವೆ. ಇದರಲ್ಲಿ ಸಮಾನತೆ ತರುವುದು ಈ ನೀತಿಯ ಉದ್ದೇಶವಾಗಿದೆ. ನಾವು ಪ್ರಸ್ತುತ ಶಿಕ್ಷಣದ ಬಗ್ಗೆ ತಾಳಿದ ಅಭಿಪ್ರಾಯಗಳು, ವಿಚಾರಗಳು ಮತ್ತು ಭಾವನೆಗಳನ್ನು ಮಾರ್ಪಾಡು ಮಾಡುವುದರಲ್ಲಿದೆ. ಹೀಗೆ ಭಾಷಾ ಬೋಧನೆ ಮತ್ತು ಕಲಿಕೆ ಮಾಧ್ಯಮ

ಕುರಿತಾಗಿ ಚಿಂತನೆಗಳು ವೇದಗಳ ಕಾಲದಿಂದ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರ್ಯೋತ್ತರ ಶಿಕ್ಷಣ ಪದ್ಧತಿಯನ್ನು ಗಮನಿಸಬಹುದಾಗಿದೆ.

**ಕೊನೆ ಟಿಪ್ಪಣಿಗಳು**


೧. ಚಂದ್ರಾಚಾರ್ ಎಚ್.ಎಂ., ರಾಜಶೇಖರಯ್ಯ ಕೆ.ಎನ್., ಶಿಕ್ಷಣಶಾಸ್ತ್ರ, ೨೦೦೫, ದ್ವಿತೀಯ ಪಿಯುಸಿ, ಅಶ್ವಿನಿ ಪ್ರಕಾಶನ, ರಾಣಿಬೆನ್ನೂರು, ಪು.೩೮.

೨. ಅದೇ ಪು.೩೯.

೩. ಅದೇ ಪು.೪೧.

೪. ಕೊಂಗವಾಡ, ಎನ್.ಬಿ. ಭಾಷೆ ಮತ್ತು ಕನ್ನಡ ಬೋಧನೆ, ೨೦೦೨, ವಿದ್ಯಾನಿಧಿ ಪ್ರಕಾಶನ, ಗದಗ, ಪು.೦೩-೭.

೫. ವಾಮದೇವಪ್ಪ, ಶೈಕ್ಷಣಿಕ ಮನೋವಿಜ್ಞಾನ, ಶ್ರೇಯಸ್ ಪ್ರಕಾಶನ, ೨೦೦೫, ದಾವಣಗೆರೆ, ಪು.೨೦೯-೨೧೦.

೬. ಜೋತ್ಸ್ನ ಕಾಮತ್, ಎಜುಕೇಶನ್ ಇನ್ ಇಂಡಿಯಾ ಥ್ರೊ ದಿ ಏಜಸ್, ೧೯೮೮, ಕರ್ನಾಟಕ ಸಂಘ, ಬಾಂಬೆ, ಪು.೧-೪.

೭. ಅದೇ ಪು.೦೬.

೮. ಅದೇ ಪು.೮೫.

೯. ಅದೇ ಪು.೯೭.

೧೦. ಅದೇ ಪು.೧೦೨-೧೦೩.

೧೧. ಅದೇ ಪು.೧೦೫.

೧೨. ಅದೇ ಪು.೧೦೭.

೧೩. ಅದೇ ಪು.೧೦೯.

೧೪. ಯಾದವಾಡ್.ಎಸ್., ಪ್ರಗತಿಶೀಲ ಭಾರತದಲ್ಲಿ ಶಿಕ್ಷಣ, ೨೦೦೭, ವಿದ್ಯಾನಿಧಿ ಪ್ರಕಾಶನ, ಗದಗ, ಪು.೧೩೭.

೧೫. ಅದೇ ಪು.೧೫೫.

೧೬. ಅದೇ ಪು.೧೯೬.

೧೭. ಜಯಣ್ಣ ಸಿ.ವಿ., ಶಿಕ್ಷಣದ ಪರಿಕಲ್ಪನಾತ್ಮಕ ಬುನಾದಿಗಳು, ಸ್ವಪ್ನ ಬುಕ್ ಹೌಸ್, ಬೆಂಗಳೂರು, ಪು.೧೪.

೧೮. ಅದೇ ಪು.೧೫.

## ಅಧ್ಯಾಯ : ನಾಲ್ಕು

# ಭಾಷಾ ಬೋಧನೆಯ ಸಮಸ್ಯೆಗಳು

೪.೧. ಪಠ್ಯಮೂಲ ಸಮಸ್ಯೆಗಳು

೪.೨. ಬೋಧನಾ ವಿಧಾನಗಳು

೪.೩ ಪರೀಕ್ಷೆ ಹಾಗೂ ಮೌಲ್ಯಮಾಪನ

೪.೪ ಶಿಕ್ಷಕರ ಭಾಷಿಕ ಸಮಸ್ಯೆಗಳು

೪.೫. ಶಿಕ್ಷಕರ ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳು

೪.೬. ಶಿಕ್ಷಕರ ಧೋರಣೆಗಳು

ಅಧ್ಯಾಯ : ನಾಲ್ಕು

# ಭಾಷಾ ಬೋಧನೆಯ ಸಮಸ್ಯೆಗಳು

ಶಿಕ್ಷಣ ಪ್ರಕ್ರಿಯೆಯು ಯಶಸ್ವಿಯಾಗಿ ಸಾಗಬೇಕಾದರೆ ಅದನ್ನು ಅನುಷ್ಠಾನದಲ್ಲಿ ತರಲು ಸಮರ್ಥ ಶಿಕ್ಷಕರು ಬೇಕು. ರಾಷ್ಟ್ರದ ಭವಿಷ್ಯವು ಮಕ್ಕಳ ಮೇಲೆ, ಮಕ್ಕಳ ಭವಿಷ್ಯವು ಶಿಕ್ಷಕರ ಮೇಲೆ ಅವಲಂಬಿಸಿದೆ. ಹೀಗಿರುವಾಗ ಶಿಕ್ಷಕರ ಮಹತ್ವ ಎಷ್ಟೆಂಬುದನ್ನು ಮತ್ತೊಮ್ಮೆ ಹೇಳಬೇಕಿಲ್ಲ. ಬೋಧಕ ವೃತ್ತಿ ಸಾವಿರಾರು ವಿದ್ಯಾರ್ಥಿಗಳನ್ನು ಉದ್ಧಾರ ಮಾಡುವ ಉದಾತ್ತ ವೃತ್ತಿಯಾಗಿದೆ. ಬೋಧಕರ ಪ್ರಕ್ರಿಯೆಯಲ್ಲಿ ಆಗಾಗ ಸುಧಾರಣೆಯ ಹೆಸರಿನಲ್ಲಿ ಬದಲಾವಣೆಗಳಾಗುತ್ತಿರುತ್ತವೆ. ಕಲಿಯುವ ವಿಷಯಕ್ಕೆ ಒಮ್ಮೆ ಪ್ರಾಮುಖ್ಯತೆಯಿದ್ದರೆ, ಮತ್ತೊಮ್ಮೆ ಕಲಿಯುವ ವಿದ್ಯಾರ್ಥಿಗೆ ಪ್ರಾಧಾನ್ಯತೆ ದೊರೆಯುತ್ತದೆ. ಆದರೆ ಶಿಕ್ಷಕನ ಪಾತ್ರ ಮಾತ್ರ ಯಾವಾಗಲು ಮಹತ್ವದ್ದೆನಿಸಿ ಅವನಿಗೆ ಪ್ರಾಮುಖ್ಯತೆ ದೊರೆಯುತ್ತದೆ.

ಉತ್ತಮ ಶಿಕ್ಷಕರು ತಾವು ಬೋಧಿಸುವ ವಿಷಯದಲ್ಲಿ ಪ್ರಭುತ್ವ ಹೊಂದಿ ಆಸಕ್ತಿಯಿಂದ ಅಧ್ಯಯನ ಹಾಗೂ ಅಧ್ಯಾಪನ ಮಾಡುತ್ತಾರೆ. ಜ್ಞಾನ ಅನಂತವಾದದು. ಸಂಶೋಧನೆ ಹಾಗೂ ಆವಿಷ್ಕಾರಗಳಿಂದಾಗಿ ಇಂದು ಜ್ಞಾನದ ಕ್ಷಿತಿಜ ವಿಸ್ತಾರಗೊಳ್ಳುತ್ತಿದೆ. ವಿದ್ಯುನ್ಮಾನ ಮಾಧ್ಯಮಗಳಿಂದಾಗಿ ಇಂದಿನ ವಿದ್ಯಾರ್ಥಿಗಳು ಹೆಚ್ಚು ಬುದ್ಧಿವಂತರಾಗುತ್ತಿದ್ದಾರೆ. ಈ ನಿಟ್ಟಿನಲ್ಲಿ ಶಿಕ್ಷಕರು ಅಧ್ಯಯನಶೀಲರಾಗಿ ಜ್ಞಾನಾರ್ಜನೆಯನ್ನು ಪಡೆದುಕೊಳ್ಳಬೇಕಾಗಿದೆ.

'ರವೀಂದ್ರನಾಥ ಟ್ಯಾಗೋರ'ರ ಪ್ರಕಾರ ಶಿಕ್ಷಕನು ತಾನು ನಿರಂತರ ಅಭ್ಯಾಸಿಯಾಗದಿದ್ದರೆ ಆತ ಚೆನ್ನಾಗಿ ಬೋಧಿಸಲು ಸಾಧ್ಯವಿಲ್ಲ. ದೀಪ ತಾನು ಸದಾ ಉರಿಯದಿದ್ದರೆ ಬೇರೊಂದು ದೀಪವನ್ನು ಹೊತ್ತಿಸಲಾರದು. ಕಲಿಯುವುದನ್ನು ನಿಲ್ಲಿಸಿದರೆ ಕಲಿಸುವುದನ್ನು ನಿಲ್ಲಿಸಬೇಕಾಗುತ್ತದೆ ಎಂದು ಹೇಳಿದ್ದಾರೆ.[೧]

ವಿಷಯ ಪರಿಣಿತಿಯೊಡನೆ ಬೋಧನಾ ಕೌಶಲ್ಯ ಪಡೆದರೆ ಬೋಧನೆ ಹೆಚ್ಚು ಪರಿಣಾಮಕಾರಿಯಾಗುತ್ತದೆ. "Good Teacher" are born and not made"

ಎಂಬುದು ಉಕ್ತಿ. ಆದರೆ ಈಗ ಬೋಧನೆಯ ಹೊಸ ಹೊಸ ಪದ್ಧತಿಗಳನ್ನು ಹಾಗೂ ಪಾಠೋಪಕರಣಗಳನ್ನು ಬಳಸಿ ಉತ್ತಮ ಶಿಕ್ಷಕರಾಗಲು ಸಾಧ್ಯವಿದೆ ಎಂದು ಶಿಕ್ಷಕರ ಕುರಿತಾಗಿ ತಿಳಿಸಿದ್ದಾರೆ.[೨]

ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಶಿಕ್ಷಕರ ಮಹತ್ವವನ್ನು ಗುರುತಿಸಿ ಈ ರೀತಿಯಾಗಿ ವ್ಯಾಖ್ಯಾನಿಸಿದೆ. ``The status of Teacher's reflects the socio-cultural ethos of a society. No people can rise above the level of its teachers. Hence the government and community should endeavour to create conditions which will help motivate and inspire teachers on constructive and creative lines to meet the needs and capabilities of individuals and the concern of the community. Every effort will be made to make teaching an attractive profession to which person of talent and committed may feel motivated to join''.[೩] ಶಿಕ್ಷಕರ ಮಹತ್ವವನ್ನು ಅರಿತು ಸಮಾಜ ಶಿಕ್ಷಕರಿಗೆ ಒಂದು ಉತ್ತಮ ಸ್ಥಾನವನ್ನು ಕೊಡಬೇಕಾಗಿದೆ. ಆದರೆ ಇಂದು ಬೆಳೆಯುತ್ತಿರುವ ಜನಸಂಖ್ಯೆ, ಅದರಿಂದಾಗಿ, ಹೆಚ್ಚುತ್ತಿರುವ ಕಲಿಯುವ ವಿದ್ಯಾರ್ಥಿಗಳ ಸಂಖ್ಯೆ, ಹೆಚ್ಚುತ್ತಿರುವ ಖಾಸಗಿ ಶಾಲೆಗಳ ಸ್ಥಾಪನೆ ಇವೆಲ್ಲವುಗಳ ನಡುವೆ ಸಮರ್ಥವಾಗಿ, ಸಮರ್ಪಕವಾಗಿ ಬೋಧನೆ ನಿರ್ವಹಿಸಿಕೊಂಡು ಹೋಗುವ ಶಿಕ್ಷಕರ ನೇಮಕಾತಿ ಆಗುತ್ತಿದೆಯೇ? ಎನ್ನುವ ಪ್ರಶ್ನೆ ಎದುರಾಗುತ್ತದೆ. ಶಾಲೆ, ಮಾಧ್ಯಮ, ಕಲಿಕೆ, ಭಾಷೆ, ಬೋಧನೆ ಇನ್ನು ಹತ್ತು ಹಲವು ಸವಾಲುಗಳಿಗೆ ಉತ್ತರ ಹುಡುಕಬೇಕಾಗಿದೆ.

ಭಾಷೆಯನ್ನು ಕಲಿಸುವ ಶಿಕ್ಷಕರಿಗೆ ತಾವು ಕಲಿಸುವ ಭಾಷೆಯ ಹಿನ್ನೆಲೆ, ಆ ಭಾಷೆಯ ಜಾಯಮಾನ, ಅದರ ವಿಶಿಷ್ಟತೆ ಚೆನ್ನಾಗಿ ತಿಳಿದಿರಬೇಕು. ಜೊತೆಗೆ ತಮ್ಮ ವಿದ್ಯಾರ್ಥಿಗಳ ಕೌಟುಂಬಿಕ ಹಿನ್ನೆಲೆ, ಅವರು ಭಾಷೆಯನ್ನು ಕಲಿಸುವಾಗ ಎದುರಿಸುವ ಸಮಸ್ಯೆಗಳು ಮತ್ತು ಬೋಧನೆಯ ತತ್ವಗಳ ಪರಿಚಯವಿರಬೇಕು. ಭಾಷೆ ಎಂದರೆ ಮೂಲತಃ ಮಾತು, ಆಡು ನುಡಿ. ಆದುದರಿಂದ ಬರಹಕ್ಕಿಂತ ಮೊದಲು ಮಕ್ಕಳಿಗೆ ಚೆನ್ನಾಗಿ ಮಾತು ಕಲಿಸಬೇಕು. ಮಾತು ಕಲಿಯುವಾಗಲೇ ಅರ್ಥಸಹಿತ ಉದ್ದೇಶಪೂರ್ವಕವಾದ ಆಲಿಸುವಿಕೆಯನ್ನು ಹಿರಿಯರು ಕಲಿಸಬೇಕು. ನಮ್ಮ ಸುತ್ತಲಿನ ಪರಿಸರದಲ್ಲಿರುವ ಒಂದು ಭಾಷೆಯ ಧ್ವನಿಯನ್ನು ಗಮನದಲ್ಲಿಟ್ಟುಕೊಂಡು ಕೇಳುತ್ತಾ ಹೋದರೆ ಭಾಷಾ ಕಲಿಕೆ ಸುಲಭವಾಗುತ್ತದೆ. ಆದರೆ ಇಂದು ಭಾಷಾ ಬೋಧನೆಯು

ಒಂದು ಸಮಸ್ಯೆಯಾಗಿ ಮಾರ್ಪಾಡಾಗುತ್ತಿದೆ. ಭಾಷಾ ಬೋಧನೆಯಲ್ಲಿ ಭಾಷಾ ಮಾಧ್ಯಮ, ಪಠ್ಯವಸ್ತು, ಬೋಧನಾ ವಿಧಾನಗಳು, ಪರೀಕ್ಷೆ ಹಾಗೂ ಮೌಲ್ಯಮಾಪನ ಬೋಧಕರ ಭಾಷಿಕ ಸಮಸ್ಯೆಗಳು, ಅವರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳು ದ್ವಿತೀಯ ಭಾಷೆಯಾಗಿ ಕನ್ನಡವನ್ನು ಬೋಧಿಸುವ ಸಂದರ್ಭದಲ್ಲಿ ಕೆಲವೊಂದು ಸಮಸ್ಯೆಗಳಿವೆ ಎಂಬುದನ್ನು ಗಮನಿಸಲಾಗಿದೆ.

ಶಿಕ್ಷಣದಲ್ಲಿ ಬೋಧನೆ ಮತ್ತು ಕಲಿಕೆಯು ಪ್ರಮುಖ ಘಟ್ಟಗಳಾಗಿವೆ. ಇವೆರಡೂ ಪರಸ್ಪರ ಪೂರಕವಾಗಿವೆ. ಒಂದನ್ನೊಂದು ಅವಲಂಬಿಸಿವೆ. ಇವೆರಡು ಪ್ರಕ್ರಿಯೆಗಳು ಸಮರ್ಪಕವಾಗಿ ನಡೆಯದಿದ್ದರೆ ಕಲಿಕೆಯ ಗುಣಮಟ್ಟ ಕುಸಿಯುತ್ತದೆ. ಇಂತಹ ಬೋಧನೆ ಹಾಗೂ ಕಲಿಕೆಗೆ ಹಲವಾರು ಸಮಸ್ಯೆಗಳಿವೆ. ಅದರಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಬೋಧಿಸುತ್ತಿರುವ ಆಂಗ್ಲ ಮಾಧ್ಯಮದ ಶಿಕ್ಷಕರು ಎದುರಿಸುತ್ತಿರುವ ಸಮಸ್ಯೆಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಿಲಾಗಿದೆ.

೪.೧ ಪಠ್ಯಮೂಲ ಸಮಸ್ಯೆಗಳು

೪.೨ ಬೋಧನಾ ವಿಧಾನಗಳು

೪.೩ ಪರೀಕ್ಷೆ ಹಾಗೂ ಮೌಲ್ಯಮಾಪನದ ಸಮಸ್ಯೆಗಳು

೪.೪ ಶಿಕ್ಷಕರ ಭಾಷಿಕ ಸಮಸ್ಯೆಗಳು

೪.೫ ಶಿಕ್ಷಕರ ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳು

೪.೬ ಶಿಕ್ಷಕರ ಧೋರಣೆಗಳು

ಭಾಷಾ ಬೋಧನೆಯ ಪ್ರಕ್ರಿಯೆಯಲ್ಲಿ ಶಿಕ್ಷಕರು ಹೀಗೆ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಕುರಿತು ಶಿಕ್ಷಕರ ಅಭಿಪ್ರಾಯಗಳನ್ನು ಸಂಗ್ರಹಿಸಿ ಯಥಾವತ್ತಾಗಿ ಸ್ಕ್ಯಾನ್ ಮಾಡಿ ಹಾಕಲಾಗಿದೆ.

8. ಶೈಕ್ಷಣಿಕ ವಿದ್ಯಾರ್ಹತೆ (ಬಿ.ಎ/ ಎಮ್.ಎ. ಪಿ.ಎಚ್.ಡಿ) ಬಿ.ಎ. ಬಿ.ಇಡಿ. ಎಂ.ಎ.

9. ವೃತ್ತಿಪರ ತರಬೇತಿ (ಡಿ.ಇಡಿ/ ಬಿಇಡಿ/ ಎಮ್.ಇಡಿ) ______________

10. ಇತರೆ ವಿದ್ಯಾರ್ಹತೆ ಏನಾದರೂ ಇದ್ದಲ್ಲಿ [illegible] ಮತ್ತು ಆಂಗ್ಲ ಭಾಷೆಯಲ್ಲಿ

11. ಕನ್ನಡ ಭಾಷಾ ಬೋಧನೆಯಲ್ಲಿ ಪಡೆದ ಅನುಭವ :

- 5 ವರ್ಷಗಳಗಿಂತ ಕಡಿಮೆ ○
- 5 ರಿಂದ 10 ವರ್ಷ (ticked)
- 10 ರಿಂದ 15 ವರ್ಷ ○
- 20 ವರ್ಷಕ್ಕಿಂತ ಹೆಚ್ಚು ○

12. ವಾರ್ಷಿಕ ಆದಾಯ (ರೂಗಳಲ್ಲಿ) :

- 20000 ರೂ. ಕಡಿಮೆ (ticked)
- 20000 ರೂ ರಿಂದ 60000 ○
- 60000 ರೂ ರಿಂದ 80000 (ticked)
- 80000 ರೂ ಮೇಲ್ಪಟ್ಟು ○

13. ಪ್ರಸ್ತುತ ನಿರ್ವಹಿಸುತ್ತಿರುವ ಕರ್ತವ್ಯಗಳು

ಬೋಧನೆ (ticked) ಸಂಪನ್ಮೂಲವ್ಯಕ್ತಿ ○ ಮೇಲ್ವಿಚಾರಣೆ/ ಅಧಿಕೃತ ತಪಾಸಣೆ ○

ಆಡಳಿತನಿರ್ವಹಣೆ ○ ಪಠ್ಯಪುಸ್ತಕ ರಚನಾಸಮಿತಿಯಸದಸ್ಯರು ○

14. ಪ್ರವೃತ್ತಿಗಳು / ಇತರೆ ಆಸಕ್ತಿಗಳು :

ಅ) ಪ್ರವೃತ್ತಿಗಳು/ ಆಸಕ್ತಿಗಳು : ಓದುವುದು, [illegible]

ಆ) ನೀವು ವೃತ್ತ ಪತ್ರಿಕೆಗಳು, ಮಾಸ ಪತ್ರಿಕೆಗಳು, ಮತ್ತು ಪುಸ್ತಕಗಳನ್ನು ಓದುವಿರಾ ?

ಹೌದು (ticked) ಇಲ್ಲ ○

| | ಪ್ರಾದೇಶಿಕ ಭಾಷೆ | ಕನ್ನಡ ಭಾಷೆ | ಆಂಗ್ಲ ಭಾಷೆ |
|---|---|---|---|
| • ವೃತ್ತ ಪತ್ರಿಕೆಗಳು | ○ | ✓ | ○ |
| • ಮಾಸ ಪತ್ರಿಕೆಗಳು | ○ | ✓ | ○ |
| • ಪುಸ್ತಕಗಳು | ✓ | ✓ | ○ |

ಇ) ನೀವು ಆಕಾಶವಾಣಿ ಆಲಿಸುವಿರಾ?

ಹೌದು (ticked) ಇಲ್ಲ ○

ಹೌದಾದರೆ ಯಾವ ಭಾಷೆಯಲ್ಲಿ?

ಪ್ರಾದೇಶಿಕ ಭಾಷೆ ○ ಕನ್ನಡ ಭಾಷೆ (ticked) ಆಂಗ್ಲ ಭಾಷೆ ○

ಇತರೆ ________________

- ತರಬೇತಿಯ ಹೆಸರು : ______________________
- ವರ್ಷ : ______________________
- ಅವಧಿ : ______________________
- ತರಬೇತಿ ನಿರ್ವಹಿಸಿದ ಸಂಸ್ಥೆಯ ಹೆಸರು : ______________________
- ಆ ತರಬೇತಿಯ ಅನುಭವ : ______________________

4) ತರಬೇತಿಯ ಅಗತ್ಯತೆ ಇದೆಯೇ

ಹೌದು ◯ ಇಲ್ಲ ⊘

ಹೌದಾದರೆ ವಿವರಣೆ ನೀಡಿರಿ ______________________

______________________

______________________

5) ಈ ಹಂತದಲ್ಲಿ ವಿಶೇಷ ತರಬೇತಿಗಳನ್ನು ಆಯೋಜಿಸುವುದರಿಂದ ಎಷ್ಟು ಪರಿಣಾಮಕಾರಿಯಾಗುತ್ತವೆ ಎಂದು ನೀವು ಭಾವಿಸಿದ್ದೀರಿ?

______________________

______________________

______________________

## IX. ಕನ್ನಡ ಪರೀಕ್ಷೆ ಮತ್ತು ಮೌಲ್ಯಮಾಪನ :

1) ಕಿರಿಯ ಪ್ರಾಥಮಿಕ ಹಂತದಲ್ಲಿ ಕನ್ನಡ ಭಾಷೆಯ ಸಾಧನೆಯನ್ನು ಪರೀಕ್ಷಿಸಲಾಗುತ್ತಿದೆಯೇ?

ಹೌದು ⊘ ಇಲ್ಲ ◯

2) ಹೌದಾದಲ್ಲಿ ಕನ್ನಡದ ಯಾವ ಕ್ಷೇತ್ರ ಮತ್ತು ಕೌಶಲ್ಯವನ್ನು ಪರೀಕ್ಷಿಸಬೇಕು ?

| | ಹೌದು | ಇಲ್ಲ |
|---|---|---|
| • ಮೌಖಿಕ ಸಂವಹನ | ⊘ | ◯ |
| • ಆಲಿಸುವಿಕೆ | ⊘ | ◯ |
| • ಓದುಗಾರಿಕೆ ಮತ್ತು ಬರೆವಣಿಗೆ | ⊘ | ◯ |
| • ವ್ಯಾಕರಣ ಮತ್ತು ಶಬ್ದಭಂಡಾರ | ⊘ | ◯ |

ಇತರೆ ______________

3) ನಿಮ್ಮ ತರಗತಿಯಲ್ಲಿರುವ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ಎಷ್ಟು?

_______38_______

4) ಅದರಲ್ಲಿ ಸಾಮಾನ್ಯಮಟ್ಟ ಮತ್ತು ವೇಗವಾಗಿ ಕಲಿಯುವ ವಿದ್ಯಾರ್ಥಿಗಳೆಷ್ಟು ?

ಸಂಖ್ಯೆಗಳಲ್ಲಿ ____25____ ____13____

5) ಕನ್ನಡ ಕಲಿಕೆಯಲ್ಲಿ ಹಿಂದುಳಿದ ವಿದ್ಯಾರ್ಥಿಗಳಿಗಾಗಿ ಯಾವುದಾದರೂ ವಿಶೇಷ ಬೋಧನಾ ವಿಧಾನವನ್ನು ಅನುಸರಿಸುತ್ತೀರಾ ?

ಹೌದು ⊘ ಇಲ್ಲ ◯

## ೪.೧ ಪಠ್ಯಮೂಲ ಸಮಸ್ಯೆಗಳು

ಶಿಕ್ಷಣದಲ್ಲಿ ಪಠ್ಯಪುಸ್ತಕ ಒಂದು ವಿಶಿಷ್ಟ ಸಾಧನ. ಪ್ರಾಥಮಿಕ, ಹಿರಿಯ ಪ್ರಾಥಮಿಕ, ಪ್ರೌಢಶಾಲಾ ಹಂತಗಳಲ್ಲಿ ಪಠ್ಯಪುಸ್ತಕಗಳು ವ್ಯಾಪಕವಾಗಿ ಬಳಕೆಯಲ್ಲಿವೆ. ವಿವಿಧ ತರಗತಿಗಳಲ್ಲಿ ಬೋಧಿಸಲು ವ್ಯವಸ್ಥಿತ ರೀತಿಯಲ್ಲಿ ವಿಷಯ ಸೂಚಿಗಳನ್ನು ಹೊಂದಿಕೊಂಡಿರುವಂತೆ ಪಠ್ಯಪುಸ್ತಕಗಳನ್ನು ರಚಿಸಲಾಗುತ್ತದೆ. ಮೌಖಿಕ ಕಲಿಕಾ ವಿಧಾನದಿಂದ ಇಂದಿನ ಔಪಚಾರಿಕ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಪುಸ್ತಕಗಳು ಪ್ರಮುಖ ಪ್ರಧಾನ ಪಾತ್ರ ವಹಿಸುತ್ತಿವೆ.

ಸಾಮಾನ್ಯವಾಗಿ ವಿದ್ಯಾರ್ಥಿಗಳು ಓದುವಾಗ ಮತ್ತು ಬರೆಯುವಾಗ ಅವರಲ್ಲಿ ಉಂಟಾಗುವ ಸಮಸ್ಯೆಗಳಿಗೆ ಪಠ್ಯಕ್ರಮವೂ ಸಹ ಕಾರಣವಾಗಿರುತ್ತದೆ. ಪಠ್ಯಕ್ರಮವು ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ರಚನೆಯಾಗಿರುತ್ತದೆ. ಯಾವ ತರಗತಿಯ ಮಕ್ಕಳಿಗೆ ಯಾವ ವಿಷಯವನ್ನು ಪಠ್ಯವಾಗಿಸಬೇಕು. ಅವರ ಬೌದ್ಧಿಕ ಸಾಮರ್ಥ್ಯವೆಷ್ಟು, ಅವರ ವಯೋಮಾನಕ್ಕೆ ಮತ್ತು ಗ್ರಹಿಕೆಗೆ ಸಂಬಂಧಿಸಿದಂತೆ ಪಠ್ಯಪುಸ್ತಕವನ್ನು ಅಳವಡಿಸುವುದು ರೂಢಿಯಲ್ಲಿದೆ. ಆದರೂ ಅದರಲ್ಲಿ ದೋಷಗಳಿರುವುದು ಕಂಡು ಬರುತ್ತದೆ. ಮುಖ್ಯವಾಗಿ ಪಠ್ಯಕ್ರಮವು ಸ್ಥಳೀಯ ಅಗತ್ಯತೆಗೆ ಅನುಗುಣವಾಗಿ ಇರುವುದಿಲ್ಲ. ಪಠ್ಯಕ್ರಮದಲ್ಲಿ ದೋಷಗಳು ಇರುತ್ತವೆ. ಕೆಲವೊಮ್ಮೆ ಅನಾವಶ್ಯಕವಾಗಿ ಕೆಲವು ಪಾಠಗಳನ್ನು ಅಳವಡಿಸುವುದು. ಪದೇ ಪದೇ ಪಠ್ಯ ಬದಲಾವಣೆಯೂ ಕೂಡ ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಮೇಲೆ ಪರಿಣಾಮವನ್ನು ಬೀರುತ್ತದೆ. ಹೊಸ ಪಠ್ಯಕ್ಕೆ ಹೊಂದಿಕೊಳ್ಳಲು ಕೆಲವು ವರ್ಷಗಳ ಕಾಲ ಬೋಧಕರು ಸಂಬಂಧಿಸಿದ ಸಾಹಿತ್ಯವನ್ನು, ಪರಾಮರ್ಶನ ಗ್ರಂಥಗಳು ಮತ್ತು ಪೂರಕ ಗ್ರಂಥಗಳನ್ನು ಅಧ್ಯಯನ ಮಾಡಬೇಕಾಗುತ್ತದೆ. ಹೀಗಾಗಿ ಹೊಸ ಪಠ್ಯವನ್ನು ಪದೇ ಪದೇ ಮಾಡಬಾರದು ಎಂಬ ಆಶಯ ಬೋಧಕ ವರ್ಗದಿಂದ ಕೇಳಿ ಬರುತ್ತಿದೆ. ಪಠ್ಯಕ್ರಮವನ್ನು ರಚಿಸುವಾಗ ಪಠ್ಯಪುಸ್ತಕ ರಚನಾ ಸಮಿತಿಯಲ್ಲಿ ಸಂಬಂಧಿಸಿದ ವಿಷಯ ಶಿಕ್ಷಕರನ್ನು ಸದಸ್ಯರನ್ನಾಗಿ ಮಾಡಿಕೊಳ್ಳಬೇಕು. ಅದರಲ್ಲಿ ವಿಶೇಷವಾಗಿ ಶಿಕ್ಷಣ ತಜ್ಞರು ಇದ್ದರೆ ಇನ್ನಷ್ಟು ಉತ್ತಮವಾಗಿರುತ್ತದೆ. ಕೆಲವೊಮ್ಮೆ ಸ್ಥಳೀಯ ಸಂಪನ್ಮೂಲ ವ್ಯಕ್ತಿಗಳು, ಭಾಷಾ ಶಿಕ್ಷಕರು ಸಮಿತಿಯಲ್ಲಿ ಇಲ್ಲದಿರುವುದರಿಂದ ವಿದ್ಯಾರ್ಥಿಗಳು ಪಠ್ಯದ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಪಠ್ಯಪುಸ್ತಕವನ್ನು ಕೆಲವೊಮ್ಮೆ ಉನ್ನತ ಶಿಕ್ಷಣದಲ್ಲಿ ಹೆಸರು ಮಾಡಿದ ವ್ಯಕ್ತಿಗಳ ನೇತೃತ್ವದಲ್ಲಿ ಪಠ್ಯಪುಸ್ತಕ ರಚನೆ ಮಾಡಲು ಶಿಕ್ಷಣ ಇಲಾಖೆಗಳು ಮುಂದಾಗುತ್ತವೆ. ಆದ್ದರಿಂದ ಪಠ್ಯಪುಸ್ತಕ ರಚನೆಯ ಸಂದರ್ಭದಲ್ಲಿ ಎಲ್ಲ ದೃಷ್ಟಿಕೋನಗಳನ್ನು ಇಟ್ಟುಕೊಂಡು ಸಂಪನ್ಮೂಲಗಳಿಗೆ ಅನುಗುಣವಾಗಿ ಸ್ಥಳೀಯ ಭಾಷಾ ಚಟುವಟಿಕೆಗಳು ಹಾಗೂ ಸಾಹಿತ್ಯ

ಪ್ರಕಾರಗಳನ್ನು ಒಳಗೊಂಡಂತೆ ವ್ಯವಸ್ಥಿತವಾಗಿ ಸಮಗ್ರ ವಿಷಯಗಳು ವಿದ್ಯಾರ್ಥಿಗಳಿಗೆ ತಲುಪುವ ರೀತಿಯಲ್ಲಿ ಪಠ್ಯಪುಸ್ತಕವನ್ನು ರಚಿಸಿದಲ್ಲಿ ತಪ್ಪುಗಳನ್ನು ನಿವಾರಿಸಲು ಸಾಧ್ಯವಾಗುತ್ತದೆ. ಈ ನಿಟ್ಟಿನಲ್ಲಿ ಪಠ್ಯ ಪುಸ್ತಕ ಮತ್ತು ಸಂಪನ್ಮೂಲಗಳ ಕುರಿತು ಶಿಕ್ಷಕರ ಅಭಿಪ್ರಾಯವನ್ನು ಸಂಗ್ರಹಿಸಿ ಯಥಾವತ್ತಾಗಿ ಮಾದರಿಗಳನ್ನು ಸ್ಕ್ಯಾನ್ ಮಾಡಿ ಹಾಕಲಾಗಿದೆ.

ದ್ವಿತೀಯ ಭಾಷಾ ಕನ್ನಡ ಪಠ್ಯ ಪುಸ್ತಕಗಳು, ಅವುಗಳ ಸ್ವರೂಪ, ರಚನೆ ಪಠ್ಯಗಳು, ಬೋಧನೆಗೆ ಸುಲಭವಾಗಿಯೇ ಅಥವಾ ಕಠಿಣವಾಗಿವೆಯೇ? ಬೋಧನೆ ಪರಿಣಾಮವಾಗಲು ಸಹಾಯ ಮಾಡುತ್ತಿವೆಯೇ? ಇತರೆ ಅಂಶಗಳನ್ನೊಳಗೊಂಡಂತೆ ಒಟ್ಟು ಸುಮಾರು ೩೫ ಕನ್ನಡ ಭಾಷಾ ಬೋಧಕರನ್ನು ಅಧ್ಯಯನಕ್ಕೆ ಒಳಪಡಿಸಿ ಅವರಿಗೆ ಪ್ರಶ್ನಾವಳಿಗಳನ್ನು ನೀಡಿ ಅಭಿಪ್ರಾಯ ಸಂಗ್ರಹಣೆ ಮಾಡಲಾಗಿದೆ. ಬಂದ ಮಾಹಿತಿಯನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.




**ಸ್ತಂಭ ರೇಖಾಚಿತ್ರ ೧**

- ಭಾಷಾ ಪಠ್ಯ ಪುಸ್ತಕಗಳ ಸ್ವರೂಪ, ರಚನೆ ಕುರಿತು ಶಿಕ್ಷಕರು ನೀಡಿರುವ ಪ್ರತಿಕ್ರಿಯೆಗಳು

**ವಿಶ್ಲೇಷಣೆ**

ಕನ್ನಡ ಭಾಷೆಯ ಪಠ್ಯಕ್ರಮ ಮತ್ತು ಸಂಪನ್ಮೂಲಗಳು ಹಾಗೂ ಶಿಕ್ಷಕರಿಂದ ಅಭಿಪ್ರಾಯಗಳನ್ನು ಸಂಗ್ರಹಿಸಲಾಯಿತು. ದ್ವಿತೀಯ ಭಾಷಾ ಪಠ್ಯಪುಸ್ತಕದ ಸಂಪನ್ಮೂಲ

ಸಮಂಜಸವಾಗಿದೆ ಎಂದು ಶೇ. ೬೦ರಷ್ಟು ಶಿಕ್ಷಕರು ಅಭಿಪ್ರಾಯಪಟ್ಟಿದ್ದಾರೆ, ಉಳಿದ ೩೦ ಶಿಕ್ಷಕರು ಸಮಂಜವಾಗಿಲ್ಲ ಎಂದು ಉತ್ತರಿಸಿದ್ದಾರೆ. ೧೦ರಷ್ಟು ಶಿಕ್ಷಕರು ಪ್ರತಿಕ್ರಿಯಿಸಿಲ್ಲ. ಬೋಧಿಸಲು ಸ್ವಲ್ಪಮಟ್ಟಿಗೆ ಕಠಿಣ ಎನ್ನುವ ಅಭಿಪ್ರಾಯಗಳನ್ನು ಗಮನಿಸಬಹುದು. ಕಾರಣ ವ್ಯಾಕರಣಾಂಶಗಳು ಮತ್ತು ಸಂಸ್ಕೃತ ಭಾಷಾ ಪದಗಳನ್ನು ಬಳಸಿರುವುದು ಎಂದು ಅಭಿಪ್ರಾಯಪಟ್ಟಿದ್ದಾರೆ. ಬೋಧನಾ ಅವಧಿಯ ಅಭಾವವಿದೆ ಎಂದು ಬೋಧಕರು ತಿಳಿಸಿದ್ದಾರೆ. ಕಲಿಕಾರ್ಥಿಗಳಿಗೆ ಖಚಿತ ಮತ್ತು ಅರ್ಥಪೂರ್ಣ ಅಭ್ಯಾಸ ಮಾಡಿಸಲು ಪಠ್ಯಪುಸ್ತಕಗಳು ಸಂಪೂರ್ಣ ಸಹಾಯಕವಾಗಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಪ್ರಥಮ ಭಾಷಾ ಪಠ್ಯಪುಸ್ತಕಗಳಲ್ಲಿ ವ್ಯಾಕರಣಾಂಶಗಳನ್ನು ಮೊದಲಿನಿಂದಲೇ ವಿವರಿಸುವುದರಿಂದ ಭಾಷಾ ಕೌಶಲ್ಯಗಳನ್ನು ಸುಲಭವಾಗಿ ಕಲಿಯುತ್ತಾರೆ. ಆದರೆ ದ್ವಿತೀಯ ಭಾಷೆ ಕನ್ನಡವನ್ನು ಕಲಿಯುವಾಗ ಆಂಗ್ಲ ಮಾಧ್ಯಮದ ಪ್ರಭಾವ ಹೆಚ್ಚಿರುತ್ತದೆ. ಕಾರಣ ಕನ್ನಡ ಗೌಣವಾಗುತ್ತದೆ. ಇಂಗ್ಲಿಷ್ ಭಾಷೆಗೆ ಕೊಟ್ಟಷ್ಟು ಪ್ರಾಶಸ್ತ್ಯ ಕನ್ನಡಕ್ಕೆ ಕೊಡಲಾಗುವುದಿಲ್ಲ ಎನ್ನುವ ಅಭಿಪ್ರಾಯಗಳನ್ನು ಅಧ್ಯಯನದಿಂದ ಗಮನಿಸಲಾಗಿದೆ.

ಕನ್ನಡ ಭಾಷಾ ಪಠ್ಯಪುಸ್ತಕಗಳು ಮಕ್ಕಳ ಮನಸ್ಸನ್ನು ಆಕರ್ಷಿಸುವಂತೆ ಇರಬೇಕು. ಕೆಲವು ಪಠ್ಯಂಶಗಳು ಮಕ್ಕಳ ನಿರಾಸಕ್ತಿಗೆ ಕಾರಣವಾಗುತ್ತಿವೆ. ಹಾಗೆಯೇ ಮಕ್ಕಳ ವಯೋಮಿತಿ ಹಾಗೂ ತರಗತಿಗೆ ಅನುಗುಣವಾಗಿ ಪ್ರಶ್ನೆಗಳ ರಚನೆಯಿರಬೇಕು ಎಂಬುದು ಬೋಧಕರ ಅಭಿಪ್ರಾಯವಾಗಿದೆ. ಗದ್ಯ ಮತ್ತು ಪದ್ಯ ಭಾಗಗಳು ಪರಿಣಾಮಕಾರಿಯಾಗಿದ್ದು, ಹೊಸ ಹೊಸ ವಿಚಾರಗಳನ್ನು ಒಳಗೊಂಡಂತೆ ಪಠ್ಯಕ್ರಮ ರಚನೆಯಾಗಬೇಕು ಎನ್ನುವ ಅಭಿಪ್ರಾಯಗಳು ಬೋಧಕ ವರ್ಗದಿಂದ ತಿಳಿದುಬಂದಿರುವುದನ್ನು ಗಮನಿಸಬಹುದು.

### ೪.೨ ಬೋಧನಾ ವಿಧಾನಗಳು

ವಿದ್ಯಾರ್ಥಿಗಳು ಓದುಗಾರಿಕೆಯಲ್ಲಿ ಅಥವಾ ಬರೆಯುವಿಕೆಯಲ್ಲಿ ಮಾಡುವ ತಪ್ಪುಗಳಿಗೆ ಅಥವಾ ವ್ಯತ್ಯಾಸಗಳಿಗೆ ಬೋಧನಾ ಕ್ರಮವು ಸಹ ಕೆಲವೊಮ್ಮೆ ಪ್ರಮುಖ ಕಾರಣವಾಗುತ್ತದೆ. ವಿದ್ಯಾರ್ಥಿಗೆ ಯಾವುದೇ ವಿಷಯವು ಮನನವಾಗದೇ ಇರುವುದಕ್ಕೆ ಬೋಧನಾ ಕ್ರಮವೇ ಕಾರಣವಾಗುತ್ತದೆ. ನಮ್ಮ ಶಿಕ್ಷಣದಲ್ಲಿ ಹಳೆಯ ಕಾಲದ ಬೋಧನಾ ವಿಧಾನಗಳನ್ನೇ ಅನುಸರಿಸಲಾಗುತ್ತಿದೆ. ಬೋಧಕರು ಮಕ್ಕಳ ಆಸಕ್ತಿ ಮತ್ತು ಅಭಿರುಚಿಗೆ ತಕ್ಕಂತೆ ಬೋಧಿಸಿದಾಗ ಮಾತ್ರ ಆ ವಿಷಯವು ಮನನವಾಗುತ್ತದೆ. ಇಲ್ಲವಾದಲ್ಲಿ ವಿಷಯ ಗ್ರಹಿಕೆಯಾಗದೆ ವಿದ್ಯಾರ್ಥಿಯು ಓದುವಾಗ ಮತ್ತು ಬರೆಯುವಾಗ ವ್ಯತ್ಯಾಸಗಳುಂಟಾಗುತ್ತವೆ. ಬೋಧಕರು ತಮಗೆ ವಹಿಸಿದಂತಹ ಪಠ್ಯಕ್ರಮವನ್ನು ಆಯಾ ತರಗತಿಯಲ್ಲಿ ನಿಗದಿ

ವೇಳೆಯಲ್ಲೇ ಬೋಧಿಸಬೇಕು. ಅದನ್ನು ಬಿಟ್ಟು ಕೆಲವೊಮ್ಮೆ ಪರೀಕ್ಷಾ ದೃಷ್ಟಿಯಿಂದ ಮೇಲಿಂದ ಮೇಲೆ ವಿಷಯವನ್ನು ಒತ್ತಾಯ ಪೂರ್ವಕವಾಗಿ ಬೋಧಿಸಿದಲ್ಲಿ ವಿದ್ಯಾರ್ಥಿಗಳ ಮಸ್ತಕದಲ್ಲಿ ಹೋಗುವುದು ಕಷ್ಟವಾಗುತ್ತದೆ. ವಿದ್ಯಾರ್ಥಿಗಳಲ್ಲಿ ಆಲಸ್ಯ ಉಂಟಾಗುತ್ತದೆ.

ಕೆಲವು ಮಕ್ಕಳು ಬೇಗನೆ ವಿಷಯವನ್ನು ಗ್ರಹಿಸುತ್ತಾರೆ ಇನ್ನು ಕೆಲವು ಮಕ್ಕಳು ತಡವಾಗಿ ಗ್ರಹಿಸುತ್ತಾರೆ. ಇನ್ನು ಕೆಲವು ಮಕ್ಕಳು ಎರಡು ಮೂರು ಬಾರಿ ವಿಷಯವನ್ನು ಮತ್ತೆ ಮತ್ತೆ ಪ್ರಸ್ತಾಪಿಸಿದಾಗ ಆ ವಿಷಯವನ್ನು ಗ್ರಹಿಸುತ್ತಾರೆ. ಹೀಗೆ ಮೂರು, ನಾಲ್ಕು ವಿಧದ ಮಕ್ಕಳು ತರಗತಿ ಕೋಣೆಯಲ್ಲಿರುತ್ತಾರೆ. ಹಾಗಾಗಿ ಅವರನ್ನು ದೃಷ್ಟಿಯಲ್ಲಿರಿಸಿಕೊಂಡು ಬೋಧಕರು ಪಾಠವನ್ನು ಬೋಧಿಸಬೇಕಾಗುತ್ತದೆ. ತರಗತಿಗಳಲ್ಲಿ ಬೋಧಕರು ವಿಷಯವನ್ನು ಸಂಪೂರ್ಣವಾಗಿ ಬೋಧಿಸುತ್ತಾರೆ. ಆದರೆ ಅವರು ಪಾಠದ ಕೊನೆಯಲ್ಲಿ ವಿದ್ಯಾರ್ಥಿಗಳಿಗೆ ಎಷ್ಟರ ಮಟ್ಟಿಗೆ ವಿಷಯವು ಮನನವಾಗಿದೆ ಎಂಬುದಕ್ಕೆ ತಿಳಿದುಕೊಳ್ಳಲು ಪ್ರಶ್ನೆಗಳನ್ನು ಕೇಳಬೇಕು. ಆದರೆ ಬೋಧಕರು ಪ್ರಶ್ನೆ ಕೇಳುವುದಿಲ್ಲ. ಎಲ್ಲಾ ಬೋಧಕರು ಪ್ರಶ್ನೆ ಕೇಳುವುದಿಲ್ಲವೆಂದರ್ಥವಲ್ಲ. ಕೆಲವರು ಪ್ರಶ್ನೆ ಕೇಳದೇ ಇರುತ್ತಾರೆ. ಅಂತಹವರ ಕುರಿತು ಇಲ್ಲಿ ಚರ್ಚಿಸುವ ಅಗತ್ಯವಿದೆ. ವಿದ್ಯಾರ್ಥಿಗಳಿಗೆ ತಾವು ಬೋಧಿಸಿದ ವಿಷಯದ ಕುರಿತು ಅವರಿಗೆ ಗೃಹ ಪಾಠವನ್ನು ನೀಡಬೇಕು. ಆ ವಿಷಯದ ಬಗ್ಗೆ ವಿದ್ಯಾರ್ಥಿಗಳಿಗೆ ನೀಡಿದ ಗೃಹಪಾಠವನ್ನು ತಿದ್ದಿ ಸಲಹೆ ಸೂಚನೆಗಳನ್ನು ನೀಡಬೇಕು. ವಿದ್ಯಾರ್ಥಿಗಳು ಚೆನ್ನಾಗಿ ಸ್ಪಂದಿಸುತ್ತಿದ್ದರೆ ಅವರನ್ನು ಪ್ರೇರೇಪಿಸಬೇಕು. ಇನ್ನು ಉತ್ತಮ ಅಂಕಗಳನ್ನು ಗಳಿಸುವಂತೆ ಪ್ರೋತ್ಸಾಹಿಸಬೇಕು. ಬೋಧಕನು ಸೂಕ್ಷ್ಮಗ್ರಾಹಿಯಾಗಬೇಕು. ಬರೀ ಪುಸ್ತಕವನ್ನು ಓದುತ್ತಾ ಅಥವಾ ಕಪ್ಪು ಹಲಗೆಯ ಕಡೆಗೆ ಸೀಮೆ ಸುಣ್ಣವನ್ನು ಬಳಸಿ ಬರೆಯುತ್ತಾ ನಿಂತರೆ ವಿದ್ಯಾರ್ಥಿಗಳು ಬೇರೆ ಕಡೆಗೆ ಗಮನಹರಿಸುವ ಸಾಧ್ಯತೆ ಇರುತ್ತದೆ. ಆದ್ದರಿಂದ ಬೋಧಕರು ವಿದ್ಯಾರ್ಥಿಗಳ ಕಡೆಗೆ ಆಗಾಗ ನೋಡುತ್ತಲೇ ಇರಬೇಕು. ವಿದ್ಯಾರ್ಥಿಗಳ ಮುಖವನ್ನು ನೋಡುತ್ತಾ ಅವರ ಕಣ್ಣುಗಳಲ್ಲಿ ಯಾವ ರೀತಿ ಪ್ರತಿಕ್ರಿಯೆ ಬರುತ್ತದೆ. ಅವರ ಹಾವ ಭಾವವನ್ನು ಗಮನಿಸುತ್ತಿರಬೇಕಾಗುತ್ತದೆ. ಕೆಲವೊಮ್ಮೆ ಬೋಧಕನ ಉಚ್ಚರಣೆ ಸರಿಯಿಲ್ಲದಿದ್ದರೆ ವಿದ್ಯಾರ್ಥಿಗಳಿಗೆ ವಿಷಯ ಅಸ್ಪಷ್ಟವಾಗುತ್ತದೆ. ಆದ್ದರಿಂದ ವಿದ್ಯಾರ್ಥಿಗಳು ವಿಷಯದ ಗೊಂದಲಕ್ಕೀಡಾಗುತ್ತಾರೆ. ಬೋಧಕನು ತಾನು ತರಗತಿಗೆ ಹೋಗುವ ಮುನ್ನ ಸಂಬಂಧಿಸಿದ ಪಠ್ಯದ ಕುರಿತು ಮೊದಲು ವಿಷಯವನ್ನು ಸಂಪೂರ್ಣವಾಗಿ ಮನನ ಮಾಡಿಕೊಂಡು ಹೋಗಬೇಕು. ಜೊತೆಗೆ ವಿಷಯದ ಕುರಿತು ಟಿಪ್ಪಣಿಯನ್ನು ಮಾಡಿಕೊಂಡಿರಬೇಕು. ವಿದ್ಯಾರ್ಥಿಗಳ ಮುಂದೆ ವಿಷಯದ ಅಸ್ಪಷ್ಟತೆ ಉಂಟಾದರೆ

ಅಥವಾ ಹೇಳಲು ತಡವರಿಸಿದರೆ ವಿದ್ಯಾರ್ಥಿಗಳು ಗೊಂದಲಕ್ಕೆ ಈಡಾಗುತ್ತಾರೆ. ಅವರಿಗೆ ಸ್ಪಷ್ಟವಾದ ಚಿತ್ರಣ ಮೂಡುವಂತೆ ಬೋಧಕ ವಿಷಯವನ್ನು ವಿವರಿಸಬೇಕು.

ಬೋಧನಾ ವಿಧಾನದಲ್ಲಿ ಸಂಬಂಧಿಸಿದ ಕಲಿಕಾ ಉಪಕರಣಗಳನ್ನು ತರಗತಿಗೆ ತೆಗೆದುಕೊಂಡು ಹೋಗಲೇ ಬೇಕಾಗುತ್ತದೆ. ಉದಾಹರಣೆಗೆ ಸಮಾಜ ವಿಜ್ಞಾನವನ್ನು ಬೋಧಿಸುವ ಬೋಧಕರು ಭೂಪಟಗಳನ್ನು, ಸಂಬಂಧಿಸಿದ ರಾಜರ ಚಿತ್ರಗಳನ್ನು, ಸ್ಮಾರಕಗಳನ್ನು ಚಿತ್ರದ ಮೂಲಕ ತೋರಿಸಿದಾಗ ಅಲ್ಲಿ ಸಂಪೂರ್ಣ ವಿಷಯದ ಕುರಿತು ಗ್ರಹಿಕೆ ಉಂಟಾಗಲು ಸಾಧ್ಯವಿದೆ. ಈ ಬೋಧನೋಪಕರಗಳನ್ನು ಬಳಸದಿದ್ದರೆ, ವೈಜ್ಞಾನಿಕ ಜ್ಞಾನ ಬೆಳೆಯಲಾರರು. ಬೋಧಕರು ಬೋಧನ ವಿಧಾನದ ಹಾಗೂ ತಂತ್ರಗಳನ್ನು ಅಳವಡಿಸದೇ ಬೋಧಿಸುವುದರಿಂದ ವಿದ್ಯಾರ್ಥಿಗಳು ಮುಂದಿನ ಅಧ್ಯಾಯದಲ್ಲಿ ಓದುವಿಕೆ ಮತ್ತು ಬರೆವಣಿಗೆಯಲ್ಲಿ ವ್ಯತ್ಯಾಸಗಳನ್ನು ಮಾಡುತ್ತಾರೆ. ಹಾಗಾಗಿ ಬೋಧಕರು ತುಂಬಾ ಎಚ್ಚರಿಕೆಯನ್ನು ವಹಿಸುತ್ತಾ ಬೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳಬೇಕಾಗುತ್ತದೆ.

ಭಾಷಾ ಬೋಧಕರು ಕನ್ನಡ ಪಾಠವನ್ನು ಬೋಧಿಸುವಾಗ ಗಟ್ಟಿವಾಚನ ಮಾಡಿದ ಬಳಿಕ ಅದೇ ವಿಷಯವನ್ನು ಅರ್ಥೈಸಿ ವಿವರಿಸುತ್ತಾರೆ. ಹಾಗೆಯೇ ಪಠ್ಯವಾಚನ ಮಾಡಿ ಪದ್ಯದ ಭಾವಾರ್ಥವನ್ನು ವಿವರಿಸುತ್ತಾರೆ. ಕನ್ನಡ ಭಾಷಾ ಬೋಧನಾ ವಿಧಾನ ಮತ್ತು ತಂತ್ರಗಳ ಕುರಿತು ಬೋಧಕರಲ್ಲಿ ಚರ್ಚಿಸಿದಾಗ ಶೇಕಡ ೨೦% ಶಿಕ್ಷಕರು ಶಿಶುಕೇಂದ್ರಿತ, ಶಿಕ್ಷಣ, ನಲಿ–ಕಲಿ ವಿಧಾನ ಆಟದ ಮೂಲಕ ಪಾಠ, ಚಟುವಟಿಕೆ ಕೇಂದ್ರಿತ ವಿಧಾನವನ್ನು ಬಳಸುತ್ತಿದ್ದೇವೆ ಎಂದು ಅಭಿಪ್ರಾಯಿಸಿದ್ದಾರೆ. ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ಬೋಧಿಸುವಾಗ ಕನ್ನಡದಲ್ಲಿ ಸಂಪೂರ್ಣವಾಗಿ ಕನ್ನಡದಲ್ಲಿ ಮಾತನಾಡುತ್ತಿಲ್ಲ. ಕನ್ನಡ, ಇಂಗ್ಲಿಷ್ ಮತ್ತು ಹಿಂದಿ ಭಾಷೆಯಲ್ಲಿಯೂ ಕಠಿಣ ಪದಗಳನ್ನು ಅರ್ಥೈಸಿ ಹೇಳುತ್ತಿದ್ದಾರೆ. ಕಾರಣ ಆಂಗ್ಲ ಮಾಧ್ಯಮ, ಸಿ.ಬಿ.ಎಸ್.ಸಿ ಮತ್ತು ಐ.ಸಿ.ಎಸ್.ಸಿ. ಶಾಲೆಗಳು ಎಂದು ಶಿಕ್ಷಕರು ವಿವರಿಸಿದ್ದಾರೆ.

ಬೋಧನಾ ಸಂದರ್ಭದಲ್ಲಿ ಭಾಷಿಕ ಸಮಸ್ಯೆಗಳು ಉಂಟಾಗುತ್ತವೆ. ಉದಾಹರಣೆಗೆ ವಿದ್ಯಾರ್ಥಿಗಳು ಅನ್ಯ ಮಾತೃಭಾಷಾ ಹಿನ್ನೆಲೆಯಿಂದ ಬಂದಿರುವುದು. ಹಾಗೆಯೇ ಶಿಕ್ಷಕರು ಅನ್ಯ ಮಾತೃ ಭಾಷಾ ಹಿನ್ನೆಲೆಯಿಂದ ಬಂದಿರುವುದು ಕಂಡುಬರುತ್ತದೆ. ತೆಲುಗು, ತಮಿಳು ಮತ್ತು ಉರ್ದು ಮಾತೃ ಭಾಷಾ ವಿದ್ಯಾರ್ಥಿಗಳ ಒಂದೇ ತರಗತಿಯಲ್ಲಿ ಬೋಧಿಸುವಾಗ ಮಾತೃ ಭಾಷೆ ಮತ್ತು ಆಂಗ್ಲ ಮಾಧ್ಯಮ ಎರಡರ ಪ್ರಭಾವ ಕನ್ನಡ ಕಲಿಕೆಗೆ ಅಡ್ಡಿಯನ್ನುಂಟು ಮಾಡುತ್ತಿದೆ ಎನ್ನುವುದು ಶಿಕ್ಷಕರ ಅಭಿಪ್ರಾಯ.

**ಭಾಷಾ ಉಚ್ಚಾರಣೆಯಲ್ಲಿನ ದೋಷಗಳು**

ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ವಿದ್ಯಾರ್ಥಿಗಳು ಕನ್ನಡವನ್ನು ಓದುವಾಗ ಮಾಡುವ ಉಚ್ಚಾರಣಾ ದೋಷಗಳನ್ನು ಈ ಮುಂದಿನಂತೆ ಗಮನಿಸಬಹುದು.

| **ಮೂಲರೂಪ** | **ಉಚ್ಚರಿಸುವರೂಪ** |
|---|---|
| ನೀಲವೇಣಿ | ನೀಳವೇಣಿ |
| ಹೋಗು | ಓಗು |
| ಗಾಳಿ | ಗಾಲಿ |
| ಸಹಾಯ | ಹೆಲ್ಪ್ |
| ಶಿಖರ | ಸಿಕರ |
| ವನ | ವಣ |
| ಸೀಮೆಸುಣ್ಣ | ಸೀಮೆಸುನ್ನ |
| ಹಸಿರು | ಅಸಿರು |
| ಜಿಲ್ಲಾಧಿಕಾರಿ | ಜಿಲಾಧಿಕಾರಿ |

ಈ ರೀತಿಯ ಉಚ್ಚಾರಣಾ ದೋಷಗಳನ್ನು ಕಾಣಬಹುದು. ಈ ರೂಪಗಳನ್ನು ಬರಹದ ಸಂದರ್ಭದಲ್ಲಿಯೂ ಗಮನಿಸಬಹುದು. ಮಾತನಾಡುವ ಸಂದರ್ಭದಲ್ಲಿ ಹೆಚ್ಚು ಬಳಕೆಯಲ್ಲಿರುವ ಪದಗಳನ್ನು ಬಳಸುವುದು ಕಂಡು ಬರುತ್ತದೆ. 'ಸೀಮೆಸುಣ್ಣ' ಎನ್ನುವ ಪದಕ್ಕೆ ಬದಲಾಗಿ 'ಬಳಪ' ಎನ್ನುವ ಪದವನ್ನು 'ಚಾಕ್‌ಪೀಸ್' ಎನ್ನುವ ಪದವನ್ನು ಬಳಸುವುದು ವಾಡಿಕೆ. ಹಾಗೆಯೇ 'ಜಿಲ್ಲಾಧಿಕಾರಿ' ಪದಕ್ಕೆ ಬದಲಾಗಿ ಡಿಸಿ ಎನ್ನುವ ಪದವನ್ನು ಆಡು ಮಾತಿನಲ್ಲಿ ಬಳಸುತ್ತೇವೆ. ಇದಕ್ಕೆ ಕಾರಣ ಆಡು ಭಾಷೆ ಮತ್ತು ಗ್ರಾಂಥಿಕ ಭಾಷೆಗೂ ಇರುವ ವ್ಯತ್ಯಾಸವಾಗಿದೆ. ಪ್ರಾದೇಶಿಕವಾಗಿ ಹೆಚ್ಚು ಬಳಸಿರುವ ಪದಗಳನ್ನೇ ತರಗತಿಯ ಒಳಗೆ ಬಳಸುವುದನ್ನು ಗಮನಿಸಬಹುದು. ಕನ್ನಡದ ಬಳಕೆಯ ಸಂದರ್ಭದಲ್ಲಿ ಆಡು ಮಾತಿನ ಬಳಕೆಯೇ ಹೆಚ್ಚು ಪ್ರಭಾವ ಬೀರುತ್ತಿರುವುದು ಕಂಡು ಬರುತ್ತದೆ. ಓದುವಾಗ ಮತ್ತು ಓದಿದ್ದನ್ನು ಬರೆಯುವ ಸಂದರ್ಭಧಲ್ಲಿ ಬರವಣಿಗೆಯ ಖಚಿತತೆಯನ್ನು ಕಾಯ್ದುಕೊಳ್ಳುತ್ತದೆ. ಆದರೆ ಮಾತನಾಡುವ ಸಂದರ್ಭದಲ್ಲಿ ಅನ್ಯ ಭಾಷೆ ಪದಗಳ ಬಳಕೆ ಸರ್ವೇ ಸಾಮಾನ್ಯವಾಗಿರುವುದನ್ನು ನಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಗಮನಿಸಬಹುದು.

- **ತರಬೇತಿಗಳು**

ಕನ್ನಡ ಭಾಷಾ ತರಬೇತಿಗಳ ಕುರಿತಾಗಿ ಪ್ರತಿಶತ ಬೋಧಕರು ಇಲಾಖೆಯಿಂದ ದ್ವಿತೀಯ ಭಾಷಾ ಬೋಧನೆಗಾಗಿ ಯಾವುದೇ ತರಬೇತಿಗಳು ನಡೆದಿಲ್ಲ ಎಂದು ಅಭಿಪ್ರಾಯವನ್ನು ತಿಳಿಸಿದ್ದಾರೆ. ಸರ್ಕಾರಿ ಶಾಲಾ ಬೋಧಕರಿಗೆ ನೀಡುತ್ತಿರುವ ತರಬೇತಿಗಳು ಖಾಸಗಿ ಶಾಲಾ ಶಿಕ್ಷಕರಿಗೆ ನಿಡುತ್ತಿಲ್ಲ. ಭಾಷಾ ಕ್ಷೇತ್ರಕ್ಕೆ ಸಂಬಂಧಿಸಿದ ಯಾವುದೇ ತರಬೇತಿಗಳು ನಡೆದಿಲ್ಲ ಎನ್ನುವ ಮಾಹಿತಿಯನ್ನು ನೀಡಿದ್ದಾರೆ. ತರಬೇತಿಗಳ ಪುನಶ್ಚೇತನ ಕಾರ್ಯಾಗಾರಗಳ ಅಗತ್ಯವಿದೆ. ತರಬೇತಿಗಳನ್ನು ಆಯೋಜಿಸುವ ಜವಾಬ್ದಾರಿಯನ್ನು ಖಾಸಗಿ ಶಿಕ್ಷಣ ಸಂಸ್ಥೆಗಳು, ಸಾರ್ವಜನಿಕ ಶಿಕ್ಷಣ ಇಲಾಖೆ ಗಮನ ವಹಿಸಬೇಕು. ತರಬೇತಿಗಳು ಆಯೋಜಿಸುವುದರಿಂದ ಶಿಕ್ಷಕರು ಪ್ರಸ್ತುತವಿರುವ ಹೊಸ ಬೋಧನಾ ವಿಧಾನಗಳನ್ನು ಕಲಿಯುತ್ತಾರೆ. ಚಟುವಟಿಕೆ ಆಧಾರಿತ ಬೋಧನೆ ಹಾಗೂ ಸಂಪನ್ಮೂಲಗಳ ಬಳಕೆ, ಕಲಿಕೋಪಕರಣಗಳ ತಯಾರಿಕೆ ಇತರೆ ಅಂಶಗಳನ್ನು ಕಲಿಯುಲು ಅನುಕೂಲವಾಗುತ್ತದೆ ಎಂಬ ಮಾಹಿತಿಯು ಸಮೀಕ್ಷೆ ಮೂಲಕ ತಿಳಿದುಬಂದಿದೆ.

ಬೋಧನೆಗೆ ಕನ್ನಡ ಭಾಷಾ ತರಬೇತಿಗಳನ್ನು ಸೇವಾನಿರತ ತರಬೇತಿಗಳನ್ನು ಪಡೆಯುವುದರಿಂದ ಉಪಯುಕ್ತತೆ ಇದೆಯೇ? ಎಂಬ ಪ್ರಶ್ನೆಗೆ ಪ್ರತಿಕ್ರಿಯೆಯನ್ನು ನೀಡಿರುವುದನ್ನು ಈ ಕೆಳಕಂಡ ಸ್ತಂಭ ರೇಖಾ ಚಿತ್ರದ ಮೂಲಕ ತಿಳಿಯಬಹುದು.




ಸ್ತಂಭ ರೇಖಾ ಚಿತ್ರ ೨

ಇದರಿಂದ ದ್ವಿತೀಯ ಭಾಷಾ ಕನ್ನಡ ತರಬೇತಿಗಳ ಮಹತ್ವವನ್ನು ಗಮನಿಸಬಹುದಾಗಿದೆ. ಈ ನಿಟ್ಟಿನಲ್ಲಿ ಶಿಕ್ಷಣ ಇಲಾಖೆ ಕಾರ್ಯ ನಿರ್ವಹಿಸಬೇಕಾಗಿದ್ದು, ಖಾಸಗಿ ಶಿಕ್ಷಣ ಸಂಸ್ಥೆಗಳ ಶಿಕ್ಷಕರಿಗೆ ತರಬೇತಿಗಳನ್ನು ಆಯೋಜಿಸುವ ಕುರಿತು ಇಲ್ಲಿ ಚಿಂತನೆ ಮಾಡಬೇಕಾಗಿದೆ.

**೪.೩ ಪರೀಕ್ಷೆ ಹಾಗೂ ಮೌಲ್ಯಮಾಪನದ ಸಮಸ್ಯೆಗಳು**

"ಮೌಲ್ಯಮಾಪನವು ಒಂದು ನಿತರಂತರ ಪ್ರಕ್ರಿಯೆಯಾಗಿದೆ. ಇದು ಶಿಕ್ಷಣದ ಅವಿಭಾಜ್ಯ ಅಂಗ. ಮೌಲ್ಯಮಾಪನವು ಬೋಧನೆ ಮತ್ತು ಕಲಿಕೆಯ ಮಹತ್ವಪೂರ್ಣವಾದ ಅಂಗವಾಗಿದೆ. ಮೌಲ್ಯಮಾಪನದ ಪ್ರಕ್ರಿಯೆಯು ಶಿಕ್ಷಣದ ಗುರಿಗಳು, ಕಲಿಕೆಯ ಅನುಭವಗಳು ಮತ್ತು ಮೌಲ್ಯಮಾಪನದ ಸಾಧನ ಮತ್ತು ತಂತ್ರಗಳನ್ನು ಒಳಗೊಂಡಿರುತ್ತದೆ. ಬೋಧನಾ ಕ್ರಿಯೆಯಿಂದ ಅಪೇಕ್ಷಿಸಿದ ಬದಲಾವಣೆಗಳನ್ನು ನಿರೀಕ್ಷಿಸಬೇಕಾದರೆ ಬೋಧಿಸುವ ವಿಷಯಗಳನ್ನು ನಿರಂತರವಾಗಿ ಮೌಲ್ಯಮಾಪನ ಮಾಡಬೇಕು ಮತ್ತು ಮೇಲ್ವಿಚಾರಣೆ ಮಾಡಬೇಕು. ಮೌಲ್ಯಮಾಪನವು ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಯ ಮೂಲಕ ಅವರ ವರ್ತನೆಯಲ್ಲಾದ ಪರಿವರ್ತನೆಗಳನ್ನು ಕುರಿತು ಪುರಾವೆಗಳನ್ನು ಸಂಗ್ರಹಿಸುವ ಮತ್ತು ಅರ್ಥೈಸುವ ಪ್ರಕ್ರಿಯೆಯಾಗಿದೆ".[೪]

ಕೊಠಾರಿ ಶಿಕ್ಷಣ ಆಯೋಗದ ಪ್ರಕಾರ, ಮೌಲ್ಯಮಾಪನವು ವಿದ್ಯಾರ್ಥಿಗಳ ಅಭ್ಯಾಸದ ಮೇಲೂ ಶಿಕ್ಷಣದ ಬೋಧನಾ ವಿಧಾನಗಳ ಮೇಲೂ ಹೆಚ್ಚು ಪ್ರಭಾವವನ್ನು ಬೀರುತ್ತದೆ. ಅಲ್ಲದೆ ಮೌಲ್ಯಮಾಪನವು ಶೈಕ್ಷಣಿಕ ಸಾಧನೆಯನ್ನು ಮಾಪನ ಮಾಡುವುದಕ್ಕೆ ಸಹಾಯ ಮಾಡುವುದಲ್ಲದೆ ಅದನ್ನು ಸುಧಾರಿಸಲು ನೆರವಾಗುತ್ತದೆ.[೫]

ಶೈಕ್ಷಣಿಕ ಉದ್ದೇಶಗಳು ಎಷ್ಟರಮಟ್ಟಿಗೆ ಸಾಧಿಸಲ್ಪಟ್ಟಿವೆ? ವಿದ್ಯಾರ್ಥಿಗಳಿಗೆ ಒದಗಿಸಿರುವ ಕಲಿಕಾ ಅನುಭವಗಳ ಪರಿಣಾಮವೇನು? ಗುರಿಗಳನ್ನು ಈಡೇರಿಸುವಲ್ಲಿ ಸಹಾಯಕವಾಗಿವೆಯೇ ಎಂಬುದನ್ನು ಮೌಲ್ಯಮಾಪನ ಮಾಡುವುದು. ಇದೊಂದು ವ್ಯಾಪಕ ಮತ್ತು ನಿರಂತರ ಪ್ರಕ್ರಿಯೆಯಾಗಿದ್ದು, ಬೋಧನಾ ಉದ್ದೇಶಗಳು, ಬೋಧಿಸುವ ವಿಧಾನಗಳು, ಕಲಿಕಾ ಅನುಭವಗಳು ಮತ್ತು ಮೌಲ್ಯಮಾಪನ ಮಾಡುವ ಪ್ರಕ್ರಿಯೆಯನ್ನು ಒಳಗೊಂಡಿರುತ್ತದೆ. ಕಲಿಕಾರ್ಥಿಗಳ ಶೈಕ್ಷಣಿಕ ಸಾಧನೆಯನ್ನು ಗುಣಾತ್ಮಕವಾಗಿ ಮತ್ತು ಪರಿಮಾಣಾತ್ಮಕವಾಗಿ ಪರೀಕ್ಷಿಸುವ ಕ್ರಿಯೆಯನ್ನು ಒಳಗೊಂಡಿದೆ. ವಿದ್ಯಾರ್ಥಿಗಳು ಏನನ್ನು ಕಲಿತ್ತಿದ್ದಾರೆ? ಹೇಗೆ ಕಲಿತ್ತಿದ್ದಾರೆ? ಎಷ್ಟನ್ನು ಕಲಿತ್ತಿದ್ದಾರೆ? ಯಾವ ವಿಷಯವನ್ನು ಎಷ್ಟರ ಮಟ್ಟಿಗೆ ಕಲಿತ್ತಿದ್ದಾರೆ? ಎನ್ನುವ ಅಂಶಗಳನ್ನು ಭಾಷಾ ಕೌಶಲಗಳು, ಸಾಹಿತ್ಯ, ಅಭಿರುಚಿ ಮತ್ತು ವಿಷಯಾಂಶಗಳನ್ನು ಗಮನದಲ್ಲಿಟ್ಟುಕೊಂಡು ಮಾಪನ ಮಾಡುವ ಪ್ರಕ್ರಿಯೆಯಾಗಿದೆ. ನಿರಂತರ ಮತ್ತು ವ್ಯಾಪಕ

ಮೌಲ್ಯಮಾಪನವಾಗಿದ್ದು, ವಿದ್ಯಾರ್ಥಿಗಳ ವ್ಯಕ್ತಿತ್ವ, ಅವರ ಅಭ್ಯಾಸ, ಭಾವನಾತ್ಮಕ ಸಂಬಂಧಗಳು, ಸಮಾಜದಲ್ಲಿ ಅವರ ಪ್ರತಿಕ್ರಿಯೆ, ದೈಹಿಕ ಬೆಳವಣಿಗೆ, ಸಹಪಠ್ಯ ಚಟುವಟಿಕೆಗಳಲ್ಲಿ ಹಾಗೂ ಕ್ರೀಡಾ ಕ್ಷೇತ್ರದಲ್ಲಿ ಅವರ ಪಾಲ್ಗೊಳ್ಳುವಿಕೆ ಹೀಗೆ ವಿವಿಧ ರೀತಿಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಮೌಲ್ಯಮಾಪನ ಮಾಡುವುದು. ಹಾಗೆಯೇ ವಿದ್ಯಾರ್ಥಿಗಳ ವರ್ತನೆಯಲ್ಲಿ ಬದಲಾವಣೆ ತರುವ ನಿಟ್ಟಿನಲ್ಲಿ ಸಲಹೆ ಮತ್ತು ಮಾರ್ಗದರ್ಶನ ಮಾಡುವುದಾಗಿದೆ.

**ವ್ಯಾಖ್ಯೆಗಳು**

ಜಾನ್.ಯು.ಮೈಕೇಲ್ಸ್ ಅವರ ಪ್ರಕಾರ "ಮೌಲ್ಯಮಾಪನದ ಪ್ರಕ್ರಿಯೆಯು ಶಿಕ್ಷಣದ ಗುರಿಗಳನ್ನು ಎಷ್ಟರ ಮಟ್ಟಿಗೆ ಸಾಧಿಸಲಾಗಿದೆ ಎಂಬುದನ್ನು ನಿರ್ಧರಿಸುವುದಾಗಿದೆ. ಇದು ಶಿಕ್ಷಕರು, ಮಕ್ಕಳು ಮತ್ತು ಇತರ ಹಿತ ಚಿಂತಕರು ತಮ್ಮದೇ ಆದ ಮಾಹಿತಿಗಳನ್ನು ತಿಳಿಸಲು ಬಳಸಿಕೊಂಡ ನಿಯಮಗಳನ್ನು ಒಳಗೊಂಡಿದೆ."[೬]

ಜೇಮ್ಸ್.ಯು.ಲೀ ಅವರ ಪ್ರಕಾರ "ಮೌಲ್ಯಮಾಪನದ ಉದ್ದೇಶ ವಿದ್ಯಾರ್ಥಿಗಳ ಕಲಿಕೆಗೆ ಉತ್ತಮ ರೀತಿಯ ಮಾರ್ಗದರ್ಶನವನ್ನು ನೀಡುವುದಲ್ಲದೆ ಯೋಗ್ಯ ರೀತಿಯಿಂದ ಅವರ ಪ್ರಗತಿಗೆ ಸಹಾಯಕವಾಗಿರುವುದು. ಹೀಗೆ ಮೌಲ್ಯಮಾಪನವು ಋಣಾತ್ಮಕ ಪ್ರಕ್ರಿಯೆಯಾಗಿರದೆ ಧನಾತ್ಮಕ ಪ್ರಕ್ರಿಯೆಯಾಗಿದೆ!".

**ಕನ್ನಡ ಭಾಷಾ ಬೋಧನೆಯಲ್ಲಿ ಮೌಲ್ಯಮಾಪನದ ಮಹತ್ವ ಮತ್ತು ಉದ್ದೇಶಗಳು**

ಕೊಠಾರಿ ಆಯೋಗವು ಮೌಲ್ಯಮಾಪನದ ಕುರಿತು ಈ ರೀತಿಯಲ್ಲಿ ವಿವರಿಸಿದೆ. ಮೌಲ್ಯಮಾಪನವು ಪರೀಕ್ಷೆಗಿಂತಲೂ ಬಹಳ ವ್ಯಾಪಕವಾಗಿದೆ. ಪರೀಕ್ಷೆಯು ಮೌಲ್ಯಮಾಪನದ ಒಂದು ಭಾಗ. ಪರೀಕ್ಷೆಯು ಮಗುವಿನ ಕೇವಲ ವಿಷಯ ಜ್ಞಾನವನ್ನು ಅಳೆದರೆ, ಮೌಲ್ಯಮಾಪನವು ಮಗುವಿನ ಪ್ರಗತಿಗೆ ಸಂಬಂಧಪಟ್ಟಂತಹ ಸರ್ವ ಸಂಗತಿಗಳನ್ನು ಅಳೆಯುವುದು. ವಿದ್ಯಾರ್ಥಿಯ ದೈಹಿಕ, ಮಾನಸಿಕ ಹಾಗೂ ಭಾವನಾತ್ಮಕ ಪ್ರಗತಿ, ಅವನ ಗುಣ ಲಕ್ಷಣಗಳನ್ನು ಸಹ ಅದು ಅಳತೆ ಮಾಡುತ್ತದೆ.

- ಮೌಲ್ಯಮಾಪನವು ಭಾಷಾ ಬೋಧನಾ ಉದ್ದೇಶಗಳನ್ನು ಈಡೇಸಲು ಸಹಾಯ ಮಾಡುತ್ತದೆ.
- ಮೌಲ್ಯಮಾಪನವು ಶಿಕ್ಷಕನ ಬೋಧನೆಯ ಗುಣಮಟ್ಟವನ್ನು ಸುಧಾರಿಸುತ್ತದೆ. ಬೋಧನಾ ಗುರಿಗಳು, ಕೊನೆಯ ಅನುಭವಗಳು ಮತ್ತು ಬೋಧನಾ ವಿಧಾನಗಳನ್ನು ರೂಪಿಸಲು, ಬೋಧನಾ ಗುಣಮಟ್ಟವನ್ನು ಸುಧಾರಿಸಲು ಸಹಾಯ ಮಾಡುತ್ತದೆ.

- ವಿದ್ಯಾರ್ಥಿಗಳ ಪರಿಣಾಮಕಾರಿ ಕಲಿಕೆಯನ್ನು ಪ್ರಚೋದಿಸುತ್ತದೆ.
- ಪಠ್ಯಕ್ರಮವನ್ನು ಪುನರ್‌ರಚಿಸಲು ಸಹಾಯಕವಾಗುತ್ತದೆ.
- ಮೌಲ್ಯಮಾಪನವು ಶಿಕ್ಷಕರಲ್ಲಿ ಕ್ರಿಯಾ ಸಂಶೋಧನೆಯನ್ನು ಕೈಗೊಳ್ಳಲು ಪ್ರೇರೇಪಿಸುತ್ತದೆ.
- ವಿದ್ಯಾರ್ಥಿಗಳನ್ನು ಶೈಕ್ಷಣಿಕ ಸಾಮರ್ಥ್ಯಗಳನ್ನು ಪರೀಕ್ಷಿಸುವುದು.
- ವಿದ್ಯಾರ್ಥಿಗಳ ಸಾಮರ್ಥ್ಯಗಳು ಮತ್ತು ದೌರ್ಬಲ್ಯಗಳನ್ನು ಗುರ್ತಿಸಿ ಉತ್ತಮ ಕಲಿಕೆಯನ್ನು ನಿರ್ದೇಶಿಸಲು ಸಹಾಯ ಮಾಡುತ್ತದೆ.
- ವಿದ್ಯಾರ್ಥಿಗಳ ಸಾಧನೆಗಳು, ವಿಶೇಷ ಯೋಗ್ಯತೆಗಳು ಸಾಮರ್ಥ್ಯಗಳನ್ನು ಮತ್ತು ಅವರ ಒಲವು ಮನೋರಂಜನೆಗಳನ್ನು ಕಂಡು ಹಿಡಿಯುವುದು. ಕಲಿಕಾ ಕೌಶಲಗಳಾದ ವಾಚನಾ ಕೌಶಲ, ಮಾತುಗಾರಿಕೆ, ರಸಾಸ್ವಾದನೆ, ಆಲಿಸುವಿಕೆ ಮೊದಲಾದ ಕೌಶಲ್ಯಗಳಲ್ಲಿಯ ಸಾಧನೆ ಮತ್ತು ದೌರ್ಬಲ್ಯಗಳನ್ನು ಕಂಡು ಹಿಡಿದು ಅಭಿವೃದ್ಧಿ ಪಡಿಸಲು ಸೂಕ್ತ ಮಾರ್ಗದರ್ಶನ ನೀಡುತ್ತದೆ.

ಮೌಲ್ಯಮಾಪನ ಪ್ರಕ್ರಿಯೆಯಲ್ಲಿ ಪರೀಕ್ಷೆಗಳು ಪ್ರಧಾನ ಪಾತ್ರ ವಹಿಸುತ್ತವೆ. ಪ್ರಾಥಮಿಕ, ಹಿರಿಯ ಪ್ರಾಥಮಿಕ ಹಾಗೂ ಪ್ರೌಢ ಹಂತದಲ್ಲಿ ಸರ್ಕಾರ ಕೈಗೆತ್ತಿಕೊಂಡಿರುವ ಪರೀಕ್ಷಾ ವಿಧಾನಗಳು ಭಿನ್ನವಾಗಿವೆ. ಅದರೆ ಅವುಗಳ ಸ್ವರೂಪದಲ್ಲಿ ಭಿನ್ನತೆಯಿಲ್ಲದಿರುವುದನ್ನು ಗಮನಿಸಬಹುದು. ಪ್ರಮುಖವಾಗಿ ಪರೀಕ್ಷೆಗಳನ್ನು ಮೂರು ಪ್ರಕಾರ ವಿಂಗಡಿಸಬಹುದು.




**ಮೌಖಿಕ ಪರೀಕ್ಷೆಗಳು**

ಶಿಕ್ಷಕರು ವಿದ್ಯಾರ್ಥಿಯ ಎದುರು ಮುಖಾಮುಖಿಯಾಗಿ ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಪಡೆಯುವ ವಿಧಾನವಾಗಿದೆ. ಈ ವಿಧಾನವನ್ನು ಪ್ರಾಥಮಿಕ ಮತ್ತು ಮಾಧ್ಯಮಿಕ ಹಂತಗಳಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ.

**ಲಿಖಿತ ಪರೀಕ್ಷೆಗಳು**

ಹೆಸರೇ ಸೂಚಿಸುವಂತೆ ಲಿಖಿತ ಪರೀಕ್ಷೆಗಳು ಬರವಣಿಗೆಯ ರೂಪದಲ್ಲಿರುವಂತಹ ಪರೀಕ್ಷೆಗಳಾಗಿವೆ. ಇವುಗಳನ್ನು ಪ್ರಮುಖವಾಗಿ ಪ್ರಬಂಧ, ಲಘು ಉತ್ತರ, ವಸ್ತುನಿಷ್ಠ ಮಾದರಿ ಎಂದು ವಿಭಾಗಿಸಿಕೊಳ್ಳಲಾಗಿದೆ.[೭]

೨೦೧೧-೧೨ನೇ ಸಾಲಿನಲ್ಲಿ ಕರ್ನಾಟಕ ಸರ್ಕಾರ ಪರೀಕ್ಷೆಯ ಕಲಿಕೆಯ ಗುಣಮಟ್ಟವನ್ನು ಕಾಯ್ದುಕೊಳ್ಳಲು ಹೊಸ ಪರೀಕ್ಷಾ ವಿಧಾನಗಳನ್ನು ಜಾರಿಗೆ ತಂದಿತು. ಅದು ಸೆಮಿಸ್ಟರ್ ಪರೀಕ್ಷಾ ಪದ್ಧತಿ. ಇಲ್ಲಿ ನಿರಂತರ ಮತ್ತು ವ್ಯಾಪಕ ಮೌಲ್ಯಮಾಪನವನ್ನು ನಿರ್ವಹಿಸಲಾಗುತ್ತದೆ. ಮೊದಲ ಹಂತದಲ್ಲಿ ಜೂನ್ ತಿಂಗಳಿನಿಂದ ಅಕ್ಟೋಬರ್ ಮೊದಲನೇ ಶೈಕ್ಷಣಿಕ ಅವಧಿ, ಅಕ್ಟೋಬರ್ ತಿಂಗಳಿಂದ ಮಾರ್ಚ್ ಎರಡನೇ ಶೈಕ್ಷಣಿಕ ಅವಧಿ ಎಂದು ವಿಂಗಡಿಸಿದೆ. ಹಿರಿಯ ಪ್ರಾಥಮಿಕ ಹಂತದಲ್ಲಿ ರೂಪಣಾತ್ಮಕ ಮೌಲ್ಯಮಾಪನ ೧ ಎಂದು ವಿಂಗಡಿಸಲಾಗಿದೆ. ಅದರಲ್ಲಿ ೧೦+೧೦+೩೦= ೫೦ ಅಂಕಗಳು, ಆರು ವಿಷಯಗಳು ಸೇರಿ ೬೦೦ ಅಂಕಗಳು ಮತ್ತು ಶ್ರೇಣಿಗಳನ್ನು ನೀಡುವ ಪದ್ಧತಿ ಪ್ರಸ್ತುತ ಬಳಸಲಾಗುತ್ತಿದೆ. ಸಹ ಪಠ್ಯ ಚಟುವಟಿಕೆಗಳಲ್ಲಿ ಭಾವನಾತ್ಮಕ ಸಾಮಾಜಿಕ ಕೌಶಲಗಳು, ಸಂಘಟನಾ ಕೌಶಲ, ವೈಜ್ಞಾನಿಕ ಕೌಶಲ, ಲಲಿತಕಲೆ, ಸೃಜನಶೀಲತೆ, ಮನೋಧೋರಣೆ, ಮೌಲ್ಯಗಳು ಇವೆಲ್ಲಾ ಅಂಶಗಳನ್ನು ಗಮನಿಸಿ ವಿದ್ಯಾರ್ಥಿಗಳಿಗೆ ಶ್ರೇಣಿಗಳನ್ನು ನೀಡುವ ಪದ್ಧತಿ ರೂಢಿಯಲ್ಲಿದೆ.[೮] ಮೌಲ್ಯಮಾಪನವು ಭಾಷಾ ಶೈಲಿ, ಪದರಚನೆ, ವಾಕ್ಯರಚನೆ ಎಲ್ಲವನ್ನು ಒಳಗೊಂಡಿದೆ. ಇಂತಹ ಮೌಲ್ಯಮಾಪನ ಕ್ರಿಯೆಯೂ ಬೋಧಕರಿಗೆ ದೊಡ್ಡ ಸಮಸ್ಯೆಯಾಗಿ ತಲೆದೋರಿದೆ. ಶಿಕ್ಷಣ ವ್ಯವಸ್ಥೆ ಇಂದು ಯಾಂತ್ರಿಕವಾಗಿದೆ. ಮೌಲ್ಯಮಾಪನ ಪ್ರಕ್ರಿಯೆಯು ಕೇವಲ ಪರೀಕ್ಷೆ ಎಂಬ ಪರಿಕಲ್ಪನೆಗೆ ಸೀಮಿತಗೊಳಿಸಲಾಗಿದೆ. ಶಿಕ್ಷಣದ ಪ್ರಮುಖ ಕಾರ್ಯ ಪರೀಕ್ಷೆಗಳಲ್ಲಿ ಹೆಚ್ಚು ಅಂಕಗಳನ್ನು ಗಳಿಸುವಂತೆ ಕಲಿಕಾರ್ಥಿಗಳಿಗೆ ತರಬೇತಿ ನೀಡುವುದೇ ಆಗಿದೆ. ನಮ್ಮ ಆಡಳಿತ ಪದ್ಧತಿ, ವೃತ್ತಿ ನೇಮಕಾತಿ ಪದ್ಧತಿಗಳ ಸ್ವರೂಪ ಈ ಕೊರತೆಗಳಿಗೆ ಕಾರಣವಾಗಿದೆ. ಒಟ್ಟಾರೆಯಾಗಿ ಮೌಲ್ಯಮಾಪನವು ಇಂದು ಕೇವಲ ಪರೀಕ್ಷೆ ಅಂಕಗಳು, ಶ್ರೇಣಿಗಳಿಗೆ ಮಾತ್ರ ಸೀಮಿತವಾಗಿದೆ. ಈ ದೃಷ್ಟಿಕೋನ ಬದಲಾಗಬೇಕೆಂಬುದು ಶಿಕ್ಷಕರ ಅಭಿಪ್ರಾಯವೂ ಆಗಿದೆ.

ವಿದ್ಯಾರ್ಥಿಗಳು ಎಷ್ಟರ ಮಟ್ಟಿಗೆ ಕಲಿತಿದ್ದಾರೆ ಎಂದು ತಿಳಿದುಕೊಳ್ಳಲು ಅವರ ಕಲಿಕೆಯನ್ನು ಪರೀಕ್ಷೆ ಮತ್ತು ಮೌಲ್ಯಮಾಪನ ಎಂಬ ವಿಧಾನಗಳಿಂದ ತಿಳಿಯಲು ಸಾಧ್ಯವಾಗುತ್ತದೆ. ಭಾಷಾ ಬೋಧನೆ ಮತ್ತು ಕಲಿಕೆಯ ಮೌಲ್ಯಮಾಪನವು ಇತರೆ

ವಿಷಯಗಳ ಕಲಿಕೆಗಿಂತ ಪ್ರತ್ಯೇಕವಾಗಿರುತ್ತದೆ. ವಿದ್ಯಾರ್ಥಿಗಳ ಭಾಷಾ ಕಲಿಕೆಯ ಸಾಮರ್ಥ್ಯವನ್ನು ಅರಿತುಕೊಳ್ಳಬೇಕಾದರೆ ಭಾಷಾ ಪ್ರಭುತ್ವದ ಪರೀಕ್ಷೆಗೆ ಹೆಚ್ಚು ಒತ್ತು ನೀಡಬೇಕು. ಮಕ್ಕಳ ಭಾಷೆಯನ್ನು ಪರೀಕ್ಷೆ ಮಾಡುವಾಗ ವಿಷಯದ ಪರೀಕ್ಷೆಗಿಂತಲೂ ಆ ವಿದ್ಯಾರ್ಥಿಯು ಹೇಗೆ ಭಾಷೆಯನ್ನು ಬಳಕೆ ಮಾಡಿದ್ದಾನೆ. ವಾಕ್ಯರಚನೆ, ಪದಗಳ ಜೋಡಣೆ, ಭಾಷೆಯಲ್ಲಿ ತಪ್ಪುಗಳಿಲ್ಲದಂತೆ ವ್ಯಾಕರಣ ಬದ್ಧವಾಗಿ ಬರೆದಿದ್ದಾನೆಯೇ ಎಂಬುದನ್ನು ಪರೀಕ್ಷಿಸಬೇಕಾಗುತ್ತದೆ. ವಿದ್ಯಾರ್ಥಿಯು ಓದುವಾಗ ಮತ್ತು ಬರೆಯುವಾಗ ತಪ್ಪುಗಳನ್ನು ಮಾಡಲು ಕಾರಣಗಳೇನು? ಎಂಬುದನ್ನು ಗಮನಿಸಬೇಕು. ವಿದ್ಯಾರ್ಥಿಯು ಪರೀಕ್ಷೆಯಲ್ಲಿ ತಪ್ಪು ಮಾಡದಂತೆ ಶಿಕ್ಷಕರು ಎಚ್ಚರವಹಿಸಿ ಆ ಪರೀಕ್ಷೆಯಲ್ಲಿ ಮಾಡಿರುವ ದೋಷಗಳನ್ನು ವಿವರಿಸಿ ಹೇಳಿ ಮುಂದೆ ಅಂತಹ ತಪ್ಪುಗಳು ಆಗದಂತೆ ತಿದ್ದಿಕೊಳ್ಳಲು ಸೂಚಿಸಬೇಕು. ಆಗ ಮಾತ್ರ ಮಕ್ಕಳ ಭಾಷಾ ಕಲಿಕೆಯಲ್ಲಿ ಆಗುವ ತಪ್ಪುಗಳನ್ನು ನಿವಾರಣೆ ಮಾಡಲು ಸಾಧ್ಯ. ಸರ್ಕಾರವು ಅನೇಕ ಪರೀಕ್ಷಾ ವಿಧಾನಗಳನ್ನು ಪ್ರಯೋಗ ಮಾಡುತ್ತಲೇ ಇದೆ.

ವಿದ್ಯಾರ್ಥಿಗಳಲ್ಲಿ ಪರೀಕ್ಷಾ ಭಯವನ್ನು ಉಂಟು ಮಾಡುವ ರೀತಿಯಲ್ಲಿ ಮಾನಸಿಕವಾಗಿ ಕುಗ್ಗುವಂತೆ ಮಾಡಬಾರದು. ಇನ್ನು ಗಣಿತ ವಿಷಯದಲ್ಲಿ ವಿದ್ಯಾರ್ಥಿಗಳು ಭಯ ಪಡುವಂತೆ ಬೋಧಕರು ನಿರುತ್ಸಾಹಗೊಳಿಸಬಾರದು. ಅವರಲ್ಲಿ ಧೈರ್ಯವನ್ನು ತುಂಬುವಂತಹ ಕಾರ್ಯವನ್ನು ಮಾಡಬೇಕಾಗಿದೆ. ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲಾ ಮಕ್ಕಳಿಗೆ ಭಾಷಾ ಸಾಮರ್ಥ್ಯವನ್ನುಂಟು ಮಾಡುವ ರೀತಿಯಲ್ಲಿ ಹಲವಾರು ಭಾಷಾ ಚಟುವಟಿಕೆಗಳನ್ನು ಮಕ್ಕಳಿಗೆ ಕಲಿಸಿದಾಗ ಮಕ್ಕಳ ಓದುಗಾರಿಕೆ ಹಾಗೂ ಬರವಣಿಗೆಯಲ್ಲಿನ ತಪ್ಪುಗಳನ್ನು ಸುಧಾರಿಸಲು ಸಾಧ್ಯವಾಗುತ್ತದೆ. ಆದ್ದರಿಂದ ಪರೀಕ್ಷೆ ಮತ್ತು ಮೌಲ್ಯಮಾಪನ ಎಂಬ ಪದ್ಧತಿಗಳು ಧನಾತ್ಮಕವಾಗಿ ರೂಪುಗೊಳ್ಳಬೇಕಾಗಿದೆ ಎಂಬುದನ್ನು ಶಿಕ್ಷಣ ಇಲಾಖೆ ಗಮನಿಸಬೇಕಾಗಿದೆ.

**೪.೪ ಶಿಕ್ಷಕರ ಭಾಷಿಕ ಸಮಸ್ಯೆಗಳು**

ದ್ವಿತೀಯ ಭಾಷೆಯಾಗಿ ಕನ್ನಡ ಭಾಷೆಯನ್ನು ಕಲಿಯುವ ಮಕ್ಕಳ ಕಲಿಕೆಯಲ್ಲಿ ಉಂಟಾಗುವ ಸಮಸ್ಯಗಳಿಗೆ ಶಿಕ್ಷಕರು ಭಾಷಿಕ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಇಂಗ್ಲಿಷ್ ಮಾಧ್ಯಮ ಶಾಲೆಗಳಲ್ಲಿ ಕೇವಲ ಕನ್ನಡ ಮಾತೃ ಭಾಷೆಯುಳ್ಳ ಮಕ್ಕಳು ಇರುವುದಿಲ್ಲ. ಈ ಶಾಲೆಗಳಲ್ಲಿ ಕನ್ನಡ, ತೆಲುಗು, ಹಿಂದಿ, ಉರ್ದು, ತಮಿಳು, ಮಲೆಯಾಳಂ ಭಾಷೆಗಳ ಮಕ್ಕಳು ಓದುತ್ತಿರುವುದರಿಂದ ಆ ಮಕ್ಕಳಿಗೆ ಅವರ ಮಾತೃ ಭಾಷೆಯ ಮಟ್ಟಕ್ಕೆ ಇಳಿದು

ಕನ್ನಡವನ್ನು ಬೋಧಿಸುವುದು ಕಷ್ಟವಾಗುತ್ತದೆ. ಆಗ ಶಿಕ್ಷಕರು ಭಾಷಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅಂದರೆ ವಿವಿಧ ಸಾಮಾಜಿಕ ಹಿನ್ನೆಲೆಯಿಂದ ಬಂದ ಮಕ್ಕಳು ಆ ಸಮುದಾಯದ ಭಾಷೆಯ ಪ್ರಭಾವನ್ನು ಕನ್ನಡ ಕಲಿಕೆಯಲ್ಲಿ ಬಳಸುವುದರಿಂದ ಅನೇಕ ಸಮಸ್ಯೆಗಳು ಉಂಟಾಗಿ ಕನ್ನಡ ಕಲಿಸುವಾಗ, ಬೋಧಿಸುವಾಗ ಶಿಕ್ಷಕರು ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಗಮನಿಸಬಹುದು.

ಸರ್ಕಾರವು ಈಗಾಗಲೆ ಶಿಕ್ಷಕರನ್ನು ಹೆಚ್ಚು ಬೋಧಕೇತರ ಕೆಲಸದಲ್ಲಿ ತೊಡಗಿಸಿ ಕೊಳ್ಳುತ್ತಿರುವುದರಿಂದ ಅಂದರೆ ಚುನಾವಣೆ, ಗಣತಿ, ಬಿಸಿಯೂಟ ಇತರೆ ಹಲವಾರು ಕೆಲಸಗಳಲ್ಲಿ ತೊಡಗಿಸಿಕೊಂಡಿದೆ. ಇದರಿಂದ ಶಿಕ್ಷಕರು ಬೋಧನಾ ಕಾರ್ಯದಲ್ಲಿ ಹೆಚ್ಚು ತೊಡಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಸರ್ಕಾರವು ಯೋಜನೆಗಳ ಅನುಷ್ಠಾನಗೊಳಿಸುವಲ್ಲಿ ಉಂಟಾಗುವ ಸಮಸ್ಯೆಗಳನ್ನು ಗುರುತಿಸಿ ಪರಿಹರಿಸಬೇಕು. ಅಲ್ಲದೇ ಶಿಕ್ಷಕರು ಕೆಲಸದ ಹೊರೆಯನ್ನು ಕಡಿಮೆ ಮಾಡಿ ಬೋಧನೆಯಲ್ಲಿ ಅವರನ್ನು ಹೆಚ್ಚು ತೊಡಗುವಂತೆ ಮಾಡಬೇಕು. ವಿದ್ಯಾರ್ಥಿಗಳಿಗೆ ಪರಿಹಾರ ಬೋಧನೆ, ಓದುವೆ ನಾನು, ಕಲಿಕೆಯ ಕನಿಷ್ಠ ಮಟ್ಟ ಇಂತಹ ಉತ್ತಮ ಯೋಜನೆಗಳನ್ನು ಅನುಷ್ಠಾನಗೊಳಿಸಿದಲ್ಲಿ ಯೋಜನೆಗಳು ಸಫಲವಾಗುತ್ತವೆ.

ಬೋಧನೆ ಮತ್ತು ಕಲಿಕಾ ಸಾಮಗ್ರಿಗಳ ಕೊರತೆ: ವಿದ್ಯಾರ್ಥಿಗಳಿಗೆ ಪರಿಣಾಮಕಾರಿಯಾಗಿ ಬೋಧನೆ ಮಾಡಲು ಮತ್ತು ಕಲಿಕಾ ದೋಷಗಳನ್ನು ಕಡಿಮೆ ಮಾಡಲು ಉತ್ತಮವಾಗಿರುವಂತಹ ಬೋಧನೆ ಮತ್ತು ಕಲಿಕಾ ಸಾಮಗ್ರಿಗಳ ಕೊರತೆಯನ್ನು ಅನುಭವಿಸುತ್ತಿದ್ದಾರೆ. ಇದು ಎಲ್ಲ ಶಾಲೆಗಳಲ್ಲಿ ಇಲ್ಲ. ಕೆಲವೊಂದು ಶಾಲೆಗಳಲ್ಲಿ ಮಾತ್ರ ಕಂಡು ಬರುತ್ತದೆ. ಮಗುವಿಗೆ ಕಲಿಕಾ ಸಾಮಗ್ರಿಗಳ ಮೂಲಕ ಮತ್ತು ಪ್ರಾತ್ಯಕ್ಷಿಕೆಯ ಮೂಲಕ ವಿಷಯವನ್ನು ತಿಳಿಸಿದಾಗ ವಿದ್ಯಾರ್ಥಿಗಳು ಆ ವಿಷಯವನ್ನು ಗ್ರಹಿಸಿಕೊಳ್ಳುತ್ತಾರೆ. ಸರ್ಕಾರವು ಒದಗಿಸಿರುವ ಹಲವಾರು ಕಲಿಕಾ ಸಾಮಗ್ರಿಗಳನ್ನು ಶಿಕ್ಷಕರು ಸಮರ್ಪಕವಾಗಿ ಬಳಸಿಕೊಳ್ಳಬೇಕು. ಅಲ್ಲದೆ ಭಾಷಾ ಪ್ರಯೋಗ ಶಾಲೆಯನ್ನು ವ್ಯವಸ್ಥಿತವಾಗಿ ಶಿಕ್ಷಕರು ಉಪಯೋಗಿಸಿಕೊಳ್ಳಬೇಕು. ಕಲಿಕಾ ಸಾಮಗ್ರಿಗಳು ವಿದ್ಯಾರ್ಥಿಗಳಿಗೆ ತಲುಪಿದಾಗ ಮಾತ್ರ ಸರ್ಕಾರದ ಯೋಜನೆಗಳು ಸಾರ್ಥಕವಾಗುತ್ತವೆ.

ಕನ್ನಡ ಭಾಷೆಯ ಮೇಲೆ ಆರಂಭದಿಂದ ಸಂಸ್ಕೃತದ ಪ್ರಭಾವ ಮತ್ತು ಪ್ರೇರಣೆ ಇದೆ. ಇತ್ತೀಚೆಗೆ ಅನ್ಯ ಭಾಷಾ ಪ್ರಭಾವ, ಅನ್ಯ ಮಾಧ್ಯಮಗಳ ಪ್ರಭಾವ ಕಂಡು ಬರುತ್ತಿದೆ. ಹೀಗಾಗಿ ಶಿಕ್ಷಕರಿಗೆ ಬೋಧನಾ ಸಮಸ್ಯೆ ಎದುರಾಗುತ್ತಿದೆ. ಪ್ರತಿಶತ ಶಿಕ್ಷಕರು

ಅನ್ಯ ಮಾತೃ ಭಾಷಾ ಹಿನ್ನೆಲೆಯಿಂದ ಬಂದಿರುವುದೇ ಪ್ರಮುಖ ಕಾರಣವಾಗಿದೆ. ಪ್ರಾದೇಶಿಕವಾಗಿ ಭಿನ್ನ ಭಾಷೆಯನ್ನಾಡುವ ಬಳ್ಳಾರಿ ನಗರ ಪ್ರದೇಶದಲ್ಲಿ ಹೆಚ್ಚು ಪ್ರಭಾವ ಬೀರುತ್ತಿರುವ ಭಾಷೆ ತೆಲುಗು. ಶಾಲೆಗಳಲ್ಲಿ ಬೋಧನಾ ವೃತ್ತಿಯಲ್ಲಿ ತೊಡಗಿರುವ ಶಿಕ್ಷಕರ ಮಾತೃಭಾಷೆ ತೆಲುಗು ಮತ್ತು ಉರ್ದು. ಹೀಗಾಗಿ ಕನ್ನಡ ಭಾಷಾ ಬೋಧನಾ ಸಂದರ್ಭದಲ್ಲಿ ಶಿಕ್ಷಕರ ಉಚ್ಚರಣಾ ದೋಷಗಳನ್ನು ಗಮನಿಸಲಾಗಿದೆ. ಆಂಗ್ಲ ಮಾಧ್ಯಮದ ಹಿನ್ನೆಲೆಯಲ್ಲಿ ಇರುವ ಶಾಲೆಗಳಲ್ಲಿ ಕನ್ನಡ ಮಾತೃ ಭಾಷೆ ಇಲ್ಲದ ಶಿಕ್ಷಕರು ಕನ್ನಡವನ್ನು ಬೋಧಿಸುವ ಸಂದರ್ಭದಲ್ಲಿ ಬರಹ ರೂಪದಲ್ಲಿ ಮತ್ತು ಉಚ್ಚರಣಾ ಸಂದರ್ಭದಲ್ಲಿ ಭಾಷಾ ಸಮಸ್ಯೆಗಳಾಗಿರುವುದನ್ನು ಅಧ್ಯಯನದ ಮಾಹಿತಿ ಸಂದರ್ಭದಲ್ಲಿ ಗಮನಿಸಲಾಗಿದೆ.

**ಶಿಕ್ಷಕರ ಬರವಣಿಗೆಯ ಸಮಸ್ಯೆ**

ಅಪೂರ್ಣ ವಾಕ್ಯಗಳನ್ನು ಬರೆಯುವುದು.

- ಮಕ್ಕಳ ಕಲಿಕಾ ಆದ್ಯತೆಯನ್ನು
- ಆಂಗ್ಲ ಭಾಷೆಯ ಮಟ್ಟಕ್ಕೆ ಬೆಳೆಸಲು ಅವಶ್ಯಕ ಉತ್ತೇಜನ.
- ಮಕ್ಕಳ ಕಲಿಕೆಯ ಗುಣಮಟ್ಟವನ್ನು ಹೆಚ್ಚಿಸಲು ಕಲಿಕಾ ಮತ್ತು ಬೋಧನಾ ತಂತ್ರಗಳು
- ವಿದ್ಯಾರ್ಥಿಗಳಲ್ಲಿ ದೋಷಗಳನ್ನು ಪತ್ತೆ ಹಚ್ಚಿ ಸಮಸ್ಯೆಗಳಿಗೆ ಸೂಕ್ತ ರೀತಿಯಲ್ಲಿ ಸ್ಪಂದಿಸಿ.

**ಅಕ್ಷರ ದೋಷಗಳು**

ಇಷ್ಟ ಪಡುತ್ತೇನೆ – ಇಷ್ಟಪಡಿಸುತ್ತೇವೆ.

ಬೋಧನಾ ತಂತ್ರಗಳು – ಬೋದಾಣ ತಂತ್ರಗಳು

ಒತ್ತಕ್ಷರ – ಒತ್ತರಕ್ಷರ

ಬರೆಯುವ ಸಂದರ್ಭದಲ್ಲಿ ಗಮನ ವಹಿಸದೇ ಹೇಗೋ ಬರೆದು ಮುಗಿಸಿದರಾಯಿತು ಎನ್ನುವುದು ಒಂದು ಕಾರಣವಾದರೆ, ಅಕ್ಷರ ದೋಷಗಳನ್ನು ಗುಣಿತಾಕ್ಷರ, ಅಲ್ಪಪ್ರಾಣ, ಮಹಾಪ್ರಾಣಗಳನ್ನು ಗಮನಿಸದೇ ಒಂದೇ ರೀತಿಯಾಗಿ ಬಳಸುತ್ತಿರುವುದು ಕಂಡು ಬಂದಿದೆ.

**ಆಂಗ್ಲ ಭಾಷಾ ಪದಗಳ ಬಳಕೆ**

| | |
|---|---|
| ವಿರಾಮ | ಇಂಟರ್‌ವೆಲ್ |
| ಅವಧಿ | ಪಿರಿಯಡ್ |
| ತರಗತಿ | ಕ್ಲಾಸ್ |
| ವಿಷಯ | ಸಬ್‌ಜೆಕ್ಟ್ |
| ಪರೀಕ್ಷೆ | ಎಕ್ಸಾಮ್ |
| ಹಾಜರಾತಿ | ಅಟೆಂಡೆನ್ಸ್ |
| ಗಂಟೆ | ಬೆಲ್ |

**ಕಾರಣ**

ಆಂಗ್ಲ ಮಾಧ್ಯಮವಾಗಿರುವುದರಿಂದ ಕನ್ನಡ ಭಾಷಾ ಶಿಕ್ಷಕರಾಗಿದ್ದರೂ ಕೂಡ ಅನಿವಾರ್ಯವಾಗಿಯೇ ಅಥವಾ ರೂಢಿಯಾಗಿಯೋ ಇಂಗ್ಲಿಷಿನ ಪ್ರಭಾವದಿಂದ ಆಂಗ್ಲ ಭಾಷಾ ಪದಗಳನ್ನು ಬಳಸುತ್ತಿದ್ದಾರೆ. ಈ ರೀತಿಯಾಗಿ ಬರೆಯುವಾಗ ಮತ್ತು ಬೋಧಿಸುವ ಸಂದರ್ಭದಲ್ಲಿ ಶಿಕ್ಷಕರಿಗೆ ಅನ್ಯ ಭಾಷೆಯ ಪ್ರಭಾವ ಸಮಸ್ಯೆಯನ್ನುಂಟು ಮಾಡುತ್ತಿದೆ ಎಂಬುದನ್ನು ಗಮನಿಸಬಹುದಾಗಿದೆ.

**ಶಿಕ್ಷಕರ ಉಚ್ಚಾರಣಾ ಸಮಸ್ಯೆಗಳು**

| ಮೂಲರೂಪ | ಉಚ್ಚಾರಿಸುವರೂಪ |
|---|---|
| ಭಾಷೆ | ಭಾಶೆ |
| ಸಂದರ್ಭ | ಸಂದರ್ಬ |
| ಜ್ಞಾನ | ಜ್ಞಾಣ |
| ಮಳೆ | ಮಲೆ |
| ಚಿಹ್ನೆಗಳು | ಚಿನ್ಹೆಗಳು |
| ಹೂ | ಹೂವು |
| ಉತ್ತೀರ್ಣ | ಉತ್ತಿರ್ನ |
| ಒತ್ತಕ್ಷರ | ವತ್ತಕ್ಷರ |
| ಬೋಧನೆ | ಭೋಧನೆ |
| ಓದುವುದು | ಹೋದುವುದು |

ಕಾರಣ

ಈ ಮೇಲಿನ ಪದಗಳ ಉಚ್ಚರಣಾ ರೂಪದಲ್ಲಿ ಶಿಕ್ಷಕರ ಭಾಷಿಕ ಸಮಸ್ಯೆಗಳನ್ನು ಗುರುತಿಸಬಹುದು. ಪ್ರಾದೇಶಿಕ ಭಾಷೆಯಾದ ತೆಲುಗುವಿನ ಪ್ರಭಾವ ಹೆಚ್ಚು ಕಂಡು ಬರುತ್ತದೆ. ಪರಿಸರದಲ್ಲಿ ಬಳಸುತ್ತಿರುವ ಆಡು ಮಾತನ್ನೆ ಗ್ರಾಂಥಿಕ ರೂಪದಲ್ಲಿ ಶಿಷ್ಟ ಭಾಷೆಯ ರೂಪದಲ್ಲಿ ಬಳಸುತ್ತಿರುವುದನ್ನು ಗಮನಿಸಬಹುದು. 'ಪ' ಕಾರ ಅವರ್ಗೀಯ ವ್ಯಂಜನಗಳ ವ್ಯತ್ಯಾಸ ಗಮನಿಸಬಹುದು. 'ಭ' ಕಾರ 'ಬ಼' 'ಫ಼' ವತ್ತಿನ ಬಳಕೆ, ಮಹಾಪ್ರಾಣ ಮತ್ತು ಅಲ್ಪಪ್ರಾಣಾಕ್ಷರಗಳ ಧ್ವನಿ ವ್ಯತ್ಯಾಸವನ್ನು ಗಮನಿಸದಿರುವುದು ಕಂಡು ಬರುತ್ತದೆ. 'ಣ'ಕಾರಕ್ಕೆ 'ನ' ಕಾರವನ್ನು ಬಳಸುವುದು ಕೆಲವೊಬ್ಬರಲ್ಲಿ ಗಮನಿಸಲಾಗಿದೆ. ಈ ರೀತಿಯಾಗಿ ಬೋಧಕರಲ್ಲಿ ಭಾಷಾ ಸಮಸ್ಯೆ ಇದೆ ಎಂಬುದು ಅಧ್ಯಯನ ಮೂಲಕ ಕಂಡು ಬಂದಿದೆ.

**೪.೫ ಶಿಕ್ಷಕರ ಸಾಮಾಜಿಕ ಹಾಗೂ ಆರ್ಥಿಕ ಸಮಸ್ಯೆಗಳು**

ಅನುದಾನಿತ ಮತ್ತು ಅನುದಾನರಹಿತ ಆಂಗ್ಲಮಾಧ್ಯಮ ಶಾಲೆಗಳಲ್ಲಿ ದುಡಿಯುತ್ತಿರುವ ಶಿಕ್ಷಕರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳನ್ನು ಅಧ್ಯಯನ ಮಾಡಲಾಗಿದೆ. ಅವರ ಆರ್ಥಿಕ ಮಟ್ಟ ಸುಧಾರಿಸದಿದ್ದರೆ ಅವರು ಬೋಧನೆಯ ಮೇಲೆ ಯಾವುದೇ ಪರಿಣಾಮ ಬೀರುವುದಿಲ್ಲ. ಅವರಿಗೆ ಯಾವುದೇ ರೀತಿಯ ಚಿಂತೆ ಕಾಡದಿದ್ದರೆ ಅವರು ಬೋಧನೆ ಮತ್ತು ಮಕ್ಕಳ ಕಲಿಕೆಯ ಮೇಲೆ ಹೆಚ್ಚು ಒತ್ತನ್ನು ನೀಡುತ್ತಾರೆ ಎನ್ನುವುದು ಶಿಕ್ಷಕರ ಅಭಿಪ್ರಾಯವಾಗಿದೆ.

ಪ್ರತಿಶತ ಶಿಕ್ಷಕರು ಕುಟುಂಬ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದಾರೆ. ಕೌಟುಂಬಿಕ ಸ್ಥಿತಿಗತಿ ಎನ್ನುವುದು ಒಂದು ಸಾಮಾಜಿಕ-ಆರ್ಥಿಕ ಸಂಸ್ಥೆಯಾಗಿದ್ದು, ಇದರಲ್ಲಿ ಕೆಲಸದ ಸಮುದಾಯದಲ್ಲಿ ವೈವಾಹಿಕ ಸ್ಥಿತಿ ಮಹತ್ವದ ಪಾತ್ರ ವಹಿಸುತ್ತದೆ. ಮದುವೆಯು ಅವಕಾಶಗಳು ಮತ್ತು ಸವಾಲುಗಳನ್ನು ಸೃಷ್ಟಿಸುತ್ತವೆ. ಅದು ಕೆಲಸ ಮಾಡಲು, ಗಳಿಸಲು ಮತ್ತು ಉಳಿಸಲು ಕೆಲವು ಅಗತ್ಯತೆಗಳಿಗೆ ಕಾರಣವಾಗುತ್ತದೆ. ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಬೋಧಕರ ಕುಟುಂಬದ ಸ್ವರೂಪವನ್ನು ವಿಶ್ಲೇಷಿಸುವುದು ಅತ್ಯಗತ್ಯ.

ಮನೆಯ ಮಾಲೀಕತ್ವ ವಸತಿ ಸ್ಥಿತಿ ಶಿಕ್ಷಕರಿಗೆ ಆರ್ಥಿಕ ಯೋಗಕ್ಷೇಮವನ್ನು ನಿರ್ಧರಿಸುವಲ್ಲಿ ಒಂದು ಪ್ರಮುಖ ಅಂಶವಾಗಿದೆ. ಇದು ಶಿಕ್ಷಕರ ಸಾಧನಗಳ ಆರ್ಥಿಕ ಸ್ಥಿತಿಯನ್ನು ನಿರ್ಣಯಿಸಲು ನಾವು ಪ್ರಯತ್ನವನ್ನು ಮಾಡುವ ಒಂದು ಸಾಧನವಾಗಿದೆ. ವಸತಿ ಕೇವಲ ಆಶ್ರಯವಲ್ಲ. ಆದರೆ ಇದು ಒಟ್ಟು, ಕುಟುಂಬ ಮತ್ತು

ಸಮುದಾಯದೊಂದಿಗೆ ಸಂಪರ್ಕವಿರುವ ಸೇವೆಗಳು, ಸೌಲಭ್ಯಗಳು ಮತ್ತು ಉಪಯುಕ್ತತೆಗಳನ್ನು ಒಳಗೊಂಡಿದೆ. ಇದು ಶಾಲೆಗಳು, ವೈದ್ಯಕೀಯ ಸೌಲಭ್ಯಗಳು, ಖರೀದಿ, ಮನರಂಜನೆ, ಕೆಲಸದ ಸ್ಥಳದಿಂದ ಮತ್ತು ಸಮಂಜಸ ಪ್ರಯಾಣದ ಸಮಯದ ಪ್ರವೇಶದಂತಹ ಸೌಲಭ್ಯಗಳನ್ನು ಒಳಗೊಂಡಿದೆ. ಅನುದಾನಿತ ಮತ್ತು ಅನುದಾನರಹಿತ ಶಾಲೆಗಳ ಶಿಕ್ಷಕರ ಮಾಲೀಕತ್ವದ ಸ್ವರೂಪವನ್ನು ತೋರಿಸುತ್ತದೆ. ಇನ್ನು ಕೆಲವರು ಅವಿವಾಹಿತರು ಗ್ರಾಮೀಣ ಪ್ರದೇಶಗಳಿಂದ ನಗರಕ್ಕೆ ಬಂದು ಏಕಾಂಗಿಯಾಗಿ ಜೀವಿಸುತ್ತಿದ್ದಾರೆ. ವಿವಾಹಿತ ಶಿಕ್ಷಕರು ಇವರು ತಮ್ಮದೇ ಆದ ಕನಸುಗಳನ್ನು ಹೊಂದಿರುತ್ತಾರೆ. ಇವರಿಗೆ ಖಾಸಗಿ ಶಾಲೆಗಳು ಕಡಿಮೆ ಸಂಬಳದಲ್ಲಿ ದುಡಿಸಿಕೊಳ್ಳುವುದನ್ನು ಗಮನಿಸಬಹುದಾಗಿದೆ. ಕುಟುಂಬವು ಎಷ್ಟು ಗಾತ್ರದಲ್ಲಿದೆ ಎಂಬುದನ್ನು ಗಮನಿಸಿದಾಗ ಅವರ ಆರ್ಥಿಕ ಮಟ್ಟಕ್ಕೆ ಸರಿ ಹೊಂದುತ್ತದೆಯೋ ಎಂದು ನೋಡಬೇಕಾಗುತ್ತದೆ. ಶಾಲೆಗಳಲ್ಲಿ ಬೋಧಿಸುತ್ತಿರುವ ಶಿಕ್ಷಕರ ಕಲ್ಯಾಣದ ಬಗ್ಗೆ ಸರ್ಕಾರಗಳು ಮತ್ತು ಶಿಕ್ಷಣ ಸಂಸ್ಥೆಗಳು ಗಮನ ವಹಿಸಬೇಕು.

ಕನ್ನಡ ಶಿಕ್ಷಕರಿಗೆ ಕಡಿಮೆ ಸಂಬಳವನ್ನು ನೀಡುವುದು. ಇಂಗ್ಲಿಷ್ ಭಾಷೆಯ ಶಿಕ್ಷಕರಿಗೆ ಹೆಚ್ಚು ಸಂಬಳವನ್ನು ನೀಡುವ ಮೂಲಕ ತಾರತಮ್ಯವನ್ನು ಮಾಡಲಾಗುತ್ತಿದೆ ಎಂಬ ಕೂಗು ಶಿಕ್ಷಕ ಸಮುದಾಯದಿಂದ ಕೇಳಿಬರುತ್ತಿದೆ. ವೃತ್ತಿಪರ ಶಿಕ್ಷಣದ ತರಬೇತಿ, ಕೋರ್ಸ್‌ಗಳನ್ನು ಮಾಡಿದ್ದರೂ ಸಹ ಆಡಳಿತ ಮಂಡಳಿಗಳು ಸಂಬಳ ನೀಡಿಕೆಯಲ್ಲಿ ಮೀನಾಮೇಷ ಎಣಿಸುತ್ತಿವೆ. ಸಂಬಳವನ್ನು ಆಡಳಿತ ಮಂಡಳಿಗಳು ಸರಿಯಾದ ಸಮಯಕ್ಕೆ ನೀಡದಿರುವುದು ಆರ್ಥಿಕ ಸಮಸ್ಯೆಯಾದರೆ, ಸಾಮಾಜಿಕವಾಗಿ ಅವರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವರಿಗೆ ಸಮಾಜದಲ್ಲಿ ಸ್ಥಾನಮಾನ ದೊರೆಯಬೇಕಾದರೆ ಅವರಿಗೆ ಆರ್ಥಿಕ ಮತ್ತು ಸಾಮಾಜಿಕ ಭದ್ರತೆಯನ್ನು ನೀಡಬೇಕಾಗುತ್ತದೆ. ಮನೆ ಬಾಡಿಗೆ, ಕುಟುಂಬ ನಿರ್ವಹಣೆಗೆ ಶಾಲೆಗಳು ನೀಡುತ್ತಿರುವ ವೇತನವು ಸಾಲದಾಗಿದೆ. ಆದ್ದರಿಂದ ಶಿಕ್ಷಕರು ನೆಮ್ಮದಿಯಿಂದ ತರಗತಿಗಳಲ್ಲಿ ಪಾಠವನ್ನು ಬೋಧಿಸಬೇಕಾದರೆ ಅವರಿಗೆ ಯಾವುದೇ ರೀತಿಯ ಆತಂಕಗಳು ಇರಬಾರದು. ಹಾಗಾಗಿ ಖಾಸಗಿ ಶಾಲೆಗಳಲ್ಲಿ ಉತ್ತಮ ವೇತನ ನೀಡುವಂತೆ ಸರ್ಕಾರಗಳು, ಕಾರ್ಮಿಕ ಇಲಾಖೆಗಳು ಕ್ರಮ ಕೈಗೊಳ್ಳಬೇಕಾಗಿದೆ.

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಬಹುತೇಕ ಶಿಕ್ಷಕರು ೨೬ ರಿಂದ ೩೫ ವರ್ಷ ವಯಸ್ಸಿನ ಶಿಕ್ಷಕರು ಪ್ರತಿಶತ ಶಿಕ್ಷಕರು, ವಿವಾಹಿತರು, ಕುಟುಂಬದ ನಿರ್ವಹಣೆ ಅವರ ಜವಾಬ್ದಾರಿಯಾಗಿದೆ. ಅದರೊಂದಿಗೆ ಅವರ ವಾರ್ಷಿಕ ವರಮಾನ ೨೦,೦೦೦ ರೂ.ಗಳಿಂದ ೬೦,೦೦೦ ರೂ. ಮಾತ್ರ. ಹೀಗಿರುವಾಗ ಶಿಕ್ಷಕರ

ಆರ್ಥಿಕ ಸಮಸ್ಯೆಗಳು ಹೇಗೆ ಪರಿಹಾರಗೊಳ್ಳುತ್ತವೆ ಎಂಬುದು ಶಿಕ್ಷಕರ ಮುಖ್ಯ ಪ್ರಶ್ನೆಯಾಗಿದೆ. ಕನ್ನಡ ಭಾಷಾ ಶಿಕ್ಷಕರಿಗೆ ಸಮಾಜದಲ್ಲಿ ಸಿಗುತ್ತಿರುವ ಸ್ಥಾನಮಾನವು ಇಂದು ಪ್ರಶ್ನಾರ್ಥಕವಾಗಿ ಗೋಚರಿಸುತ್ತಿದೆ. ತೇಲಿಸುವ ಭಾಷೆಯಾಗಿ ಕೇವಲ ಉತ್ತೀರ್ಣರಾಗಲು ಬೇಕಾದ ಮೂವತ್ತೈದು ಅಂಕಗಳು ದೊರೆತರೆ ಸಾಕು ಎನ್ನುವ ಮನೋಧೋರಣೆ ಹೆಚ್ಚಾಗುತ್ತಿದೆ. ಈ ನಿರ್ಲಕ್ಷ್ಯ ಶಿಕ್ಷಕರ ಸಾಮಾಜಿಕ ಮತ್ತು ಆರ್ಥಿಕ ಬದುಕಿನ ಮೇಲೆ ಪ್ರಭಾವ ಬೀರುತ್ತಿದೆ. ಶಿಕ್ಷಕರ ವಾರ್ಷಿಕ ಆದಾಯದ ಮಾದರಿಯನ್ನು ಸ್ಕ್ಯಾನ್ ಮಾಡಿ ಹಾಕಲಾಗಿದೆ.

8. ಶೈಕ್ಷಣಿಕ ವಿದ್ಯಾರ್ಹತೆ (ಬಿ.ಎ/ ಎಮ್.ಎ. ಪಿ.ಎಚ್.ಡಿ) ಬಿ.ಎ. ಬಿ.ಇಡಿ. ಎಂ.ಎ.
9. ವೃತ್ತಿಪರ ತರಬೇತಿ (ಡಿ.ಇಡಿ/ ಬಿಇಡಿ/ ಎಮ್.ಇಡಿ) ______________
10. ಇತರೆ ವಿದ್ಯಾರ್ಹತೆ ಏನಾದರೂ ಇದ್ದಲ್ಲಿ [illegible] ಮತ್ತು ಆಂಗ್ಲಭಾಷೆಯಲ್ಲಿ
11. ಕನ್ನಡ ಭಾಷಾ ಬೋಧನೆಯಲ್ಲಿ ಪಡೆದ ಅನುಭವ :
   - 5 ವರ್ಷಗಳಿಗಿಂತ ಕಡಿಮೆ ○
   - 5 ರಿಂದ 10 ವರ್ಷ ⊘
   - 10 ರಿಂದ 15 ವರ್ಷ ○
   - 20 ವರ್ಷಕ್ಕಿಂತ ಹೆಚ್ಚು ○
12. ವಾರ್ಷಿಕ ಆದಾಯ (ರೂಗಳಲ್ಲಿ) :
   - 20000 ರೂ. ಕಡಿಮೆ ⊘
   - 20000 ರೂ ರಿಂದ 60000 ○
   - 60000 ರೂ ರಿಂದ 80000 ⊘
   - 80000 ರೂ ಮೇಲ್ಪಟ್ಟು ○
13. ಪ್ರಸ್ತುತ ನಿರ್ವಹಿಸುತ್ತಿರುವ ಕರ್ತವ್ಯಗಳು
   ಬೋಧನೆ ⊘ ಸಂಪನ್ಮೂಲವ್ಯಕ್ತಿ ○ ಮೇಲ್ವಿಚಾರಣೆ/ ಅಧಿಕೃತ ತಪಾಸಣೆ ○
   ಆಡಳಿತನಿರ್ವಹಣೆ ○ ಪಠ್ಯಪುಸ್ತಕ ರಚನಾಸಮಿತಿಯಸದಸ್ಯರು ○
14. ಪ್ರವೃತ್ತಿಗಳು / ಇತರೆ ಆಸಕ್ತಿಗಳು :
   ಅ) ಪ್ರವೃತ್ತಿಗಳು/ ಆಸಕ್ತಿಗಳು : [illegible]
   ಆ) ನೀವು ವೃತ್ತಿ ಪತ್ರಿಕೆಗಳು, ಮಾಸ ಪತ್ರಿಕೆಗಳು, ಮತ್ತು ಪುಸ್ತಕಗಳನ್ನು ಓದುವಿರಾ ?
   ಹೌದು ⊘ ಇಲ್ಲ ○

| | ಪ್ರಾದೇಶಿಕ ಭಾಷೆ | ಕನ್ನಡ ಭಾಷೆ | ಆಂಗ್ಲ ಭಾಷೆ |
|---|---|---|---|
| • ವೃತ್ತ ಪತ್ರಿಕೆಗಳು | ○ | ⊘ | ○ |
| • ಮಾಸ ಪತ್ರಿಕೆಗಳು | ○ | ⊘ | ○ |
| • ಪುಸ್ತಕಗಳು | ⊘ | ⊘ | ○ |

   ಇ) ನೀವು ಆಕಾಶವಾಣಿ ಆಲಿಸುವಿರಾ?
   ಹೌದು ⊘ ಇಲ್ಲ ○
   ಹೌದಾದಲ್ಲಿ ಯಾವ ಭಾಷೆಯಲ್ಲಿ?
   ಪ್ರಾದೇಶಿಕ ಭಾಷೆ ○ ಕನ್ನಡ ಭಾಷೆ ⊘ ಆಂಗ್ಲ ಭಾಷೆ ○
   ಇತರೆ ________________

ಸಾಮಾಜಿಕವಾಗಿ ಆಂಗ್ಲ ಮಾಧ್ಯಮದಲ್ಲಿ ವಿದ್ಯಾಭ್ಯಾಸ ಪಡೆದ ಯಾವುದೇ ಒಂದು ತರಬೇತಿಯಿಲ್ಲದ, ಕೇವಲ ಆಂಗ್ಲ ಭಾಷಾ ಸಂವಹನ ಕೌಶಲ ಇದ್ದ ವ್ಯಕ್ತಿಯು ಆರ್ಥಿಕವಾಗಿ ಸಬಲನಾಗುತ್ತಿದ್ದಾನೆ. ಡಿ.ಇಡಿ, ಬಿ.ಇಡಿ ಪದವಿಗಳನ್ನು ಪಡದು ಕನ್ನಡ ಮಾಧ್ಯಮದ ಹಿನ್ನೆಲೆಯಿಂದ ಬಂದ ಪ್ರಶಿಕ್ಷಣಾರ್ಥಿ ಇಂದು ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದಿದ್ದಾನೆ. ಈ ತಾರತಮ್ಯವನ್ನು ಹೋಗಲಾಡಿಸಿದಾಗ ಮಾತ್ರ ಭಾಷಾ ಶಿಕ್ಷಕರ ಉಳಿವು ಎಂಬುದು  ಕ್ಷೇತ್ರ ಕಾರ್ಯದ ಸಮಯದಲ್ಲಿ ತಿಳಿದು ಬಂದಿದೆ. ಶಿಕ್ಷಕರ ಸಂದರ್ಶನ ಮಾಡಿ ಮುಖಾಮುಖಿಯಾಗಿ ಅವರ ಜೊತೆಯಲ್ಲಿ ಚರ್ಚಿಸಿದಾಗ ಅವರು ನೀಡಿದ ಪ್ರತಿಕ್ರಿಯೆಯನ್ನು ಸಂಗ್ರಹಿಸಿ ಅಧ್ಯಯನದ ಮೂಲಕ ಮಾಹಿತಿಯನ್ನು ಗಮನಿಸಲಾಗಿದೆ.

**೪.೬ ಶಿಕ್ಷಕರ ಧೋರಣೆಗಳು**

ಮಕ್ಕಳ ಓದುಗಾರಿಕೆ ಮತ್ತು ಬರೆಯುವಿಕೆಯಲ್ಲಿ ದೋಷಗಳು ಕಂಡು ಮೊದಲು ಯಾರಾದರೂ ಕೇಳವುದು, ಯಾರು ನಿನಗೆ ಕಲಿಸಿದ್ದು, ಯಾವ ಶಾಲೆಯಲ್ಲಿ ಓದಿದ್ದು ಎಂದು ಬೈಯ್ಯುವುದಕ್ಕೆ ಪ್ರಾರಂಭಿಸುತ್ತಾರೆ. ಅಂದರೆ ಆ ವ್ಯಕ್ತಿಗೆ ಕಲಿಸಿದ ಗುರುವನ್ನು ನಿಂದಿಸುತ್ತಾರೆ. ಆದ್ದರಿಂದ ಗುರುವು ಶಿಷ್ಯನಿಗೆ ಕಲಿಕೆಯಲ್ಲಿ ಖಚಿತತೆಯನ್ನು ದೃಢಪಡಿಸಿಬೇಕು. ವಿದ್ಯಾರ್ಥಿಗಳು ಮಾಡುವ ದೋಷಗಳಿಗೆ ಶಿಕ್ಷಕನು ಕಾರಣ ಅಥವಾ ಜವಾಬ್ದಾರಿಯಾಗುತ್ತಾನೆ. ಆದ್ದರಿಂದ ಶಿಕ್ಷಕ ಬೋಧನೆ ಮತ್ತು ಕಲಿಕೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತಾನೆ. ಅಷ್ಟೇ ಅಲ್ಲದೆ ವಿದ್ಯಾರ್ಥಿಯ ಸರ್ವಾಂಗೀಣ ಅಭಿವೃದ್ಧಿಗೆ ಕಾರಣನಾಗುತ್ತಾನೆ. ಪ್ರಾಥಮಿಕ ಶಾಲೆಗಳಲ್ಲಿ ಪೋಷಕರಿಗಿಂತಲೂ ಪ್ರಾಥಮಿಕ ಶಾಲಾ ಶಿಕ್ಷಕರ ಪಾತ್ರ ಅತ್ಯಂತ ಮುಖ್ಯವಾಗಿರುತ್ತದೆ.

ಒಬ್ಬ ಶಿಕ್ಷಕನ ಬೇಜವಾಬ್ದಾರಿಯಿಂದ ಇಡೀ ಸಮಾಜವೇ ಹಾನಿಗೀಡಾಗುವುದು. ದೇಶದ ಭವಿಷ್ಯವನ್ನು ರೂಪಿಸುವ ಶಕ್ತಿ ಶಿಕ್ಷಕನಿಗಿರುತ್ತದೆ. ಆದರೆ ಇಂದಿನ ಶಿಕ್ಷಕರ ಸ್ಥಾನಮಾನ, ಗುಣಮಟ್ಟ ಕುಸಿಯುತ್ತಲಿದೆ ಎಂಬ ಕೂಗು  ಕೇಳಿಬರುತ್ತಿವೆ. ಇತ್ತೀಚೆಗೆ ಶಿಕ್ಷಕರು ತಮ್ಮ ಶಾಲೆಗೆ ಹೋಗಿ ಕರ್ತವ್ಯ ನಿರ್ವಹಿಸದೆ ರಾಜಕೀಯ ಮಾಡುವುದು. ಇಲಾಖೆಯ ಕಚೇರಿಯ ಸುತ್ತ ತಿರುಗುತ್ತಲೇ ಇರುವುದನ್ನು ಗಮನಿಸಬಹುದು. ಶಿಕ್ಷಣ ಸಂಸ್ಥೆಗಳು ಸರ್ಕಾರ ಶಿಕ್ಷಕರ ವಿರುದ್ಧ ಕ್ರಮ ಜರುಗಿಸಲು ಅನೇಕ ಕಾನೂನುಗಳನ್ನು ಜಾರಿಗೆ ತಂದಿದೆ. ಈ ರೀತಿಯ ಕಾನೂನುಗಳು ರೂಪುಗೊಳ್ಳಲು ಕಾರಣ ಶಿಕ್ಷಕ ಸಮುದಾಯವೇ ಆಗಿದೆ. ಇದಕ್ಕೆ ಕಾರಣ ಎಲ್ಲ ಶಿಕ್ಷಕರಲ್ಲ. ಕೆಲವೇ ಕೆಲವು ಶಿಕ್ಷಕರು

ಮಾತ್ರ ಇಂತಹ ಕಾನೂನು ಜಾರಿಗೆ ಬರಲು ಕಾರಣವಾಗಿದ್ದಾರೆ. ಶಿಕ್ಷಣದ ಪ್ರಕ್ರಿಯೆಯಲ್ಲಿ ಶಿಕ್ಷಕ ದೋಣಿಯನ್ನು ನಡೆಸುವ ನಾವಿಕನಿದ್ದಂತೆ. ಕೇವಲ ಜೀವನೋಪಾಯಕ್ಕಾಗಿ ಬೋಧಿಸದೆ ಅವರನ್ನು ಸ್ವಾವಲಂಬಿಗಳನ್ನಾಗಿ ಮಾಡಬೇಕು. ಉತ್ತಮ ಚಾರಿತ್ರ್ಯವನ್ನು ನಿರ್ಮಾಣ ಮಾಡಬೇಕು. ಸರ್ವಾಂಗೀಣ ಅಭಿವೃದ್ಧಿಗಾಗಿ ಬೋಧಸುವಂತಾಗಬೇಕು.

ಶಿಕ್ಷಣ ಕ್ರಿಯೆಯು ಯಶಸ್ವಿಯಾಗಿ ಸಾಗಬೇಕಾದರೆ ಅದನ್ನು ಅನುಷ್ಠಾನದಲ್ಲಿ ತರಲು ಸಮರ್ಥ ಶಿಕ್ಷಕರು ಬೇಕು. ರಾಷ್ಟ್ರದ ಭವಿಷ್ಯವು ಮಕ್ಕಳ ಮೇಲೆ, ಮಕ್ಕಳ ಭವಿಷ್ಯವು ಶಿಕ್ಷಕರ ಮೇಲೆ ಅವಲಂಬಿಸಿದೆ. ಸಾಮಾನ್ಯ ಶಿಕ್ಷಕ, ಒಳ್ಳೆಯ ಶಿಕ್ಷಕ, ನಿಜವಾದ ಶಿಕ್ಷಕ ಹಾಗೂ ಶ್ರೇಷ್ಠ ಶಿಕ್ಷಕ ಎಂದು ನಾಲ್ಕು ಪ್ರಕಾರಗಳಲ್ಲಿ ಶಿಕ್ಷಕರನ್ನು ಗಮನಿಸಬಹುದು. "ಸಾಮಾನ್ಯ ಶಿಕ್ಷಕ ಇದ್ದುದ್ದನ್ನು ಇದ್ದಂತೆ ಓದಿ ಹೇಳುತ್ತಾನೆ. ಒಳ್ಳೆಯ ಶಿಕ್ಷಕ ವಿವರಿಸಿ ತಿಳಿಸುತ್ತಾನೆ. ಆದರೆ ನಿಜವಾದ ಶಿಕ್ಷಕ ಚಿತ್ರಿಸಿ ಕಲಿಸುತ್ತಾನೆ. ಶ್ರೇಷ್ಠ ಶಿಕ್ಷಕ ಪ್ರೇರೇಪಿಸುತ್ತಾನೆ"[೮] ಎಂಬ ಸೂಕ್ತಿಯಂತೆ ಶಿಕ್ಷಕನು ತನ್ನ ಕರ್ತವ್ಯವನ್ನು ನಿರ್ವಹಿಸಬೇಕಾಗಿದೆ. ಶಿಕ್ಷಕರ ಧೋರಣೆಗಳು ಧನಾತ್ಮಕವಾಗಿ ಬದಲಾವಣೆ ಆಗುವ ನಿಟ್ಟಿನಲ್ಲಿ ಶಿಕ್ಷಣ ಸಂಸ್ಥೆಗಳು ಹಾಗೂ ಸರ್ಕಾರ ಯೋಜಿಸಬೇಕಾಗಿದೆ. ಒಟ್ಟಾರೆಯಾಗಿ ಭಾಷಾ ಬೋಧನಾ ಸಮಸ್ಯೆಗಳಾದ ಪಠ್ಯಮೂಲ ಸಮಸ್ಯೆಗಳು, ಪರೀಕ್ಷೆ ಮತ್ತು ಮೌಲ್ಯಮಾಪನ ಭಾಷಿಕ ಸಮಸ್ಯೆಗಳು, ಬೋಧನಾ ಸಮಸ್ಯೆಗಳು, ಶಿಕ್ಷಕರ ಸಾಮಾಜಿಕ ಮತ್ತು ಆರ್ಥಿಕ ಸಮಸ್ಯೆಗಳು ಹಾಗೂ ಶಿಕ್ಷಕರ ಧೋರಣೆಗಳನ್ನು ಶಿಕ್ಷಕರು ನೀಡಿದ ಮಾಹಿತಿಯ ಹಿನ್ನೆಲೆಯಲ್ಲಿ ವಿಶ್ಲೇಷಣೆ ಮಾಡಲಾಗಿದೆ.

ಭಾಷಾ ಬೋಧನೆ ಮತ್ತು ಕಲಿಕೆಯ ಕುರಿತಾಗಿ ಆಂಗ್ಲ ಮಾಧ್ಯಮ ಶಾಲಾ ಮುಖ್ಯೋಪಾಧ್ಯಾಯರನ್ನು ಹಾಗೂ ಕಲಿಕಾರ್ಥಿಗಳ ಪೋಷಕರನ್ನು ಕ್ಷೇತ್ರಕಾರ್ಯದಲ್ಲಿ ಸಂದರ್ಶಿಸಿ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ. ೨೫ ಶಾಲಾ ಮುಖ್ಯಗುರುಗಳು ಮಾಹಿತಿಯನ್ನು ನೀಡಿ ಸ್ಪಂದಿಸಿರುತ್ತಾರೆ. ಹಾಗೆಯೇ ವಿದ್ಯಾರ್ಥಿಗಳ ಪೋಷಕರನ್ನು ಭೇಟಿ ಮಾಡಿ ಪ್ರಶ್ನಾವಳಿಯನ್ನು ನೀಡಿ ಮಾಹಿತಿಯನ್ನು ಸಂಗ್ರಹಿಸಿಕೊಂಡು ಚರ್ಚಿಸಲಾಗಿದೆ.

**ಮುಖ್ಯೋಪಾಧ್ಯಾಯರುಗಳ ಅಭಿಪ್ರಾಯ**

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಕಲಿಕೆಯ ಅಗತ್ಯತೆ ಇದೆ. ಕನ್ನಡ ಭಾಷೆಯ ಜೊತೆಗೆ ಮಗುವಿಗೆ ೨-೩ ಭಾಷೆಗಳನ್ನು ಏಕ ಕಾಲದಲ್ಲಿ ಕಲಿಸುವುದು ಅಸಾಧ್ಯವೇನೂ ಅಲ್ಲ. ಅನ್ಯರ ಅಪರಿಚಿತ ಭಾಷೆಗಳನ್ನು ಕಲಿತಿರುವುದು ಅನುಭವದ ಮಾತು. ಮೊದಲು ಮಾತು, ಅನಂತರ ಓದು, ಕೊನೆಯಲ್ಲಿ ಬರಹ. ಈ ಕ್ರಮದಲ್ಲಿ

ಶಿಕ್ಷಕರು ಬೋಧನೆಯನ್ನು ಮಾಡುತ್ತಿದ್ದಾರೆ. ಕನ್ನಡ ಭಾಷಾ ಕಲಿಕೆ ಸರಳ ಮತ್ತು ಸುಲಭ. ಕಾರಣ ಕನ್ನಡ ರಾಜ್ಯದಲ್ಲಿ ಕನ್ನಡ ಭಾಷಾ ಕಲಿಕೆ ಅಗತ್ಯವಿದೆ ಎಂದು ವಿವರಿಸಿದ್ದಾರೆ.

ಕನ್ನಡ ಮಾತೃಭಾಷೆಯುಳ್ಳ ಶಿಕ್ಷಕರ ಬೋಧನೆಯು ಕನ್ನಡೇತರ ಮಾತೃಭಾಷೆಯುಳ್ಳ ಶಿಕ್ಷಕರ ಬೋಧನೆಗಿಂತ ಭಿನ್ನವಾಗಿದೆ. ಕಾರಣ ಕನ್ನಡ ಮಾತೃಭಾಷೆಯುಳ್ಳ ಶಿಕ್ಷಕರು ಕನ್ನಡ ಭಾಷೆಯ ಬೋಧನೆಯನ್ನು ಮಾಡುವಾಗ ಶುದ್ಧ ಮತ್ತು ಸ್ಪಷ್ಟ ಉಚ್ಚಾರದ ತಳಹದಿಯನ್ನು ಹಾಕುತ್ತಾರೆ. ಕನ್ನಡ ಭಾಷೆಯನ್ನು ಕರಗತ ಮಾಡಿಕೊಂಡಿರುತ್ತಾರೆ. ಮಕ್ಕಳಲ್ಲಿರುವ ತಪ್ಪುಗ್ರಹಿಕೆ, ತಪ್ಪು ತಿಳುವಳಿಕೆ ವಿದ್ಯಾರ್ಥಿಯ ಅಲಕ್ಷತನ ಸಕಾಲದಲ್ಲಿ ತಿದ್ದಿ, ತಾನೊಬ್ಬ ಉತ್ತಮ ಕನ್ನಡ ಬೋಧಕ ಎಂದು ನಿರೂಪಿಸುವರು. ಆದರೆ ಕನ್ನಡೇತರ ಮಾತೃಭಾಷಾ ಶಿಕ್ಷಕರಲ್ಲಿ ಭಾಷೆಯ ಕೊರತೆ ಕಾಣುವುದು ಎಂದು ಸ್ಪಷ್ಟಪಡಿಸಿದರು.

ಕನ್ನಡ ಭಾಷಾ ಶಿಕ್ಷಕರು ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ಬೋಧಿಸಬೇಕಾದರೆ ಹೆಚ್ಚು ಪರಿಶ್ರಮವನ್ನು ಮಾಡಬೇಕಾಗಿದೆ. ಶಿಕ್ಷಕರು ಆಂಗ್ಲ ಭಾಷೆಯನ್ನು ಕಲಿತಿರುವುದು ತಮ್ಮ ಮಾತೃ ಭಾಷೆಯ ಮುಖಾಂತವೇ ಹೊರತು ಆಂಗ್ಲ ಭಾಷೆಯಿಂದ ಅಲ್ಲ. ಹಾಗೆಯೇ ವಿದ್ಯಾರ್ಥಿಗಳು ಕನ್ನಡ ಭಾಷೆಯನ್ನು ಮಾತೃ ಭಾಷೆ ಹೊಂದಿದ್ದರೆ ಮಾತ್ರ ಕನ್ನಡದಲ್ಲಿ ಯೋಚಿಸುತ್ತಾರೆ ಎಂದು ತಿಳಿಸಿದರು.

ಕನ್ನಡ ಭಾಷಾ ವಿಧಾನಗಳನ್ನು ಗಮನಿಸಿದಾಗ ಶಿಕ್ಷಣದ ಕೆಲಸವು ದ್ವಿಮುಖವಾದುದು. ಕಲಿಯುವ ಕ್ರಿಯೆ ಕೆಲಸದಲ್ಲಿ ಸಹಾಯ ನೀಡುವವನಾದರೆ ಮಗುವು ಕಲಿಯುವನು. ಶಿಕ್ಷಕರಿಗೆ ಪೂರ್ಣ ಸ್ವಾತಂತ್ರ್ಯ ಅಗತ್ಯ. ಯೋಗ್ಯ ಪದ್ಧತಿ, ಅನುಸರಣೆ ಮಕ್ಕಳಿಗೆ ಶುದ್ಧ ಬರಹ, ನೋಡಿ ಬರೆಯುವುದು, ಕಾಫಿ ಬರಹ, ಶಬ್ದೋಚ್ಚಾರ ಶಬ್ದಗಳ ವರ್ಣ ಜೋಡಿಸಿ ಬರೆಯುವ ವಿಧಾನಗಳನ್ನು ಏರ್ಪಾಡು ಮಾಡಬೇಕಾಗಿದೆ. ವ್ಯಕ್ಯಾಬುಲರಿ ಟೆಸ್ಟ್, ವರ್ಡ್ ಗೇಮ್, ಸ್ಪೆಲ್ಲಿಂಗ್ ಗೇಮ್ಸ್‌ನ್ನು ರೂಪಿಸಿ ಬೋಧಿಸಬೇಕಾಗಿದೆ ಎಂದು ಸ್ಪಷ್ಟಪಡಿಸಿದರು.

ವಿದ್ಯಾರ್ಥಿಗಳು ಕನ್ನಡ ಕಲಿಯುವಾಗ ಎದುರಿಸುತ್ತಿರುವ ಸಮಸ್ಯೆಗಳ ಕುರಿತು ಕನ್ನಡ ಕಲಿಕೆಗೆ ವ್ಯಾಕರಣದ ಸಹಾಯ ಅವಶ್ಯಕ. ವ್ಯಾಕರಣ ಕಲಿಯದಿದ್ದರೆ ಶುದ್ಧವಾದ ಓದು ಮತ್ತು ಬರಹ ಕಲಿಯಲು ಸಾಧ್ಯವಿಲ್ಲ. ಆದರೆ ವಿದ್ಯಾರ್ಥಿಗಳು ವರ್ಣಮಾಲೆ ಕಲಿಯುವುದರಲ್ಲಿ ಪ್ರಾರಂಭಿಕ ಅಭ್ಯಾಸದಿಂದ ವಂಚಿತರಾಗಿದ್ದಾರೆ. ಪೋಷಕರು ಮನೆಯಲ್ಲಿ

ಮಗುವಿನ ಕಲಿಕೆಗೆ ಸಮಯ ನೀಡಬೇಕು. ಹಾಗೆಯೇ ತರಗತಿಯಲ್ಲಿ ಬೋಧಕರು ಕಲಿಯುವಿಕೆಯ ನಿಯಮವನ್ನು ಗಮನದಲ್ಲಿಟ್ಟುಕೊಂಡು ಕಲಿಸಬೇಕು. ತಜ್ಞರ ಸಹಾಯ ಸಲಹೆ ಮತ್ತು ಮಾರ್ಗದರ್ಶನವನ್ನು ಪಡೆದು ಭಾಷಾ ಬೋಧನೆಯನ್ನು ಸಾಗಿಸಬೇಕು ಎಂದು ಅಭಿಪ್ರಾಯವನ್ನು ತಿಳಿಸಿದರು. ಹೀಗೆ ಮುಖ್ಯಗುರುಗಳು ಭಾಷಾ ಬೋಧನೆ ಮತ್ತು ಕಲಿಕೆಯ ಕುರಿತಾಗಿ ಚರ್ಚಿಸಿ ಸ್ಪಷ್ಟವಾದ ಮಾಹಿತಿಗಳನ್ನು ನೀಡಿರುವುದನ್ನು ಅಧ್ಯಯನದ ಮೂಲಕ ಗಮನಿಸಲಾಗಿದೆ.

**ಪೋಷಕರ ಅಭಿಪ್ರಾಯ**

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಕಲಿಕೆ ಭಾಷಾ ಬೋಧನೆ ಕುರಿತಾಗಿ ಕಲಿಕಾರ್ಥಿಗಳ ಪೋಷಕರು ನೀಡಿರುವ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ಪ್ರಾದೇಶಿಕ ಭಾಷಾ ಭಿನ್ನತೆ ಇರುವ ಬಳ್ಳಾರಿ ನಗರ ಪ್ರದೇಶವು ಬಹು ಭಾಷಿಕ ಹಿನ್ನೆಲೆಯನ್ನೊಳಗೊಂಡಿದೆ. ಭಿನ್ನ ಭಾಷೆಗಳಾದ ತೆಲುಗು, ತಮಿಳು, ಉರ್ದು, ಮರಾಠಿ, ಭಾಷೆಯನ್ನಾಡುವ ಭಾಷಿಕರನ್ನು ಗಮನಿಸಬಹುದು. ಹೀಗೆ ಹಲವು ಭಾಷೆಗಳಿಂದ ಔಪಚಾರಿಕ ಶಿಕ್ಷಣ ವ್ಯವಸ್ಥೆಗೆ ಬಂದ ಮಗು ಕನ್ನಡ ಭಾಷೆಯನ್ನು ಕಲಿಯುವಾಗ ಸಮಸ್ಯೆಗಳನ್ನು ಎದುರಿಸುತ್ತಿದೆ. ಭಾಷಾ ಕೌಶಲಗಳಲ್ಲಿ ಆರಂಭಿಕ ಕೌಶಲಗಳಾದ ಆಲಿಸುವಿಕೆ ಮತ್ತು ಮಾತನಾಡುವುದನ್ನು ಕಲಿತು ಬಂದ ವಿದ್ಯಾರ್ಥಿಗಳು ಓದುಗಾರಿಕೆ ಮತ್ತು ಬರವಣಿಗೆಯ ಕೌಶಲದಲ್ಲಿ ಪ್ರಾಮುಖ್ಯತೆ ಪಡೆಯಲು ಕಷ್ಟ ಪಡುತ್ತಾರೆ ಎಂದು ತಿಳಿಸಿದರು.

ಕನ್ನಡ ಕಲಿಕೆಯ ಅವಶ್ಯಕತೆ ಕುರಿತು ಪ್ರಶ್ನಿಸಿದಾಗ ಕರ್ನಾಟಕದ ರಾಜ್ಯ ಭಾಷೆಯಾದ ಕನ್ನಡವನ್ನು ಕಲಿಯಬೇಕು. ಅದು ಅವಶ್ಯಕ ಎಂದು ಪ್ರತಿಕ್ರಿಯೆ ನೀಡಿರುತ್ತಾರೆ. ಮಕ್ಕಳಿಗೆ ಪ್ರಾಥಮಿಕ ಹಂತದಿಂದ ಕನ್ನಡವನ್ನು ಕಲಿಸಬೇಕು. ಇಲ್ಲವಾದರಲ್ಲಿ ಹಿರಿಯ ಪ್ರಾಥಮಿಕ ಹಂತಕ್ಕೆ ಬಂದಾಗ ಕನ್ನಡ ಕಲಿಕೆ ಕಠಿಣವಾಗುತ್ತಿದೆ ಎಂದು ಅಭಿಪ್ರಾಯಪಟ್ಟರು. ಕನ್ನಡ ಕಲಿಕೆ ಬೇಕು. ಆದರೆ ಜಾಗತೀಕರಣದ ಈ ಸಂದರ್ಭದಲ್ಲಿ ಮಗುವನ್ನು ಸ್ಪರ್ಧಾತ್ಮಕ ಪರೀಕ್ಷೆಗೆ ಸಿದ್ಧಗೊಳಿಸಲು ಆಂಗ್ಲ ಭಾಷೆ ಕಡ್ಡಾಯವಾಗಿ ಬೇಕು. ಮಗುವನ್ನು ಉನ್ನತ ಶಿಕ್ಷಣಕ್ಕೆ ಅಣಿಗೊಳಿಸಲು ಹಾಗೂ ಸಮಾಜದಲ್ಲಿ ಉನ್ನತ ಗೌರವ ಸ್ಥಾನ ಪಡೆಯಲು ಇಂಗ್ಲಿಷ್ ಮಾಧ್ಯಮ ಬೇಕು ಎಂದು ಹಲವು ಪೋಷಕರು ಅಭಿಪ್ರಾಯ ವ್ಯಕ್ತಪಡಿಸಿದರು.

ಇಂಗ್ಲಿಷ್ ಅಂತರರಾಷ್ಟ್ರೀಯ ಮಟ್ಟದಲ್ಲಿ ಮಾನ್ಯತೆ ಪಡೆದ ಭಾಷೆಯಾಗಿರುವುದರಿಂದ ಇಂಗ್ಲಿಷ್ ಕಲಿಕೆ ಬೇಕು. ಜೊತೆಗೆ ತಾಂತ್ರಿಕ ಉದ್ಯೋಗ ಪಡೆಯಲು ಇಂಗ್ಲಿಷ್ ಮಾಧ್ಯಮ ಬೇಕು. ಒಟ್ಟಾರೆಯಾಗಿ ಅಭಿಪ್ರಾಯವನ್ನು ಗಮನಿಸಿದರೆ ಆಂಗ್ಲ ಮಾಧ್ಯಮದಲ್ಲಿ ಕನ್ನಡ

ಭಾಷೆಯನ್ನು ಒಂದು ವಿಷಯವಾಗಿ ಅಧ್ಯಯನ ಮಾಡಬೇಕು. ಸ್ವಲ್ಪಮಟ್ಟಿಗಾದರೂ ಕನ್ನಡದ ಜ್ಞಾನ ಸಂವಹನ ಕೌಶಲಗಳು ಬೇಕು. ಆದರೆ ಆಂಗ್ಲ ಮಾಧ್ಯಮವಾದ್ದರಿಂದ ಕನ್ನಡವನ್ನು ಕಲಿಯುವುದು ಸ್ವಲ್ಪಮಟ್ಟಿಗೆ ಕಠಿಣ. ಏಕೆಂದರೆ ಮಗು ಶಾಲಾ ಪರಿಸರದಲ್ಲಿ ಇಂಗ್ಲಿಷಿನ ಪ್ರಭಾವಕ್ಕೆ ಒಳಗಾಗುತ್ತದೆ. ಆದ್ದರಿಂದ ಕನ್ನಡ ಓದುವಾಗ ಮತ್ತು ಬರೆಯುವಾಗ ದೋಷಗಳನ್ನು ಮಾಡುತ್ತದೆ. ಕನ್ನಡ ಕಲಿಕೆಯನ್ನು ಸ್ಪಷ್ಟಪಡಿಸಬೇಕಾದರೆ ಪೂರ್ವ ಪ್ರಾಥಮಿಕ ಹಂತದಿಂದ ಕನ್ನಡವನ್ನು ಕಲಿಸುವುದು ಕಡ್ಡಾಯ ಮಾಡಬೇಕಿದೆ. ಶಾಲಾ ಪ್ರಾರಂಭದಿಂದ ಕನ್ನಡವನ್ನು ಕಲಿಸಿದರೆ ಮಗು ಭಾಷಾ ಪ್ರಭುತ್ವವನ್ನು ಪಡೆದುಕೊಳ್ಳುತ್ತೇವೆ. ಕನ್ನಡ ಭಾಷೆಯ ಬಗ್ಗೆ ಅರಿವು ಮೂಡುತ್ತದೆ. ಹಾಗೆಯೇ ಮಾತೃ ಭಾಷೆಯನ್ನು ಕಲಿತರೆ ಬೇರೆ ಭಾಷೆಗಳನ್ನು ಅರ್ಥಮಾಡಿಕೊಳ್ಳಲು ಸಹಕರಿಯಾಗುತ್ತದೆ. ಸರ್ಕಾರ ಕರ್ನಾಟಕದಲ್ಲಿ ಕನ್ನಡ ಭಾಷೆಯನ್ನು ಎಲ್ಲಾ ಕ್ಷೇತ್ರಗಳಲ್ಲಿ ಅಳವಡಿಸುವಂತೆ ನೀತಿ ನಿಯಮಾವಳಿಗಳನ್ನು ಜಾರಿಗೊಳಿಸಬೇಕು. ಕೇವಲ ಅಂಕ ಗಳಿಕೆಗಾಗಿ ಕನ್ನಡ ಕಲಿಯುವ ಮನೋಭಾವ ದೂರವಾಗಬೇಕು. ಕನ್ನಡ ನಮ್ಮ ರಾಜ್ಯ ಭಾಷೆ ಎನ್ನುವ ಅಭಿಮಾನದಿಂದ ಕನ್ನಡ ಭಾಷೆಯನ್ನು ಕಲಿಯಬೇಕು ಎಂದು ಪೋಷಕರು ತಮ್ಮ ಅನಿಸಿಕೆಗಳನ್ನು ತಿಳಿಸಿದರು.

ಒಟ್ಟಾರೆಯಾಗಿ ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಬೋಧಿಸುವ ಸಂದರ್ಭದಲ್ಲಿ ಶಿಕ್ಷಕರು ಎದುರಿಸುತ್ತಿರುವ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ. ಹಾಗೆಯೇ ಶಾಲಾ ಮುಖ್ಯಗುರುಗಳು ಮತ್ತು ವಿದ್ಯಾರ್ಥಿಗಳ ಪೋಷಕರಿಂದ ಕನ್ನಡ ಬೋಧನೆ ಮತ್ತು ಕಲಿಕೆ ಕುರಿತು ಪ್ರಶ್ನಾವಳಿಗಳನ್ನು ನೀಡಿ ಸಂಗ್ರಹಿಸಿದ ಅಭಿಪ್ರಾಯಗಳ ವಿಶ್ಲೇಷಣೆಯನ್ನು ಅಧ್ಯಯನದ ಮೂಲಕ ಗಮನಿಸಲಾಗಿದೆ. ಮುಖ್ಯಗುರುಗಳ ಮತ್ತು ಪೋಷಕರ ಯಾದೃಚ್ಛಿಕ ಮಾದರಿಗಳನ್ನು ಯಥಾವತ್ತಾಗಿ ಸ್ಕ್ಯಾನ್ ಮಾಡಿ ಅನುಬಂಧದಲ್ಲಿ ಹಾಕಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಕರೂರ ಎನ್.ಜಿ, ಶಿಕ್ಷಣ ಮಾರ್ಗ, ೨೦೧೧, ಸಪ್ನ ಬುಕ್ ಹೌಸ್, ಬೆಂಗಳೂರು, ಪು.೭೯

೨. ಅದೇ ಪು.೮೦

೩. ಅದೇ ಪು.೮೧

೪. ಕೊಂಗವಾಡ ಎನ್.ಬಿ, ಭಾಷೆ ಮತ್ತು ಕನ್ನಡ ಬೋಧನೆ, ೨೦೦೨, ವಿದ್ಯಾನಿಧಿ ಪ್ರಕಾಶನ, ಗದಗ, ಪು.೨೭೫

೫. ಅದೇ ಪು.೨೭೬

೬. ಅದೇ ಪು.೨೭೫

೭. ಅದೇ ಪು.೨೭೮

೮. ಕರ್ನಾಟಕ ಪ್ರಾಥಮಿಕ ಶಿಕ್ಷಣ ಪರೀಕ್ಷಾ ಮಂಡಳಿ ಅಂತರ್ಜಾಲ

೯. ಕರೂರ ಎನ್.ಜಿ, ಶಿಕ್ಷಣ ಮಾರ್ಗ, ೨೦೧೧, ಸಪ್ನ ಬುಕ್ ಹೌಸ್, ಬೆಂಗಳೂರು, ಪು.೮೦

## ಅಧ್ಯಾಯ : ಐದು

**ಭಾಷಾ ಕಲಿಕೆಯ ಸಮಸ್ಯೆಗಳು**

೫.೧. ಓದುಗಾರಿಕೆಯ ಸಮಸ್ಯೆಗಳು

೫.೨. ಬರವಣಿಗೆಯ ಸಮಸ್ಯೆಗಳು

೫.೩. ವಾಕ್ಯರಚನಾ ಸಮಸ್ಯೆಗಳು

ಸ್ವರಗಳು, ವ್ಯಂಜನಗಳು, ಗುಣಿತಾಕ್ಷರಗಳು, ಒತ್ತಕ್ಷರಗಳು, ನಾಮಪದ, ಕ್ರಿಯಾಪದದ ಸಮಸ್ಯೆಗಳು ಹಾಗೂ ಪರಿಹಾರೋಪಾಯಗಳು.

ಅಧ್ಯಾಯ : ಐದು

# ಭಾಷಾ ಕಲಿಕೆಯ ಸಮಸ್ಯೆಗಳು

ಭಾಷಾ ಕಲಿಕೆ ಕಲಿತ ಕ್ರಮವೇ ಹೊರತು ದೈವದತ್ತವಾದುದಲ್ಲ. ಮಗು ಅಥವಾ ವ್ಯಕ್ತಿ ತಾನು ಬಯಸಿದ ಭಾಷೆಗಳನ್ನು ಉದ್ದೇಶ ಪೂರ್ವಕವಾಗಿ ಕಲಿಯಬಹುದು. ಭಾಷಾ ಕಲಿಕೆ ಯಾಂತ್ರಿಕವಾದುದಲ್ಲ. ಅದು ಬಳಸುವುದರಿಂದ ಮತ್ತೊಬ್ಬರ ಒಡನಾಟದಿಂದ ಕ್ರಿಯಾಶೀಲವಾಗಿ ಯಾದೃಚ್ಛಿಕವಾಗಿ ಕಲಿಯುವಂತದ್ದು. ಇದೊಂದು ಮಾನಸಿಕ ಕ್ರಿಯೆಯಾಗಿದ್ದು, ಧ್ವನಿ ಸಂಕೇತಗಳು ಮತ್ತು ಲಿಪಿ ಸಂಕೇತಗಳಿಂದ ವ್ಯವಸ್ಥಿತವಾಗಿ, ಅರ್ಥಬದ್ಧವಾಗಿ ರಚನೆ ಆಗಿರುವ ಒಂದು ಕೌಶಲ. ಭಾಷಾ ಕಲಿಕೆ ಎಂದಾಕ್ಷಣ ಮಾತನಾಡುವುದಷ್ಟೇ ಅಲ್ಲ. ಅದನ್ನು ಮೀರಿ ಭಾಷಾ ಕೌಶಲಗಳಿಂದ ಓದುವುದು, ಬರೆಯುವುದು ಮತ್ತು ಚಿಂತಿಸುವ ಕೌಶಲಗಳನ್ನು ಬೆಳೆಸುವಂತದ್ದು.

ಭಾಷಾ ಕಲಿಕೆ ಒಂದು ಸಹಜ ಕ್ರಿಯೆ. ಜನಿಸಿದ ಮಗುವು ತಾಯಿಯ ಮಡಿಲಲ್ಲಿ ಸಹಜವಾಗಿ ತನ್ನ ತಾಯಿಯ ಭಾಷೆಯನ್ನು ಅನುಕರಣೆಯಿಂದ ಕಲಿಯುತ್ತದೆ. ಆದರೆ ಮಗು ಔಪಚಾರಿಕ ಶಿಕ್ಷಣಕ್ಕೆ ಬಂದಾಗ ಭಾಷಾ ಕಲಿಕೆ– ಬೋಧನೆಯು ಒಂದು ಅಧಿಕೃತ ಕೆಲಸವಾಗುತ್ತದೆ. ಭಾಷಾ ಕೌಶಲಗಳು, ಸಾಮರ್ಥ್ಯಗಳನ್ನು ಪ್ರಾಥಮಿಕ ಹಂತದಿಂದ ಕಲಿಸುವಾಗ ವೈಜ್ಞಾನಿಕ ಹಿನ್ನೆಲೆಯಲ್ಲಿ ಯೋಚಿಸಬೇಕು. ಭಾಷಾ ಕಲಿಕೆಯ ಸ್ವರೂಪವನ್ನು ಶಿಕ್ಷಣ ತಜ್ಞರು, ಮನೋವಿಜ್ಞಾನಿಗಳು ಮತ್ತು ಭಾಷಾಶಾಸ್ತ್ರಜ್ಞರು ತಮ್ಮ ತಮ್ಮ ರೀತಿಯಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಮಕ್ಕಳು ಭಾಷೆಯನ್ನು ಕಲಿಯುತ್ತಾರೆ ಎಂಬುದು ಎಲ್ಲರ ಅನುಭವದ ಸಂಗತಿ. ಶಾಲಾ ಶಿಕ್ಷಣಕ್ಕೆ ಬರುವ ಪೂರ್ವದಲ್ಲಿ ಮಗು ತನ್ನ ಮಾತೃ ಭಾಷೆಯನ್ನು ಕಲಿತಿರುತ್ತದೆ. ಆಲಿಸುವಿಕೆ ಮತ್ತು ಮಾತನಾಡುವ ಕೌಶಲಗಳಲ್ಲಿ ಸಾಮರ್ಥ್ಯವನ್ನು ಪಡೆದುಕೊಂಡಿರುತ್ತದೆ. ಆದರೆ ಶಾಲಾ ಶಿಕ್ಷಣದ ವಿಕಾಸದ ಹಂತದಲ್ಲಿ ಕನ್ನಡವನ್ನು ಮೊದಲ ಭಾಷೆಯಾಗಿ ಹೊಂದಿರದ ವಿದ್ಯಾರ್ಥಿಗಳಿಗೆ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಸುವ ಅಗತ್ಯ ಉಂಟಾಯಿತು. ಈ ರೀತಿಯ ವಿದ್ಯಾರ್ಥಿಗಳಿಗೆ ಕನ್ನಡ ಭಾಷಾ

ಸಾಮರ್ಥ್ಯ ಇರುವುದು ಅಥವಾ ಇಲ್ಲದಿರುವುದು ಶಿಕ್ಷಕರಿಗೆ, ಶಿಕ್ಷಣ ತಜ್ಞರಿಗೆ ಒಂದು ಪ್ರಶ್ನೆಯಾಗಿ ತೋರಿತು. ಈ ಗುಂಪಿನಲ್ಲಿ ಸೇರುವ ಎಷ್ಟೋ ವಿದ್ಯಾರ್ಥಿಗಳು ಕನ್ನಡವನ್ನು ಎರಡನೆಯ ಭಾಷೆಯನ್ನಾಗಿ ಶಾಲೆಯ ಹೊರಗೆ ಕಲಿತು ಬಳಸಿರುತ್ತಾರೆ. ಕನ್ನಡ ಮಾತೃಭಾಷೆಯಲ್ಲಿ ಮಕ್ಕಳು ಕನ್ನಡವನ್ನು ಓದುವಾಗ ಮತ್ತು ಬರೆಯುವಾಗ ಹಲವು ದೋಷಗಳನ್ನು ಎಸಗುತ್ತಿರುವುದನ್ನು ಅಧ್ಯಯನಗಳಿಂದ ಕಂಡುಕೊಳ್ಳಲಾಗಿದೆ. ಅನ್ಯ ಮಾತೃಭಾಷೆಯಲ್ಲೇ ಮಕ್ಕಳು ಕನ್ನಡ ಕಲಿಯುವ ಸಂದರ್ಭದಲ್ಲಿ ತೊಂದರೆಗಳನ್ನು ಎದುರಿಸುತ್ತಿರುವುದು ಪ್ರಸ್ತುತ ಚರ್ಚೆಗೊಳಪಟ್ಟ ವಿಷಯವಾಗಿದೆ. ಈ ನಿಟ್ಟಿನಲ್ಲಿ ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಭಾಷಾ ಕೌಶಲಗಳಾದ ಆಲಿಸುವಿಕೆ ಮತ್ತು ಮಾತುಗಾರಿಕೆಯ ಸಾಮರ್ಥ್ಯವನ್ನು ಈಗಾಗಲೇ ಪಡೆದಿರುವ ಮಗು ಶಾಲಾ ಹಂತದಲ್ಲಿ ಓದುವಿಕೆ ಮತ್ತು ಬರವಣಿಗೆಯ ಕೌಶಲಗಳ ಪರಿಣಿತಿಯನ್ನು ಪಡೆಯಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಆಂಗ್ಲ ಮಾಧ್ಯಮದಲ್ಲಿ ಕನ್ನಡ ಭಾಷೆಯನ್ನು ದ್ವಿತೀಯ ಭಾಷೆಯಲ್ಲಿ ಕಲಿಯುವ ಮಗು ಆಂಗ್ಲ ಮಾಧ್ಯಮದ ಪ್ರಭಾವದಿಂದಲೋ ಅಥವಾ ಇತರ ಮಾತೃಭಾಷೆಗಳಾದ ತೆಲುಗು, ಉರ್ದು, ಹಿಂದಿ ಮತ್ತು ತಮಿಳು ಭಾಷೆಗಳ ಕಲಿಕೆಯಿಂದ ಕನ್ನಡವನ್ನು ಕಲಿಯುವಾಗ ತೊಂದರೆಗೆ ಒಳಗಾಗುತ್ತಿದೆ. ಓದುವಾಗ ವ್ಯಂಜನ, ಒತ್ತಕ್ಷರ, ನಾಮಪದ, ಕ್ರಿಯಾಪದ, ವಿಭಕ್ತಿ, ಪ್ರತ್ಯಯಗಳನ್ನು ಉಚ್ಚಾರಣಾ ಸಂದರ್ಭದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಗಮನಿಸಬಹುದು. ಓದು ಒಂದು ಸ್ವೀಕೃತ ಕ್ರಿಯೆಯಾಗಿದೆ. ಮಗುವಿನ ಸರ್ವಾಂಗೀಣ ಅಭಿವೃದ್ಧಿಯಲ್ಲಿ ಓದುಗಾರಿಕೆಯು ಪ್ರಮುಖ ಪಾತ್ರ ನಿರ್ವಹಿಸುತ್ತದೆ.

**ಓದುಗಾರಿಕೆ ಅರ್ಥ ಮತ್ತು ಮಹತ್ವ**

ಓದುಗಾರಿಕೆ ಭಾಷಾ ಕೌಶಲ್ಯಗಳಲ್ಲೊಂದು. ಭಾಷೆಯು ಮೂಲತಃ ಧ್ವನಿವಾಗಿದೆ. ಭಾಷೆಯ ಮೂಲ ಧ್ವನಿಗೆ ವರ್ಣ ಎನ್ನುತ್ತಾರೆ. ಪ್ರತ್ಯೇಕ ವರ್ಣಕ್ಕೂ ಒಂದು ರೇಖಾಂಕಿತ ಸಂಕೇತವಿದ್ದು, ಅದನ್ನೇ ಲಿಪಿ ಎಂದು ಕರೆಯುತ್ತಾರೆ. "ಲಿಪಿಗಳು ಯಾಂತ್ರಿಕವಾಗಿ ಕಣ್ಣುಗಳ ಮುಖಾಂತರ ಪ್ರವೇಶಿಸಿ ಬಾಯಿಯ ಮುಖಾಂತರ ಧ್ವನಿಯಾಗಿ ಅಭಿವ್ಯಕ್ತ ಹೊಂದುವುದೇ ಓದುಗಾರಿಕೆ". ಓದುಗಾರಿಕೆ ಎಂದರೆ ಕೇವಲ ಅಕ್ಷರಗಳ ಪರಿಚಯವಲ್ಲ. ಅಕ್ಷರಗಳು ಒಂದಕ್ಕೊಂದು ಕೂಡಿ ಶಬ್ದವಾದಾಗ ಮಾತ್ರ ಅವುಗಳಿಗೆ ಒಂದು ಅರ್ಥ ಬರುತ್ತದೆ. ಒಂದು ಪೂರ್ಣ ಅರ್ಥ ಕೊಡುವ ಶಬ್ದಗಳ ಸಮೂಹವೇ ವಾಕ್ಯ.

ಓದುಗಾರಿಕೆ ಯಾಂತ್ರಿಕವಾಗಿರದೆ ಅರ್ಥಗ್ರಹಣ ಪೂರ್ವಕವಿರಬೇಕು. ಅಂದರೆ ಮಕ್ಕಳು ಅರ್ಥ ತಿಳಿದುಕೊಂಡು ಓದಬೇಕು. ಓದಿನಲ್ಲಿ ಸಂಕೇತ, ಧ್ವನಿ ಮತ್ತು ಅರ್ಥ ಈ ಮೂರು ಘಟಕಗಳಿರುತ್ತವೆ."[೧]

"ಓದು ಎಂದರೆ ಸಾಂಪ್ರದಾಯಿಕ ಸಂಕೇತಗಳ ರೂಪದಲ್ಲಿ ಬರೆದ ಬರಹವನ್ನು ಬಾಯ್ದೆರೆಯಾಗಿ ಮನಸ್ಸಿನಲ್ಲಿ ಯಾದೃಚ್ಛಿಕವಾಗಿ ಕಣ್ಣಲನೆಯ ಮುಖಾಂತರ ವಿಷಯ ಗ್ರಹಿಕೆ ಮಾಡುವುದಾಗಿದೆ."

**ವ್ಯಾಖ್ಯೆಗಳು**

ಬಿ.ವಿ.ರಮಣ ಅವರ ಪ್ರಕಾರ "ಲಿಪಿಗಳು ಯಾಂತ್ರಿಕ ರೀತಿಯಿಂದ ಕಣ್ಣುಗಳ ಮೂಲಕ ಪ್ರವೇಶಿಸಿ ಅಭಿವ್ಯಕ್ತಿತ್ವವನ್ನು ಪಡೆಯುವುದೇ ಓದುವಿಕೆ ಇಲ್ಲವೆ ಲಿಪಿಯು ಧ್ವನಿಯಾಗಿ ಪರಿವರ್ತನೆ ಹೊಂದುವುದು ಓದು".

"ಡಾ.ಅನಂತರಾಮು ಅವರ ಪ್ರಕಾರ: "ಲಿಪಿಗಳು ಯಾಂತ್ರಿಕವಾಗಿ ನೇತ್ರಗಳ ಮೂಲಕ ಮನಸ್ಸನ್ನು ಪ್ರವೇಶಿಸಿ ಗ್ರಹಿಸಲ್ಪಡುವ ಹಾಗೂ ಬಾಯಿಯ ಮುಖಾಂತರ ಧ್ವನಿಯಾಗಿ ಅಭಿವ್ಯಕ್ತವಾಗುವ ಕ್ರಿಯೆಯನ್ನು ಓದುಗಾರಿಕೆ ಎನ್ನಬಹುದೆಂದು ಹೇಳುತ್ತಾರೆ".[೨]

ಮೇಲಿನ ವ್ಯಾಖ್ಯಾನಗಳನ್ನು ಗಮನಿಸಿದಾಗ ಓದುಗಾರಿಕೆ ಒಂದು ಕೌಶಲವಾಗಿದ್ದು, ಜ್ಞಾನಾಭಿವೃದ್ಧಿಯನ್ನುಂಟು ಮಾಡುತ್ತದೆ. ವಿಮರ್ಶಾ ಮನೋಭಾವನೆಯನ್ನು ಬೆಳೆಸುತ್ತದೆ. ಧ್ವನ್ಯಂಗಗಳನ್ನು ಪುಷ್ಟೀಕರಿಸುವುದು. ಅರ್ಥಗ್ರಹಣ ಶಕ್ತಿಯನ್ನು ಬೆಳಸುತ್ತದೆ. ಓದುವುದು ಮಾನವನ ಪ್ರಾಥಮಿಕ ಅವಶ್ಯಕತೆಗಳಲ್ಲೊಂದಾಗಿದೆ.

**ಓದುಗಾರಿಕೆಯ ಮಹತ್ವ**

'ನಿಜವಾದ ಓದುಗಾರಿಕೆ ಮನುಷ್ಯನನ್ನು ವಜ್ರವನ್ನಾಗಿಸುತ್ತದೆ. ಬೆಳಕು ಅಲ್ಲಿ ಪ್ರತಿಫಲಿಸುತ್ತದೆ' ಎಂದು ಹಾ.ಮಾ.ನಾಯಕ[೩] ಅವರು ಹೇಳಿರುವುದನ್ನು ಗಮನಿಸಬಹುದು. ಓದಿನ ಮೂಲಕವಾಗಿ ನಾವು ಕಾಲ ದೇಶಗಳನ್ನು ಮೀರಿ ಸಂಪರ್ಕವನ್ನು ಸ್ಥಾಪಿಸಿಕೊಳ್ಳುವುದು ಸಾಧ್ಯ. ಓದು ನಮ್ಮ ತಿಳುವಳಿಕೆಗೆ ಹೆಚ್ಚಿನ ದೃಢತೆಯನ್ನು ತಂದು ಕೊಡುತ್ತದೆ.

- ಓದುಗಾರಿಕೆಯಿಂದಾಗಿ ಭಾಷಾ ಸಾಮಿಪ್ಯ ಉಂಟಾಗುತ್ತದೆ.
- ಓದುವಿಕೆಯಿಂದ ವಿರಾಮ ಕಾಲದ ಸದುಪಯೋಗವಾಗುತ್ತದೆ.
- ವಿಮರ್ಶಾ ಶಕ್ತಿ ಬೆಳೆಯುತ್ತದೆ.

- ಅರ್ಥ ಗ್ರಹಣ ಶಕ್ತಿ ಬೆಳೆಯುತ್ತದೆ.
- ಸತತ ಅಭ್ಯಾಸ ಮನೋಭಾವನೆ ಬೆಳೆಯುತ್ತದೆ.
- ಶಬ್ದ ಭಂಡಾರ ಅಧಿಕಗೊಳ್ಳುತ್ತದೆ.
- ಸ್ಮರಣ ಶಕ್ತಿ ಹೆಚ್ಚುತ್ತದೆ.
- ಓದುಗಾರಿಕೆಯು ಮಾತುಗಾರಿಕೆಯನ್ನು ಪೋಷಿಸುತ್ತದೆ.
- ಓದುಗಾರಿಕೆಯು ಆತ್ಮ ಸಂತೋಷವನ್ನುಂಟು ಮಾಡುತ್ತದೆ.
- ಮಾನವೀಯ ಮೌಲ್ಯಗಳನ್ನು ಮತ್ತು ನೈತಿಕತೆಯನ್ನು ಬೆಳಸುತ್ತದೆ.

ಒಟ್ಟಾರೆಯಾಗಿ ಭಾಷಾ ಕೌಶಲ್ಯಗಳಲ್ಲಿ ಓದುವುದು ಪ್ರಮುಖವಾಗಿರುತ್ತದೆ. ಇದನ್ನು ಆಲೋಚನಾ ಕ್ರಿಯೆಯಂತಲೂ ಕರೆಯಬಹುದು ಸಾಮಾನ್ಯವಾಗಿ ಓದುವುದು ಎಂದರೆ ಅಭ್ಯಾಸ ಮಾಡುವುದು ಹಾಗೂ ಕಲಿಯುವುದು ಎಂದರ್ಥ. ಓದುಗಾರಿಕೆಯಲ್ಲಿ ಕನ್ನಡ ಭಾಷಾ ಕಲಿಕೆಯು ಬಹುಮುಖ್ಯವಾದ ಅಂಶವಾಗಿದೆ. ಕನ್ನಡ ಭಾಷೆ ಕೇವಲ ಒಂದು ಭಾಷೆಯಾಗಿ ಮಾತ್ರವಲ್ಲದೇ ಕರ್ನಾಟಕದಲ್ಲಿ ಮಧ್ಯಮವಾಗಿಯೂ ಪಾತ್ರ ನಿರ್ವಹಿಸುತ್ತಿದೆ. ಆದರೆ ಪ್ರಸ್ತುತ ಕರ್ನಾಟಕದಲ್ಲಿ ಆಂಗ್ಲ ಮಾಧ್ಯಮದ ಪ್ರಭಾವ ಹೆಚ್ಚುತ್ತಿದ್ದು, ಕನ್ನಡವನ್ನು ಒಂದು ಭಾಷೆಯಲ್ಲಿ ಕಲಿಯುವವರ ಸಂಖ್ಯೆ ಅಧಿಕವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಮಕ್ಕಳು ಕನ್ನಡ ಭಾಷಾ ತರಗತಿಗಳಲ್ಲಿ ಏನನ್ನು ಕಲಿಯುತ್ತಿದ್ದಾರೆ? ಹೇಗೆ ಕಲಿಯುತ್ತಿದ್ದಾರೆ? ಕಲಿಯುವಾಗ ಸಮಸ್ಯೆಗಳು ಉಂಟಾಗಲು ಕಾರಣಗಳು ಏನು? ಯಾರು ಇದಕ್ಕೆ ಕಾರಣ? ಎಂಬುದನ್ನು ವಿವಿಧ ಆಯಾಮಗಳಲ್ಲಿ ಪರಿಶೀಲಿಸಿ ಅರ್ಥೈಸಿಕೊಳ್ಳಬೇಕಾಗಿದೆ.

ಕನ್ನಡ ಭಾಷಾ ಕೌಶಲಗಳನ್ನು ನಾಲ್ಕು ವಿಧಗಳಲ್ಲಿ ಗುರುತಿಸಲಾಗಿದೆ. ಆಲಿಸುವುದು, ಮಾತನಾಡುವುದು, ಓದುವುದು ಮತ್ತು ಬರೆಯುವುದು. ಆಲಿಸುವ ಮತ್ತು ಮಾತನಾಡುವ ಕೌಶಲಗಳನ್ನು ಮಗು ತನ್ನ ಸಾಮಾಜಿಕ ವಲಯದೊಂದಿಗೆ ಮಾಡುವ ಪ್ರತಿ ವರ್ತನೆಯಿಂದ ಕಲಿತ್ತಿರುತ್ತದೆ. ಆದರೆ ಓದುವ ಮತ್ತು ಬರೆಯುವ ಸಾಮರ್ಥ್ಯಗಳನ್ನು ಗಳಿಸಲು ಮಗು ಉದ್ದೇಶ ಪೂರ್ವಕವಾಗಿ ಕಲಿಕೆಯಲ್ಲಿ ಭಾಗವಹಿಸಬೇಕಾಗುತ್ತದೆ.

ಓದುಗಾರಿಕೆಯು ಒಂದು ಸ್ವೀಕೃತ ಕ್ರಿಯೆಯಾಗಿರುತ್ತದೆ. ಅಲ್ಲದೆ ಉತ್ಪಾದಕ ಕೌಶಲವಾಗಿಯೂ ಕೆಲಸ ಮಾಡುತ್ತದೆ. ಆಧುನಿಕ ಪ್ರಪಂಚದಲ್ಲಿ ಮಾನವ ನೆಮ್ಮದಿಯಿಂದ ಮತ್ತು ಸುಖ ಸಂತೋಷದಿಂದ ಬಾಳಲು ಓದು ಅಗತ್ಯವಾಗಿರುತ್ತದೆ. ಓದು ಬಲ್ಲವನು ತನ್ನ ಆಶೋತ್ತರಗಳನ್ನು ಸುಲಭವಾಗಿ ಈಡೇರಿಸಿಕೊಳ್ಳಬಲ್ಲನು ಹಾಗೂ ಓದಿನಿಂದ

ಜ್ಞಾನಾರ್ಜನೆಯ ಬುನಾದಿ ಅಪೂರ್ಣ ಮಾನವನನ್ನು ಪೂರ್ಣ ಮಾನವನನ್ನಾಗಿ ಮಾಡುತ್ತದೆ. ಒಟ್ಟಾರೆ ವ್ಯಕ್ತಿ ಮತ್ತು ಸಮಾಜದ ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ, ಆಡಳಿತಾತ್ಮಕ, ಭಾವನಾತ್ಮಕ ಉನ್ನತಿಗಾಗಿ ಓದುವುದು ಮಹತ್ವ ಎನಿಸಿದೆ.[೪]

**ಅಧ್ಯಯನದ ವಿಶ್ಲೇಷಣೆ**

ಕನ್ನಡ ಭಾಷಾ ಕಲಿಕೆಯ ಸಮಸ್ಯೆಗಳು ಎಂಬ ಅಧ್ಯಾಯದಲ್ಲಿ ಕನ್ನಡ ಭಾಷಾ ಕಲಿಕಾರ್ಥಿಗಳು ಕನ್ನಡ ಓದುವಾಗ, ಬರೆಯುವಾಗ, ಸಮಸ್ಯೆ ಎದುರಿಸುತ್ತಿದ್ದಾರೆ ಎಂಬುದು ಇಂದಿನ ದಿನಗಳಲ್ಲಿ ಕೇಳಿಬರುತ್ತಿರುವ ಚರ್ಚೆಯಾಗಿದೆ. ಪ್ರಥಮ ಭಾಷೆಯಾಗಿ ಕನ್ನಡ ಮಾಧ್ಯಮದಲ್ಲಿ ಕನ್ನಡವನ್ನು ಕಲಿಯುವ ವಿದ್ಯಾರ್ಥಿಗಳೇ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದರ ಕುರಿತು ಹಲವಾರು ಅಧ್ಯಯನಗಳು ನಡೆದಿವೆ. ಪ್ರಸ್ತುತ ಸಂದರ್ಭದಲ್ಲಿ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಓದುವಾಗ ಮತ್ತು ಬರೆಯುವಾಗ ಪದಾದಿ, ಪದಮಧ್ಯ ಮತ್ತು ಪದಾಂತ್ಯದಲ್ಲಿ ವ್ಯತ್ಯಾಸಗಳನ್ನು ಮಾಡುತ್ತಾರೆ. ಇದಕ್ಕೆ ಕಾರಣವೇನು? ಎಂಬುದನ್ನು ಗುರುತಿಸುವ ಸಲುವಾಗಿ ಆಂಗ್ಲ ಮಾಧ್ಯಮ ಮಕ್ಕಳ ಕನ್ನಡ ಭಾಷಾ ಕಲಿಕಾ ಸಮಸ್ಯೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

ಓದುಗಾರಿಕೆಯ ಸಮಸ್ಯೆಗಳು ಎಂಬ ಅಧ್ಯಾಯದಲ್ಲಿ ಮನೆಯ ಮಾತು ಕನ್ನಡವಾಗಿದ್ದು, ಅಥವಾ ಅನ್ಯ ಭಾಷೆಯಾಗಿದ್ದು, ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವಾಗ ಎದುರಿಸುತ್ತಿರುವ ಸಮಸ್ಯೆಗಳನ್ನು ಗಮನಿಸುವುದಾಗಿದೆ. ಓದುಗಾರಿಕೆ ಮತ್ತು ಬರವಣಿಗೆಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇಂತಹ ಕಲಿಕಾ ಸಮಸ್ಯೆಗಳನ್ನು ಗುರುತಿಸುವ ಸಲುವಾಗಿ ಆರು ನೂರು ವಿದ್ಯಾರ್ಥಿಗಳನ್ನು ಪರೀಕ್ಷೆಗೆ ಒಳಪಡಿಸಲಾಗಿದೆ.

ಬಳ್ಳಾರಿ ನಗರ ಪ್ರದೇಶದಲ್ಲಿ ೨೫ ಹಿರಿಯ ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ೫, ೬ ಮತ್ತು ೭ನೇ ತರಗತಿಯ ಮಕ್ಕಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ೩೦೦ ಹೆಣ್ಣು ಮಕ್ಕಳು ಮತ್ತು ೩೦೦ ಗಂಡು ಮಕ್ಕಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿತ್ತು. ಈ ಎಲ್ಲಾ ವಿದ್ಯಾರ್ಥಿಗಳು ಆಂಗ್ಲ ಮಾಧ್ಯಮದಲ್ಲಿ ಕನ್ನಡ ಭಾಷೆಯನ್ನು ಕಲಿಯುತ್ತಿರುವಾಗ ಎದುರಿಸುತ್ತಿರುವ ಕನ್ನಡ ಭಾಷಾ ಕಲಿಕಾ ಸಮಸ್ಯೆಗಳನ್ನು ಗುರುತಿಸುವ ಸಲುವಾಗಿ ಪ್ರಶ್ನಾವಳಿಗಳನ್ನು ನೀಡಿ ಮಾಹಿತಿಯನ್ನು ಪಡೆದುಕೊಳ್ಳಲಾಯಿತು. ಓದುಗಾರಿಕೆ ಸಮಸ್ಯೆಗಳಾದ ಸ್ವರಾಕ್ಷರ, ವ್ಯಂಜನಾಕ್ಷರ, ಗುಣಿತಾಕ್ಷರ ಪದಗಳನ್ನು ಓದುವಾಗ ಮತ್ತು ಒತ್ತಕ್ಷರ ಪದಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳನ್ನು ಗಮನಿಸಲು ಆಯಾ

ತರಗತಿಯ ಪಠ್ಯ ಪುಸ್ತಕಗಳಲ್ಲಿನ ಪಾಠಗಳನ್ನು ಓದಿಸಿ ಧ್ವನಿ ಮುದ್ರಣ ಯಂತ್ರದಲ್ಲಿ ಧ್ವನಿ ಮುದ್ರಣ ಮಾಡಿಕೊಳ್ಳಲಾಯಿತು. ನಂತರ ಮುದ್ರಿತ ಧ್ವನಿಯನ್ನು ಕೇಳಿ ಮಕ್ಕಳು ಯಾವ ರೀತಿಯಾಗಿ ವ್ಯತ್ಯಾಸಗಳನ್ನು ಮಾಡಿ ಓದುತ್ತಾರೆ ಎಂಬುದನ್ನು ಗಮನಿಸಿ ಅದಕ್ಕೆ ಕಾರಣಗಳನ್ನು ಮತ್ತು ಪರಿಹಾರಗಳನ್ನು ನೀಡಲಾಗಿದೆ.

ಪ್ರಾಥಮಿಕ ಹಂತದಲ್ಲಿ ಮಕ್ಕಳು ಕನ್ನಡ ಕಲಿಕಾ ಹಂತದಲ್ಲಿರುತ್ತಾರೆ. ಅವರಿಗೆ ಭಾಷಾ ಪ್ರೌಢಿಮೆ ಬೆಳೆದಿರುವುದಿಲ್ಲ. ಕೇವಲ ವರ್ಣಮಾಲೆ, ಪದಗಳು, ಗುಣಿತಾಕ್ಷರಗಳ ಜ್ಞಾನವನ್ನು ಸ್ವಲ್ಪ ಮಟ್ಟಿಗೆ ಗ್ರಹಿಸಿಕೊಂಡಿರುತ್ತಾರೆ. ಹಿರಿಯ ಪ್ರಾಥಮಿಕ ಹಂತದಲ್ಲಿ ಸ್ವರಗಳು, ವ್ಯಂಜನಗಳು, ಗುಣಿತಾಕ್ಷರಗಳು ಮತ್ತು ಒತ್ತಕ್ಷರಗಳ ನಡುವಿನ ವ್ಯತ್ಯಾಸಗಳನ್ನು ಗ್ರಹಿಸಲು ಸಿದ್ಧರಾಗಿರುತ್ತಾರೆ. ಆದರೂ ಸಂಪೂರ್ಣವಾಗಿ ಭಾಷಾ ಕಲಿಕೆಯಲ್ಲಿ ಪ್ರೌಢಿಮೆಯನ್ನು ಪಡೆದಿರುವುದಿಲ್ಲ. ದ್ವಿತೀಯ ಭಾಷೆಯಾಗಿ ಕನ್ನಡ ಕಲಿಕೆಯಲ್ಲಿ ಸಮಸ್ಯೆಗಳನ್ನು ಎದುರಿಸುವುದು ಸಾಮಾನ್ಯವಾದ ಅಂಶವಾಗಿರುತ್ತದೆ. ಇವೆಲ್ಲಾ ಅಂಶಗಳನ್ನು ಗಮನಿಸಿದಾಗ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಭಾಷೆಯನ್ನು ಗ್ರಹಿಸಿಕೊಂಡು ಓದುವಾಗ ಎದುರಿಸುತ್ತಿರುವ ಸಮಸ್ಯೆಗಳನ್ನು ಈ ಕೆಳಗಿನಂತೆ ಗಮನಿಸಿ ವಿಶ್ಲೇಷಿಸಲಾಗಿದೆ.

**೫.೧.೧ ಸ್ವರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು**

ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಸಿ ಓದುವುದು.

**ಪದಾದಿ ಸಮಸ್ಯೆ**

| **ಬರಹ ರೂಪ** | **ಓದುವ ರೂಪ** |
|---|---|
| ಆಳರಸು | ಅಲರಸು |
| ಆಕಾಶ | ಅಕಾಸ |
| ಆದರ | ಅದರ |
| ಆಡಿ | ಅಡಿ |
| ಆಳು | ಅಳು |
| ಆಡುನುಡಿ | ಅಡುನುಡಿ |

**ಈ>ಇ**

| | |
|---|---|
| ಈಡು | ಇಡು |
| ಈ ಕ್ಷಣ | ಇ ಕ್ಷಣ |

| | |
|---|---|
| ಈಳಿಗೆ | ಇಳಿಗೆ |
| ಈಶಾನ್ಯ | ಇಸನ್ಯ |
| ಈಡೇರು | ಇಡೇರು |

ಊ>ಉ

| | |
|---|---|
| ಊದು | ಉದು |
| ಊರು | ಉರು |
| ಊಹೆ | ಉಹೆ |
| ಊಳಿಗ | ಉಳಿಗ |

ಐ>ಎ

| | |
|---|---|
| ಐತಕ್ಕೆ | ಎತಕ್ಕೆ |
| ಐಕದಂತ | ಎಕದಂತ |
| ಐರು | ಎರು |
| ಐರಿಳಿತ | ಎರಿಳಿತ |
| ಐಣಿ | ಎಣಿ |

ಓ>ಒ

| | |
|---|---|
| ಓದು | ಒದು |
| ಓರಗಿತ್ತಿ | ಒರಗಿತ್ತಿ |
| ಓರಗೆ | ಒರಗೆ |
| ಓಲಗ | ಒಲಗ |
| ಓಗರ | ಒಗರ |

➤ ಪದಮಧ್ಯ ಪರಿಸರ

| | ಬರಹ ರೂಪ | ಓದುವ ರೂಪ |
|---|---|---|
| ಆ>ಅ | ಆಚಾರವಂತ | ಆಚರವಂತ |
| | ಉಪಾಹಾರ | ಉಪಹಾರ |
| | ದಿನಾಲು | ದಿನಲು |

| | | |
|---|---|---|
| | ಪಿಯಾನು | ಪಿಯನು |
| | ಸ್ವಗ್ರಾಮ | ಸ್ವಗ್ರಮ |
| ಈ>ಇ | ನೀರಸ | ನಿರಸ |
| | ಈಶ | ಇಶ |
| | ಜೀವಶಾಸ್ತ್ರ | ಜಿವಸ್ತಾ |
| | ಕೀಚಕ | ಕಿಚಕ |
| | ಕಡಗೀಲು | ಕಡಗಿಲು |
| ಊ>ಉ | ನೂರಾರು | ನುರಾರು |
| | ಗೂಡು | ಗುಡು |
| | ಸಮೂಹ | ಸಮುಹ |
| | ಕೂಟ | ಕುಟ |
| | ನೂಕು | ನುಕು |
| ಏ>ಎ | ಗೇರು | ಗೆರು |
| | ಬೇರೆ | ಬೆರೆ |
| | ಮೇರು | ಮೆರು |
| | ಏತ | ಎತ |
| | ಸೇರಿಸು | ಸೆರಿಸು |
| ಓ>ಒ | ಜೋರು | ಜೊರು |
| | ಗೋಲಿ | ಗೊಲಿ |
| | ಮೋಸ | ಮೊಸ |
| | ಗೋವು | ಗೊವು |
| | ಮೇಲೆ | ಮೆಲೆ |

**ಪದಾಂತ್ಯ ಪರಿಸರ**

| | ಬರಹರೂಪ | ಓದುವ ರೂಪ |
|---|---|---|
| ಆ>ಅ | ಶಾಲಾ | ಶಾಲ |
| | ಯೋಗಾ | ಯೋಗ |
| | ವಿವೇಚನಾ | ವಿವೇಚನ |

| | | |
|---|---|---|
| ಈ>ಇ | ಕಾಯಿರೀ | ಕಾಯಿರಿ |
| | ಬರ್ರೀ | ಬರಿ |
| | ಫೀ | ಪಿ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಸ್ವರಗಳನ್ನು ಓದುವಾಗ ಧೀರ್ಘ ಸ್ವರಗಳಿಗೆ ಹ್ರಸ್ವರ ಸ್ವರಗಳನ್ನು ಪದಾದಿ, ಪದಮಧ್ಯ ಮತ್ತು ಪದಾಂತ್ಯದಲ್ಲಿ ಬಳಸಿರುವುದನ್ನು ಗಮನಿಸಬಹುದು.

- ಆಡುಮಾತಿನಲ್ಲಿ ದೀರ್ಘ ಸ್ವರಗಳ ಬಳಕೆ ಮಾಡಿ ಮಾತನಾಡುವುದು. ಇದು ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರುತ್ತದೆ. ಅವರ ಪೋಷಕರು ಆಡುವ ಮಾತುಗಳನ್ನು ಮಕ್ಕಳು ಅನುಕರಣೆ ಮಾಡಿರುತ್ತಾರೆ.
- ಸ್ವರಗಳ ಉಚ್ಚಾರಣೆಯಲ್ಲಿನ ಧ್ವನಿ ಸಾಮ್ಯತೆಯನ್ನು ಗಮನಿಸದೆ ಓದುವುದು.
- ಬೋಧಕರು ಹೇಳುವಾಗ ಸರಿಯಾಗಿ ಗ್ರಹಿಸಿಕೊಳ್ಳದಿರುವುದು.
- ಶಿಕ್ಷಕರು ಸ್ವತಃ ತಾವೇ ಸರಿಯಾದ ಉಚ್ಚಾರಣೆ ಮಾಡದೇ ಇರುವುದರಿಂದ ಶಿಕ್ಷಕರನ್ನೇ ಅನುಕರಣೆ ಮಾಡುವ ವಿದ್ಯಾರ್ಥಿಗಳ ಶಿಕ್ಷಕರು ಮಾಡಿದಂತಹ ತಪ್ಪುಗಳನ್ನೇ ಉಚ್ಚಾರಣೆಯ ಸಂದರ್ಭದಲ್ಲಿಯೂ ಎಸಗುತ್ತಾರೆ.
- ಆಲಿಸುವಿಕೆಯಲ್ಲಿನ ದೋಷದಿಂದಾಗಿ ವಿದ್ಯಾರ್ಥಿಗಳು ಸ್ವರಗಳನ್ನು ವ್ಯತ್ಯಾಸ ಮಾಡಿ ಉಚ್ಚಾರಣೆ ಮಾಡುತ್ತಾರೆ.
- ಮಕ್ಕಳಿಗೆ ಹ್ರಸ್ವಸ್ವರ ಹಾಗೂ ದೀರ್ಘ ಸ್ವರಗಳ ಬಗ್ಗೆ ಸ್ಪಷ್ಟವಾದ ಉಚ್ಚಾರಣೆ ಮಾಡುವಂತೆ ತಿಳಿಸದಿರುವುದು. ಈ ರೀತಿಯಲ್ಲಿ ವಿದ್ಯಾರ್ಥಿಗಳು ಸ್ವರಗಳನ್ನು ವ್ಯತ್ಯಾಸ ಮಾಡಿ ಓದುವುದು ಕಂಡು ಬರುತ್ತದೆ.
- ಸ್ವರಗಳಿಗೆ ಬದಲಾಗಿ ವ್ಯಂಜನಗಳನ್ನು ಬಳಕೆ ಮಾಡಿ ಓದುತ್ತಾರೆ.

| | **ಬರಹರೂಪ** | **ಓದುವ ರೂಪ** |
|---|---|---|
| **ಆ>ಹಾ** | ಆಮೆ | ಹಾಮೆ |
| | ಆವರಿಸು | ಹಾವರಿಸು |
| | ಆರೈಕೆ | ಹಾರೈಕೆ |
| | ಆರಿಸು | ಹಾರಿಸು |

| | | |
|---|---|---|
| | ಆಗಾಗ | ಹಾಗಾಗ |
| | ಆರಂಭ | ಹಾರಂಭ |
| **ಈ>ಹಿ** | ಈಶ | ಹಿಸ |
| | ಈರಮ್ಮ | ಹೀರಮ್ಮ |
| | ಈಡಿಗ | ಹೀಡಿಗ |
| | ಈಟಿ | ಹಿಟಿ |
| | ಈಸು | ಹಿಸು |
| | ಈಶ್ವರ | ಹಿಶವರ |
| **ಋ>ರು** | ಋಷಿ | ರುಷಿ |
| | ಋಜು | ರುಜು |
| | ಋಗ್ವೇದ | ರುಗ್‌ವೇದ |
| | ಋಣ | ರುಣ |
| | ಋಣಾನುಬಂಧ | ಋಣಾನುಬಂದ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಸ್ವರಗಳಿಗೆ ಬದಲಾಗಿ ವ್ಯಂಜನಗಳನ್ನು ಬಳಕೆ ಮಾಡಿ ಓದುತ್ತಾರೆ. ಈ ರೀತಿಯ ವ್ಯತ್ಯಾಸ ಮಾಡಿ ಓದುವುದನ್ನು ಗಮನಿಸಿದರೆ ಇದಕ್ಕೆ ಕಾರಣ.

- 'ಅ' ಕಾರಕ್ಕೆ ಮತ್ತು 'ಹ' ಕಾರಕ್ಕೂ ಇರುವ ಧ್ವನಿ ವ್ಯತ್ಯಾಸ ತಿಳಿಯದಿರುವುದು.
- ಸ್ವರ 'ಆ' ಮತ್ತು 'ಹಾ' ಕಾರಕ್ಕೆ ಮಧ್ಯೆ ಸಾಮ್ಯತೆ ಏಕರೂಪದಿಂದ ಕೂಡಿರುವುದು.
- ಆಂಗ್ಲ ಮಾಧ್ಯಮದ ಪ್ರಭಾವದಿಂದ ಓದುವಿಕೆಯಲ್ಲಿ ಭಿನ್ನತೆ ಕಂಡು ಬರುತ್ತಿದೆ.
- 'ಈ' ಮತ್ತು 'ಋ' ಸ್ವರಗಳ ಬಳಕೆ ಕಡಿಮೆ ಇರುವುದು ಒಂದು ಕಾರಣವಾಗಿದೆ.
- ಅನುಸ್ವರ ಹಾಗೂ ವಿಸರ್ಗಗಳನ್ನು ಲೋಪ ಮಾಡಿ ಓದುವುದು

| ಬರಹರೂಪ | ಓದುವ ರೂಪ |
|---|---|
| ಅಂಬಿಗ | ಅಬಿಗ |
| ಮಂದಿ | ಮದಿ |
| ಇಂಚರ | ಇಚರ |

| | |
|---|---|
| ಕಂದರ | ಕದರ |
| ಕಂದ | ಕದ |
| ಬಂದ | ಬದ |
| ಅಂತಃಕರಣ | ಅತಕರಣ |
| ಅಂತಃಪಟ | ಅತಮಟ |
| ಅಂತಃಸ್ಥ | ಅಂತಸ್ತು |

**ವಿಶ್ಲೇಷಣೆ**

'ಅನುಸ್ವರ' ಮತ್ತು 'ವಿಸರ್ಗ' ಪದಗಳನ್ನು ಓದುವಾಗ ಅವುಗಳನ್ನು ಗಮನಿಸದೇ ಓದುವುದು ಕಂಡುಬರುತ್ತದೆ. ಅನುಸ್ವರ ಒಂದು ಅಕ್ಷರ ಎಂದು ಶಿಕ್ಷಕರು ಬೋಧಿಸದೇ ಇರುವುದು ಮತ್ತು ಮಕ್ಕಳು ಅದನ್ನು ಸೊನ್ನೆ, ಎರಡು ಸೊನ್ನೆ ಎಂದು ಕರೆಯುತ್ತಾರೆ. ಇದನ್ನು ವಿದ್ಯಾರ್ಥಿಗಳೇ ಹೇಳಿರುವುದನ್ನು ಗಮನಿಸಲಾಗಿದೆ. ಈ ಪದಗಳಿಗೆ ಪರಿಸರದ ಭಾಷೆಯಲ್ಲಿ ಬೇರೆ ಪದಗಳನ್ನು ಬಳಸಿರುವುದು ಕಂಡುಬರುತ್ತದೆ.

| **ಬರಹರೂಪ** | **ಓದುವ ರೂಪ** |
|---|---|
| ಅಂಬಿಗ | ನಾವಿಕ |
| ಮಂದಿ | ಜನ |
| ಕಂದ | ಮಗು |
| ಅಂತಃಕರಣ | ಕರುಣೆ |

ಈ ರೀತಿಯಾಗಿ ಅನುಸ್ವರ ಪದಗಳಿಗೆ ಇತರೆ ಪದಗಳನ್ನು ಬಳಸುವುದರಿಂದ ಅನಸ್ವರ ಮತ್ತು ವಿಸರ್ಗಗಳನ್ನು ಬಳಸದೇ ಇರುವುದು ಕಾರಣವಾಗುತ್ತದೆ.

- ವಿದ್ಯಾರ್ಥಿಗಳಿಗೆ ಶಿಕ್ಷಕರು ಪ್ರಾರಂಭದಿಂದ ಅನುಸ್ವರ ಮತ್ತು ವಿಸರ್ಗಗಳ ಸ್ಪಷ್ಟ ವ್ಯತ್ಯಾಸವನ್ನು ತಿಳಿಸದಿರುವುದು.
- ಆಂಗ್ಲಭಾಷೆಯಲ್ಲಿ ಉಚ್ಚಾರಣಾ ವ್ಯತ್ಯಾಸಗಳಿಲ್ಲದಿರುವುದು ಒಂದು ಕಾರಣವಾಗಿದೆ.
- ಅನುಸ್ವರ ಒಂದು ಅಕ್ಷರ ಎಂದು ಗಮನಿಸದೇ ಇರುವುದು.
- ದಿನನಿತ್ಯ ಬಳಕೆಯಲ್ಲಿ ಬಳಸದಿರುವುದು.
- ಸಂಧ್ಯಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು

ಪದಾದಿ ಪರಿಸರ

| | ಬರಹ ರೂಪ | ಓದುವ ರೂಪ |
|---|---|---|
| ಐ>ಅಯ್ | ಐಮಂಗಲ | ಅಯಮಂಗಲ |
| | ಐಸಿರಿ | ಅಯಿಸಿರಿ |
| | ಐಕ್ಯ | ಅಯಿಕ್ಯ |
| | ಐದೆ | ಅಯಿದೆ |
| | ಐದು | ಅಯಿದು |
| ಔ>ಅವ್ | ಔದಾರ್ಯ | ಅವುದಾರ್ಯ |
| | ಔತಣಕೂಟ | ಅವುತವಕೂಟ |
| | ಔಪಸನೆ | ಅವ್‌ಪಾಸನ |
| | ಔಷಧ | ಅವಶದ |
| | ಔಚಿತ್ಯ | ಅವಚಿತ |

ಪದಮಧ್ಯ ಪರಿಸರ

| | ಬರಹ ರೂಪ | ಓದುವ ರೂಪ |
|---|---|---|
| ಐ>ಯಿ | ಕೈಮರ | ಕಯಮರ |
| | ಕೈತುತ್ತು | ಕಯ್‌ತುತ್ತು |
| | ಮೈಲಿಗಲ್ಲು | ಮಯಿಲುಗಲ್ |
| | ಪೈರು | ಪಯರು |
| | ರೈತ | ರಯತ |
| | ಬೈಬಲ್ | ಬೆಯಿಬಲ್ಲು |
| ಔ>ಅವ್ | ಗೌರವ | ಗವುರವ |
| | ಪೌಳಿ | ಪವುಳಿ |
| | ಸೌಲಭ್ಯ | ಸವಲಬ |
| | ಮೌನ | ಮವುನ |
| | ಕೌಶಲ | ಕವಸಲ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಈ ರೀತಿಯಾಗಿ ಸಂಧ್ಯಕ್ಷರಗಳಾದ 'ಐ' ಹಾಗೂ 'ಔ' ಗಳನ್ನು ಪದಾದಿ, ಪದಮಧ್ಯ ಮತ್ತು ಪದಾಂತ್ಯ ಪರಿಸರದಲ್ಲಿ ಓದುವಾಗ ಕೆಲವು ಬಗೆಯ ಸಮಸ್ಯೆಗಳನ್ನು ಎದುರಿಸುತ್ತಾರೆ. ಈ ರೀತಿಯಾಗಿ ವ್ಯತ್ಯಾಸ ಮಾಡಿ ಓದುತ್ತಿದ್ದಾರೆ. ಬಳ್ಳಾರಿ ನಗರ ಪ್ರದೇಶವು ವಿಶೇಷವಾಗಿ ಬಹುಭಾಷಿಕ ನಗರವಾಗಿರುವುದರಿಂದ ಇಲ್ಲಿನ ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡವನ್ನು ಅಭ್ಯಾಸ ಮಾಡುವಂತಹ ಸಂದರ್ಭದಲ್ಲಿ ಸಂಧ್ಯಕ್ಷರಗಳನ್ನು ವ್ಯತ್ಯಾಸವಾಗಿ ಓದುತ್ತಾರೆ. ಸಂಧ್ಯಕ್ಷರಗಳ ಉಚ್ಚಾರಣೆ ಹಾಗೂ ಬರಹಕ್ಕೂ ಇರುವ ಭಿನ್ನತೆಯನ್ನು ಗಮನಿಸದೆ ಇರುವುದು, ಶಿಕ್ಷಕರು ಉಚ್ಚಾರಣೆಯಲ್ಲಿನ ದೋಷ, ವಿದ್ಯಾರ್ಥಿಗಳ ಗ್ರಹಿಸುವಿಕೆಯಲ್ಲಿನ ದೋಷ, ವಿದ್ಯಾರ್ಥಿಗಳ ಮಾತೃ ಭಾಷೆಯ ಪ್ರಭಾವ ಇತ್ಯಾದಿ ಕಾರಣಗಳಿಂದ ಈ ರೀತಿಯ ವ್ಯತ್ಯಾಸವು ಓದಿನಲ್ಲಿ ಕಂಡು ಬರುತ್ತದೆ.

**೫.೧.೨ ವ್ಯಂಜನಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು**

- **ಮಹಾಪ್ರಾಣಕ್ಕೆ ಅಲ್ಪಪ್ರಾಣ ಧ್ವನಿಗಳನ್ನು ಉಚ್ಚರಿಸುವುದು.**

**ಪದಾದಿ ಪರಿಸರ**

| | ಬರಹ ರೂಪ | ಓದುವ ರೂಪ |
|---|---|---|
| ಖ>ಕ | ಖಂಡಿತ | ಕಂಡಿತ |
| | ಖಡ್ಗ | ಕಡಗ |
| | ಖರೆ | ಕರೆ |
| | ಖರ್ಚು | ಕರ್ಚು |
| | ಖೂನಿ | ಕೂನಿ |
| ಘ>ಗ | ಘಟಕ | ಗಟಕ |
| | ಘಾಟು | ಗಾಟು |
| | ಘಟ್ಟ | ಗಟ್ಟ |
| | ಘನತೆ | ಗನತೆ |
| | ಘರ್ಷಣೆ | ಗರ್‌ಸಣೆ |

| | | |
|---|---|---|
| **ಛ>ಚ** | ಛಂದ | ಚದ |
| | ಛಲ | ಚಲ |
| | ಛತ್ರಿ | ಚತಿರಿ |
| | ಛೀಮಾರಿ | ಚಿಮರಿ |
| | ಛಾಪ | ಚಾಪ |
| **ಝ>ಜ** | ಝಳ | ಜಲ |
| | ಝೇಂಕಾರ | ಜೆಕಾರ |
| | ಝುಂಡಾ | ಜಂಡ |
| | ಝರಿ | ಜರಿ |
| | ಝಂಪು | ಜಂಪು |
| **ಠ>ಟ** | ಠರಾವು | ಟರವು |
| | ಠಾಣೆ | ಟಣೆ |
| | ಠಿಕಾಣಿ | ಟಿಕಣ |
| | ಠುಸ್ | ಟುಸ್ |
| | ಠಾವು | ಠವ್ |
| **ಢ>ಡ** | ಢಾಲು | ಡಲ್ |
| | ಢಗೆ | ಡಗೆ |
| | ಢಾಳ | ಡಳ |
| | ಢಕ್ಕೆ | ಡಖ್ಖೆ |
| **ಥ>ತ** | ಥಟ್ಟನೆ | ತಟ್ಟದೆ |
| | ಥಳಕು | ತಳಕು |
| | ಥಳಥಳ | ತಲ್‌ತಲ್ |
| | ಥೈಲಿ | ತೈಲಿ |
| **ಧ>ದ** | ಧನ್ಯ | ದನ್ಯ |
| | ಧೂಳ್ | ದುಳ್ |
| | ಧಾವಿಸು | ದಾವಿಸು |

| | | |
|---|---|---|
| | ಧೀಮಂತ | ದಿಮಂತ |
| | ಧುರೀಣ | ದುರಿಣ |
| ಫ>ಪ | ಫಕೀರ | ಪಕಿರ |
| | ಫಣಿ | ಪಣಿ |
| | ಫಲಿತ | ಪಲಿತ |
| | ಫಾಲ್ಗುಣ | ಪಲ್‌ಗುಣ |
| | ಫಲಕ | ಪಲಕ |
| ಭ>ಬ | ಭಾಗಶಃ | ಬಾಗಶಅ |
| | ಭಟ | ಬಟ |
| | ಭತ್ತ | ಬತ್ತ |
| | ಭರಣಿ | ಬರಣಿ |
| | ಭರವಸೆ | ಬರವಸೆ |

**ಪದಮಧ್ಯ ಪರಿಸರ**

| | ಬರಹ ರೂಪ | ಓದುವ ರೂಪ |
|---|---|---|
| ಖ>ಕ | ಕಾರ್ಖಾನೆ | ಕಾರ್‌ಕಾನೆ |
| | ಮುಖ್ಯಾಂಶ | ಮುಕ್ಯಂಸ |
| | ದಖ್ಖನ್ | ದಕನ್ |
| | ಅಖಿಲ | ಅಕಿಲ |
| ಘ>ಗ | ಸಂಘ | ಸಂಗ |
| | ಸಂಘಟನೆ | ಸಂಗಟನೆ |
| | ಮೇಘರಾಜ | ಮೆಗರಾಜ್ |
| | ಲಂಘನೆ | ಲಂಗನ |
| ಛ>ಚ | ಮೂರ್ಛನ | ಮುರುಚನ |
| | ಮೂರ್ಛೆ | ಮುರುಚೆ |
| | ಊಂಛಾ | ಉಂಚ |

| | | |
|---|---|---|
| **ಠ>ಟ** | ಕಠಿಣ | ಕಟಿನ |
| | ಪೀಠಿಕೆ | ಪಿಟಿಕೆ |
| | ಪಾಠಿ | ಪಾಟಿ |
| | ಕಠೋರ | ಕಟೋರ |
| **ಥ>ತ** | ಸಾರಥಿ | ಸರತಿ |
| | ಅಥಣಿ | ಅತನಿ |
| | ಅಥವಾ | ಅತವ |
| | ಯಥೇಚ್ಛ | ಎತೆಚ |
| **ಧ>ದ** | ಅಭಯ | ಅಬಯ |
| | ಅಧರ್ಮ | ಅದರ್ಮ |
| | ಅಧಿಕೃತ | ಅದಿಕೃತ |
| | ಅಧೀನ | ಅದಿನ |
| | ಅಧ್ಯಕ್ಷ | ಅದ್ಯಕ್ಷ |
| **ಫ>ಪ** | ಕಫ | ಕಪ |
| | ಸಫಲ | ಸಪಲ |
| | ರೇಫೆ | ರೆಪೆ |
| | ಜಾಫರ್ | ಜಪರ್ |
| | ಆಫ್ತಾ | ಅಪ್ತ |
| **ಭ>ಬ** | ಅಭಿನಯ | ಅಬಿನಯ |
| | ವಿಭಜನೆ | ವಿಬಜನೆ |
| | ಗರ್ಭ | ಗರ್ಬ |
| | ದರ್ಭೆ | ದರಬೆ |
| | ಸಂಭಾವನೆ | ಸಂಬವನೆ |

**ವಿಶ್ಲೇಷಣೆ**

ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಓದುತ್ತಿರುವ ವಿದ್ಯಾರ್ಥಿಗಳು ಕನ್ನಡ ಮಾತೃ ಭಾಷೆ ಅಲ್ಲದೆ ಅನ್ಯ ಮಾತೃ ಭಾಷೆಯಿಂದಲೂ ಬಂದು ಒಂದು

ಪ್ರದೇಶದಲ್ಲಿ ಕನ್ನಡವನ್ನು ಕಲಿಯುತ್ತಿದ್ದಾರೆ. ಇವರಿಗೆ ಪ್ರಾಥಮಿಕ ಹಂತದಲ್ಲಿ ವರ್ಣಮಾಲೆಯನ್ನು ಓದಿಸುವಾಗ ಈ ಆಂಗ್ಲ ವರ್ಣಮಾಲೆ, ಎ, ಬಿ, ಸಿ. ಡಿ, ಯ ಉಚ್ಚಾರಣೆಯಂತೆಯೇ ಅಲ್ಪಪ್ರಾಣ, ಮಹಾಪ್ರಾಣ ವ್ಯತ್ಯಾಸವಿಲ್ಲದೆ ಉಚ್ಚರಣೆ ಮಾಡಿರುವುದು ಈ ರೀತಿಯ ವ್ಯತ್ಯಾಸಕ್ಕೆ ಮುಖ್ಯ ಕಾರಣವಾಗಿದೆ.

- ಆಂಗ್ಲ ವರ್ಣಮಾಲೆಯಲ್ಲಿ ಯಾವುದೇ ಧ್ವನಿ ವ್ಯತ್ಯಾಸಗಳಿಲ್ಲದಿರುವುದು ಒಂದು ಕಾರಣವಾಗಿದೆ.
- ಶಾಲೆಯಲ್ಲಿ ಆಡುಮಾತಿನಲ್ಲಿ ಕನ್ನಡದ ಬಳಕೆ ಕಡಿಮೆ ಇರುವುದು.
- ಪ್ರಾಥಮಿಕ ಹಂತದಲ್ಲಿ ವರ್ಣಮಾಲೆಯ ಗ್ರಹಿಕೆಯಿಲ್ಲದಿರುವುದು.
- ಮನೆಯ ಪರಿಸರದಲ್ಲಿ ತೆಲುಗು, ಉರ್ದು, ಮರಾಠಿ, ಪ್ರಭಾವವಿರುವುದು.
- ವಿದ್ಯಾರ್ಥಿಗಳು ಓದುವಾಗ ಶಿಕ್ಷಕರು ತಪ್ಪುಗಳನ್ನು ತಿದ್ದದೆ ಇರುವುದು.
- ವಿದ್ಯಾರ್ಥಿಗಳ ಪರಿಸರದಲ್ಲಿ ಮಹಾಪ್ರಾಣಾಕ್ಷರಗಳ ಬಳಕೆ ಇಲ್ಲದಿರುವುದು.

ಆಂಗ್ಲ ಮಾಧ್ಯಮ ಭಾಷೆಯ ಪ್ರಭಾವ ಹೆಚ್ಚಾಗಿರುವುದು, ಬೋಧಕರು ಮಕ್ಕಳಿಗೆ ಧ್ವನಿಯ ಏರಿಳಿತವನ್ನು ಗಟ್ಟಿಯಾಗಿ ವಾಚನದ ಮೂಲಕ ರೂಢಿ ಮಾಡಿಸಬೇಕು. ಅಲ್ಪಪ್ರಾಣ ಮತ್ತು ಮಹಾಪ್ರಾಣಗಳನ್ನು ಉಚ್ಚರಿಸುವಾಗ ಇರುವ ವ್ಯತ್ಯಾಸಗಳನ್ನು ತಿಳಿಸಿ ಹೇಳದೇ ಇರುವುದು ಒಂದು ಕಾರಣವಾಗಿದೆ.

ಇತ್ತೀಚೆಗೆ ಭಾಷಾ ವಿಜ್ಞಾನಿಗಳು ಮಹಾ ಪ್ರಾಣಾಕ್ಷರಗಳನ್ನು ಕನ್ನಡದಿಂದ ತೆಗೆದು ಹಾಕಬೇಕು ಎಂದು ಚರ್ಚಿಸುತ್ತಿರುವುದನ್ನು ಗಮನಿಸಬಹುದಾಗಿದೆ. ಡಿ.ಎಸ್.ಶಂಕರಭಟ್ಟರು, ಕೆ.ವಿ.ನಾರಾಯಣ, ಆರ್.ಚಲಪತಿ ಅವರು ಈ ಸಾಲಿಗೆ ಸೇರಿದವರಾಗಿದ್ದಾರೆ.

- **ಅನುನಾಸಿಕ ಪದಗಳನ್ನು ವ್ಯತ್ಯಾಸ ಮಾಡಿ ಓದುವುದು.**

**ಪದಮದ್ಯ ಹಾಗೂ ಪದಾಂತ್ಯ ಶಬ್ದಗಳಲ್ಲಿ**

| | ಬರಹ ರೂಪ | ಓದುವ ರೂಪ |
|---|---|---|
| ಣ>ನ | ಪರಿಗಣಿಸು | ಪರಿಗನಿಸು |
| | ಗಣಪ | ಗನಪ |
| | ಕಣ್ಣು | ಕನ್ನು |
| | ಉಣ್ಣು | ಉನ್ನು |

| | |
|---|---|
| ಬಣ | ಬನ |
| ಕಣಜ | ಕನಜ |
| ಕರುಣಿಸು | ಕರುನಿಸು |
| ಪ್ರಾಣಿಗಳು | ಪ್ರಾನಿಗಳು |
| ಶೋಷಣೆ | ಸೋಶನೆ |
| ಶರಣ | ಶರನ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಅನುನಾಸಿಕ ಶಬ್ದಗಳನ್ನು ವ್ಯತ್ಯಾಸ ಮಾಡಿ ಓದುವುದಕ್ಕೆ ಕಾರಣವೇನೆಂದರೆ, ಅನುನಾಸಿಕ ಶಬ್ದಗಳ ಉಚ್ಚಾರಣೆಯಲ್ಲಿನ ಧ್ವನಿಯ ಸಾಮ್ಯತೆ ಒಂದೇ ರೀತಿಯಾಗಿರುತ್ತದೆ. ಅನುನಾಸಿಕ ಪದಗಳು ಸ್ಪಷ್ಟವಾಗಿ ತಿಳಿಯದೇ ಇರುವುದು. ಇದಕ್ಕೆ ಮತ್ತೊಂದು ಕಾರಣವೆಂದರೆ ವಿದ್ಯಾರ್ಥಿಗಳ ಮನೆಮಾತು ಅನ್ಯ ಭಾಷೆಯಾಗಿರುವುದು. ಇಲ್ಲಿ ತೆಲುಗು ಭಾಷೆಯನ್ನಾಡುವ ಮಕ್ಕಳು ಓದುವಾಗ ಅವರು ಕಣ್ಣು ಎನ್ನುವುದಕ್ಕೆ ಕನ್ನು ಎನ್ನುತ್ತಾರೆ. ಇಲ್ಲಿ ಮಕ್ಕಳಿಗೆ ಅನುನಾಸಿಕ ಪದಗಳನ್ನು ಉಚ್ಚಾರಣೆ ಮಾಡಲು ಮಕ್ಕಳು ನಾಲಿಗೆಯು ಹೊರಳದೆ ಇರುವುದು ಒಂದು ಕಾರಣವಾಗಿದೆ. ಉರ್ದು ಭಾಷಿಕ ಮಕ್ಕಳೂ ಸಹ ಅನುನಾಸಿಕ ಶಬ್ದಗಳನ್ನು ಉಚ್ಚಾರಣೆ ಮಾಡುವಾಗ 'ಣ' ಕಾರ ಪದಗಳನ್ನು 'ನ' ಕಾರವಾಗಿ ಓದುತ್ತಾರೆ. ಕಾರಣ ಶಿಕ್ಷಕರು ಬೋಧಿಸುವಾಗ 'ಣ' ಎಂದು ಉಚ್ಚರಿಸಿದರು. ವಿದ್ಯಾರ್ಥಿಗಳು ಅದನ್ನು 'ನ' ಎಂದು ಆಲಿಸುವುದು ಒಂದು ಕಾರಣವಾಗಿದೆ. ಕನ್ನಡವನ್ನು ಮನೆ ಮಾತಾಗಿ ಹೊಂದಿರುವ ಮಕ್ಕಳಲ್ಲಿಯೂ ಈ ರೀತಿಯ ಸಮಸ್ಯೆಗಳನ್ನು ಕಾಣಬಹುದು. ಬರೆಯುವ ಸಂದರ್ಭದಲ್ಲಿ ಒತ್ತಕ್ಷರವನ್ನು ಬಿಟ್ಟು ಬರೆಯುವುದನ್ನು ಗಮನಿಸಲಾಗಿದೆ. ಉದಾಹರಣೆಗೆ ಜಂಬಣ್ಣ, ಅಣ್ಣ, ಕಣ್ಣು, ಮಣ್ಣು, ಸುಣ್ಣ ಇಂತಹ ಪದಗಳನ್ನು ಬರೆದಾಗ ಒತ್ತಕ್ಷರ 'ಣ' ಇಲ್ಲದೆ ಬರೆದಿರುವುದನ್ನು ಗಮನಿಸಲಾಗಿದೆ. ಉಚ್ಚಾರಣೆ ಮಾಡುವಂತೆ ಬರೆಯುವುದನ್ನು ಇಲ್ಲಿ ಕಂಡುಬರುತ್ತದೆ.

**ಶ,ಷ,ಸ ಧ್ವನಿಗಳಲ್ಲಿ ವ್ಯತ್ಯಾಸಗಳು**

| | **ಬರಹ ರೂಪ** | **ಓದುವ ರೂಪ** |
|---|---|---|
| **ಶ>ಸ** | ಶಾರದ | ಸಾರದ |
| | ಶಶಾಂಕ | ಸಸಾಂಕ |
| | ಶರಣ | ಚರಣ |

| | | |
|---|---|---|
| | ಶತಾಯುಷಿ | ಸತಾಯುಷಿ |
| | ಶತಕ | ಸತಕ |
| ಷ>ಸ | ಷಡಕ್ಷರಿ | ಸಡಕ್ಷರಿ |
| | ಷಡ್ಗುಣ | ಸಡಗುಣ |
| | ಷಟ್ಕೋನ | ಸಟ್ಕೋನ |
| | ಷೋಕಿ | ಸೊಕಿ |

**ಪದ ಮಧ್ಯ ಶಬ್ದಗಳು**

| | ಬರಹ ರೂಪ | ಓದುವ ರೂಪ |
|---|---|---|
| ಶ>ಸ | ನಶೆ | ನಸೆ |
| | ಕಶೇರು | ಕಸೇರು |
| | ಗೋಶಾಲೆ | ಗೋಸಾಲೆ |
| | ರಾಶಿ | ರಾಅ |
| | ನಶಿಸು | ನಸಿಸು |
| ಷ>ಸ | ಗೋಷ್ಠಿ | ಗೋಸಿಟಿ |
| | ದೋಷಾರೋಪ | ದೋಸಾರೋಪ |
| | ನಷ್ಟಪರಿಹಾರ | ನಸ್‌ಟ ಪರಿಹಾರ |
| | ತ್ರಿಷಷ್ಠಿ | ತ್ರಿಷಸ್‌ಟಿ |

**ವಿಶ್ಲೇಷಣೆ**

ವಿದ್ಯಾರ್ಥಿಗಳು 'ಶ', 'ಷ', 'ಸ' ಧ್ವನಿಗಳ ಬಳಕೆಯನ್ನು ಮಾಡುವಾಗ ಹೆಚ್ಚು ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಕಾರಣ ಆಂಗ್ಲಮಾಧ್ಯಮದಲ್ಲಿ ,'ಜಿ', 'ಶ್, ಶೀ' ಎನ್ನುವ ವ್ಯಂಜನ, ಧ್ವನಿ ಪ್ರಯೋಗ ಮಾಡಿದಾಗ ಉಚ್ಚಾರಣೆಯಲ್ಲಿ ಯಾವುದೇ ವ್ಯತ್ಯಾಸಗಳಿಲ್ಲದಿರುವುದಾಗಿದೆ. ಎಸ್. ಅಕ್ಷರದ ಬಳಕೆ ಮಾಡಿ ಮಕ್ಕಳ ಶ, ಷ, ಸ ಧ್ವನಿಗಳ ಬಳಕೆಯನ್ನು ಹಾಗೆಯೇ ಮಾಡುತ್ತಾರೆ. ಓದುವಾಗ ಗಮನಿಸುವುದಿಲ್ಲ.

- ಶ, ಷ, ಸ, ಕಾರಗಳ ಉಚ್ಚರಣೆಯ ಸ್ಪಷ್ಟವಾದ ಪರಿಕಲ್ಪನೆ ಇಲ್ಲದಿರುವುದು.
- ತೆಲುಗು ಉರ್ದು, ಭಾಷಿಕ ಮಕ್ಕಳ ಮಾತೃ ಭಾಷೆಯ ಪ್ರಭಾವ ಇರುವುದು.

- ಪರಿಸರದಲ್ಲಿ ಶ, ಷ ಅಕ್ಷರಗಳ ಹೆಚ್ಚಿನ ಬಳಕೆ ಇಲ್ಲದೆ ಇರುವುದು ಒಂದು ಕಾರಣವಾಗಿದೆ.
- ಶ, ಷ, ಸ ಧ್ವನಿ ಉತ್ಪತ್ತಿ ಸ್ಥಾನಗಳ ಬಗ್ಗೆ ಶಿಕ್ಷಕರಲ್ಲಿ ಸ್ಪಷ್ಟ ಕಲ್ಪನೆ ಇಲ್ಲದಿರುವುದು.
- ಬೋಧನೆಯ ಸಂದರ್ಭದಲ್ಲಿ ಧ್ವನಿಗಳ ವ್ಯತ್ಯಾಸವನ್ನು ಗುರುತಿಸದೇ ಓದುವುದು ಒಂದು ಕಾರಣವಾಗಿದೆ.
- ದಿನ ನಿತ್ಯದ ಬಳಕೆಯಲ್ಲಿ ಶ, ಷ, ಕಾರಗಳಿಗೆ ಬದಲಾಗಿ 'ಸ' ಕಾರವನ್ನೇ ಹೆಚ್ಚು ಬಳಸುವುದು.
- 'ಹ' ಕಾರಕ್ಕೆ ಬದಲಾಗಿ ಹ್ರಸ್ವ ಸ್ವರ ಬಳಕೆ

**ಪದಾದಿ ಪರಿಸರ**

| | **ಬರಹ ರೂಪ** | **ಓದುವ ರೂಪ** |
|---|---|---|
| **ಹ>ಅ** | ಹತಬಲ | ಅತಬಲ |
| | ಹಲವಾರು | ಹಲವಾರು |
| | ಹಗಲು | ಅಗಲು |
| | ಹನಿಗನ | ಅನಿಗವನ |
| | ಹಜಾಮ | ಅಜಾಮ |
| | ಹಾಲು | ಆಲು |
| | ಹಂಬಲ | ಅಂಬಲ |

**ಪದಮಧ್ಯ**

| | **ಬರಹ ರೂಪ** | **ಓದುವ ರೂಪ** |
|---|---|---|
| **ಹ>ಅ** | ಪಹರೆ | ಪಹರೆ |
| | ಬಹದ್ದೂರ್ | ಬಅದ್ದೂರ್ |
| | ಮೋಹನ | ಮೊಅನ |
| | ಬಹಿರಂಗ | ಬಅರಂಗ |
| | ವಿಹಂಗಮ | ವಿಅಂಗಮ |
| | ರಹದಾರಿ | ರಅದಾರಿ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ವ್ಯಂಜನ ಹ ಧ್ವನಿಗೆ ಬದಲಾಗಿ ಸ್ವರ ಧ್ವನಿಯಾದ ಅ ಕಾರವನ್ನು ಬಳಕೆ ಮಾಡಿ ಓದುತ್ತಾರೆ. ಇಲ್ಲಿ ವಿದ್ಯಾರ್ಥಿಗಳಿಗೆ ಅಕ್ಷರಗಳ ಉಚ್ಚಾರಣೆ ಸರಿಯಾಗಿ ತಿಳಿಯದೇ ಇರುವುದೇ ಕಾರಣವಾಗಿದೆ.

- 'ಹ' ಕಾರ ಮತ್ತು 'ಅ' ಕಾರಗಳ ನಡುವಿನ ಅರ್ಥ ವ್ಯತ್ಯಾಸ ತಿಳಿಯದೆ ಓದುವುದು.
- ಬೋಧಕರು ಹ > ಅ ಕಾರ ಧ್ವನಿ ವ್ಯತ್ಯಾಸಗಳನ್ನು ಸೂಕ್ಷ್ಮವಾಗಿ ಬೋಧಿಸದೆ ಇರುವುದು ಕಾರಣವಾಗಿದೆ.
- 'ಹೆಚ್.' ಧ್ವನಿಯನ್ನು ಸಾಮಾನ್ಯವಾಗಿ ಬಳಸುವ ವಿದ್ಯಾರ್ಥಿಗಳು ಉದಾಹರಣೆ ಹಟ್, ಹೌವ್, ಹಲೋ, ಹೌವ್‌ಮೆನಿ ಎಂಬ ಪದಗಳನ್ನು ಬಳಸಿ ಅಭ್ಯಾಸವಾಗುತ್ತದೆ. ಆಂಗ್ಲ ಭಾಷೆಯ ಪ್ರಭಾವ ಇಲ್ಲಿ 'ಹ' ಮತ್ತು 'ಅ' ಕಾರಂತ ಧ್ವನಿಗಳನ್ನು ಬಳಸುವಲ್ಲಿ ಪರಿಣಾಮ ಬೀರುತ್ತಿರುವುದನ್ನು ಗಮನಿಸಬಹುದಾಗಿದೆ.

**೫.೧.೨ ಗುಣಿತಾಕ್ಷರಗಳ ಓದುಗಾರಿಕೆ**

- ' ಾ>'

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ತಲಕಟ್ಟು ದೀರ್ಘವನ್ನು ಬಳಕೆ ಮಾಡದೆ ಓದುವುದು ಕಂಡು ಬರುತ್ತದೆ. ಈ ರೀತಿಯ ವ್ಯತ್ಯಾಸವು ಬಹುತೇಕ ಮಕ್ಕಳಲ್ಲಿ ಕಂಡು ಬರುತ್ತದೆ.

| ' ಾ' ಬರಹ ರೂಪ | ಓದುವ ರೂಪ |
|---|---|
| ಪಾರಿಜಾತ | ಪರೀಜಾತ |
| ಮಾನವೀಯ | ಮನವಿಯ |
| ರಾಮಾಯಣ | ರಮಾಯಾಣ |
| ಬಾಣಸವಾಡಿ | ಬಣಸವಾಡಿ |
| ಬಾಲಕ | ಬಲಾಕ |
| ಮಾರುತಿ | ಮರುತಿ |

• ‘ೀ>’

ಪದಾದಿ ಮತ್ತು ಪದ ಮಧ್ಯ ಪರಿಸರದಲ್ಲಿ ಮಕ್ಕಳು (ೀ) ಇಳಿಯನ್ನು ಬಳಕೆ ಮಾಡದೆ ಓದುವುದು ಕಂಡು ಬರುತ್ತದೆ. ಈ ರೀತಿಯ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಮಾತ್ರ ಇದೆ. ಉದಾಹರಣೆ

| ಬರಹ ರೂಪ | ಓದುವ ರೂಪ |
|---|---|
| ಬೀಳು | ಬಿಳು |
| ಸಮೀಪ | ಸಮಿಪ |
| ಬೇರೆ ಬೇರೆ | ಬೆರೆಬೆರೆ |
| ತೀರ | ತಿರ |
| ಪೀಡಿಸು | ಪಿಡಿಸು |
| ಬೇಡು | ಬೆಡು |
| ಕೇಳುಗ | ಕೆಳೂಗ |

• ‘ೂ ು’

ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ ಕೊಂಬೊಂದು ದೀರ್ಘವು ಲೋಪ ಮಾಡಿ ಕೊಂಬು ಮಾತ್ರವನ್ನೇ ಓದುವುದು ಕಂಡು ಬರುತ್ತದೆ. ಈ ರೀತಿಯ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಸೂಚನೆ | ಸುಚನೆ |
| ರೂಪ | ರುಪ |
| ಚೂಪು | ಚುಪು |
| ಮೂಡಲು | ಮಡಲು |
| ಮೂಸು | ಮುಸು |
| ಸೂಚಕ | ಸುಚಕ |

• ‘ೃ > ್ರ’

ಪದಾದಿ ಮತ್ತು ಪದಾಂತ್ಯ ಸಂದರ್ಭಧಲ್ಲಿ ವಟ್ಟಸುಳಿ ( ೃ )ಯನ್ನು ಬಳಸುವ ಬದಲಿಗೆ ಗುಡಿಸಿ ಅಥವಾ ಕೊಂಬನ್ನು ನೀಡಿ ರ ಕಾರದ ಒತ್ತಕ್ಷರಗಳನ್ನು ಬಳಕೆ ಮಾಡಿ ಓದುತ್ತಾರೆ. ಇದರಿಂದ ಅಕ್ಷರ ಉಚ್ಚಾರಣೆಯಲ್ಲಿ ಬದಲಾವಣೆ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಗೃಹಭಂಗ | ಗ್ರುಹಬಂಗ |
| ಕೃಪೆ | ಕುರಪೆ |
| ಕೃಷ್ಣ | ಕ್ರುಷ್ಣ |
| ಕೃತಜ್ಞ | ಕ್ರುತಗ್ನ |

● ‘ ೀ ‘

ಪದಮಧ್ಯ ಪರಿಸರದಲ್ಲಿ ಐತ್ವಧೀಘ( ೀ)ವನ್ನು ಓದದೇ ಇರುವುದು ಕಂಡು ಬರುತ್ತದೆ. ಈ ರೀತಿಯ ವ್ಯತ್ಯಾಸ ಕೆಲವು ಮಕ್ಕಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಬೇಗನೆ | ಬೆಗನೆ |
| ಅಪೇಕ್ಷೆ | ಅಪೆಕ್ಷೆ |
| ಸೇರುವ | ಸೆರುವ |
| ಶೇಂಗಾ | ಸೆಂಗಾ |
| ಮೇಲೆ | ಮೆಲೆ |

● ’ೋ> ೊ’

ಪದಮಧ್ಯ ಪರಿಸರದಲ್ಲಿ ಓತ್ವಧೀರ್ಘ( ೋ) ವನ್ನು ಬಳಸೆ ಓದುವುದು ಕಂಡು ಬರುತ್ತದೆ. ಈ ರೀತಿಯಾಗಿ ಬಹುತೇಕ ಮಕ್ಕಳು ಓದುತ್ತಾರೆ.

| ಬರಹ ರೂಪ | ಓದುವ ರೂಪ |
|---|---|
| ಗೋಲಿಬಾರ್ | ಗೊಲಿಬರು |
| ಕೋರು | ಕೊರು |
| ನೋಟ್ | ನೊಟ್ |
| ಕೋಪಾಗ್ನಿ | ಕೊಪಾಗ್ನಿ |
| ಕೋಲ್ಮಿಂಚು | ಕೊಲುಮಿಂಚು |

● ‘ ೌ> ಅವ್’

ಪದಾದಿ ಪರಿಸರದಲ್ಲಿ ಔತ್ವಧೀರ್ಘ( ೌ) ವನ್ನು ಓದದೇ ಆಯಾ ವ್ಯಂಜನದ ಮುಂದೆ ‘ಅವ’ ಕಾರವನ್ನು ಬಳಸಿ ಓದುವುದು ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಕೌಂಗು | ಕವಂಗು |
| ಕೌಲು | ಕವಲು |
| ಕೌಶಲ | ಕವಸಲ |
| ದೌಡು | ದವಡು |
| ಭೌತಿಕ | ಬಉತಿಕ |

ಪದಾದಿ ಪರಿಸರದಲ್ಲಿ ಗುಣತಾಕ್ಷರ 'ಹಾ' ಹೈ ಧ್ವನಿಗಳ ಬದಲಾಗಿ ಆ, ಐ ಧ್ವನಿಗಳನ್ನು ಬಳಸಿ ಓದುತ್ತಾರೆ. ಈ ರೀತಿಯ ವ್ಯತ್ಯಾಸ ೫ ಮತ್ತು ೬, ೭ನೇ ವಿದ್ಯಾರ್ಥಿಗಳಲ್ಲಿ ಕಂಡು ಬರುತ್ತದೆ. ಕಾರಣ ಹೆಚ್. ಮತ್ತು ಐ ವರ್ಣಮಾಲೆಯ ಉಚ್ಚಾರಣೆಯ ಪ್ರಭಾವ.

| ಬರಹ ರೂಪ | ಓದುವ ರೂಪ |
|---|---|
| ಹಾಲುಗಲ್ಲ | ಆಲುಗಲ್ಲ |
| ಹಾಲುಮತ | ಆಲುಮತ |
| ಹಾಲು | ಆಲು |
| ಹೈರಾಣ | ಐರಾಣ |
| ಹೈನು | ಐನು |

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ಧಾ, ಧೀ, ಧೋ ಬದಲು ದಾ, ದಿ, ದು, ದೊ ಎಂದು ಓದುತ್ತಾರೆ. ಆಂಗ್ಲಭಾಷೆಯಲ್ಲಿ 'ದ' 'ದಿ' ಒಂದೇ ಧ್ವನಿಯಲ್ಲಿ ಉಚ್ಚರಿಸುವುದು. ಕಾರಣ 'ಧಾ' 'ದಾ' ವ್ಯಂಜನಗಳ ನಡುವಿನ ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ವ್ಯತ್ಯಾಸವನ್ನು ತಿಳಿಯದಿರುವುದು.

| ಬರಹ ರೂಪ | ಓದುವ ರೂಪ |
|---|---|
| ಧಾನ್ಯ | ದಾನ್ಯ |
| ಧಾರೆ | ದಾರೆ |
| ಧೀಮಂತ | ದಿಮತ |
| ಧುತ್ತನೆ | ದುತ್ತನೆ |
| ಧೋರಣೆ | ದೊರಣೆ |

ಪದಾದಿ ಪರಿಸರದಲ್ಲಿ ಫಾ, ಫಿ, ಫೇ ಬದಲು ಪಾ, ಪಿ, ಪೆ ಎಂದು ಉಚ್ಚರಿಸುತ್ತಾರೆ. ಈ ರೀತಿಯ ವ್ಯತ್ಯಾಸವನ್ನು ಕನ್ನಡ ಕಲಿಕಾ ಸಂದರ್ಭದಲ್ಲಿ ಗಮನಿಸಬಹುದು.

| ಬರಹ ರೂಪ | ಓದುವ ರೂಪ |
|---|---|
| ಫಾಯದೆ | ಪಾಯದೆ |
| ಫಿರ್ಯಾದಿ | ಪಿರ್ಯಾದಿ |
| ಫೇನ | ಪೇನ |
| ಫೇರಿ | ಪೇರಿ |

ಪದಾದಿ ಮತ್ತು ಪದ ಮಧ್ಯ ಪರಿಸರದಲ್ಲಿ ಗುಣಿತಾಕ್ಷರ ಥಾ, ಥೇ, ಥೈಗಳ ಬದಲು ತಾ.ತೆ, ತೈ ಎಂದು ಉಚ್ಚಾರಣೆ ಮಾಡುತ್ತಾರೆ. ಈ ರೀತಿಯ ವ್ಯತ್ಯಾಸವು ಮಾಧ್ಯಮಿಕ ಶಾಲೆಗಳಲ್ಲಿ ಕಂಡು ಬರುತ್ತದೆ. ಕಾರಣ 'ಬಿ' ಎನ್ನುವ ಆಂಗ್ಲ ಭಾಷೆಯ ಎರಡನೇ ಅಕ್ಷರದ ಉಚ್ಚಾರಣೆಯನ್ನು ಗಮನಿಸಿದಾಗ ಅಲ್ಲಿ ಯಾವುದೇ ರೀತಿಯ ಧ್ವನಿ ವ್ಯತ್ಯಾಸವಿರುವುದಿಲ್ಲ. ಬಾಯ್, ಬೋಟ್, ಬೋರ್ಡ್, ಬಂಗಲಾ ಎನ್ನುವ ಪದಗಳನ್ನು ಉಚ್ಚರಿಸುವಾಗ 'ಬಿ' ಸ್ವರದ ಉಚ್ಚಾರಣೆಯನ್ನು ಯಾವ ರೀತಿಯ ವ್ಯತ್ಯಾಸವು ಇಲ್ಲ. ಕಾರಣ ವಿದ್ಯಾರ್ಥಿಗಳು ಬಾ, ಭಾ, ಬಿ ಧ್ವನಿಗಳನ್ನು ಉಚ್ಚರಿಸುವಾಗ ಉಚ್ಚಾರ ದೋಷಗಳನ್ನು ಮಾಡುತ್ತಾರೆ.

| ಬರಹ ರೂಪ | ಓದುವ ರೂಪ |
|---|---|
| ಥಾಟು | ತಾಟು |
| ಥೈಲಿ | ತೈಲಿ |
| ಥೇಟ್ | ತೆಟ್ |

ಪದಾದಿ ಮತ್ತು ಪದ ಮಧ್ಯ ಪರಿಸರದಲ್ಲಿ ಭಾ, ಭೀ, ಭೂ, ಭೇ, ಭೋ ಧ್ವನಿಗಳ ಬದಲಾಗಿ ಬಾ, ಬಿ, ಬೂ, ಬೆ, ಬೊ ಎಂದು ಉಚ್ಚಾರಣೆ ಮಾಡಿ ಓದುತ್ತಾರೆ. ಈ ರೀತಿಯ ವ್ಯತ್ಯಾಸವು ಎಲ್ಲ ತರಗತಿಗಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಭಾವನೆ | ಬಾವನೆ |
| ಭೀಮ | ಬೀಮ |
| ಭೂಮಿ | ಬೂಮಿ |

| | |
|---|---|
| ಭೇದ | ಬೇದ |
| ಭೋಜನ | ಬೋಜನ |

ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಶಾ, ಶಿ, ಶೆ, ಶೋ ಧ್ವನಿಯ ಬದಲಾಗಿ ಗುಣಿತಾಕ್ಷರ ಸಾ, ಸಿ, ಸೆ, ಸೊ ಧ್ವನಿಗಳನ್ನು ಉಚ್ಚಾರಣೆ ಮಾಡುತ್ತಾ ಓದುತ್ತಾರೆ. ಈ ರೀತಿಯ ವ್ಯತ್ಯಾಸಗಳು ಎಲ್ಲ ತರಗತಿಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತಿದೆ. ಕಾರಣ 'ಶ' ಕಾರ 'ಸ' ಕಾರ ಮತ್ತು 'ಪ' ಕಾರಗಳ ವ್ಯತ್ಯಾಸ ಗೊತ್ತಿಲ್ಲದಿರುವುದು.

| **ಬರಹ ರೂಪ** | **ಓದುವ ರೂಪ** |
|---|---|
| ಶಾಕುಂತಲೆ | ಸಕುಂತಲೆ |
| ಶಾಂಭವಿ | ಸಾಂಬವಿ |
| ಶಿಕಾರಿಪುರ | ಸಿಕರಿಪುರ |
| ಶೀತ | ಸೀತ |

ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಷ, ಷಾ, ಷಿ ಧ್ವನಿಗಳ ಬದಲು ಗುಣಿತಾಕ್ಷರ ಸ, ಸಾ, ಸಿ ಧ್ವನಿಗಳನ್ನು ಉಚ್ಚಾರ ಮಾಡುತ್ತಾ ಓದುತ್ತಾರೆ. ಈ ರೀತಿಯ ವ್ಯತ್ಯಾಸ ಪ್ರತಿಶತ ವಿದ್ಯಾರ್ಥಿಗಳು ಮಾಡುತ್ತಾರೆ.

| **ಬರಹ ರೂಪ** | **ಓದುವ ರೂಪ** |
|---|---|
| ಷಟ್ಪದಿ | ಸಟ್ಪದಿ |
| ಷಾಮೀಯಾನ | ಸಾಮಿಯಾನ |
| ಷಿಕಾರಿ | ಸಿಕಾರಿ |

ಈ ಮೇಲಿನ ಉದಾಹರಣೆ ಸಹಿತ ಓದುಗಾರಿಕೆಯ ಉಚ್ಚಾರಣೆಯನ್ನು ಗಮನಿಸಿದಾಗ ಪ್ರಮುಖವಾಗಿ ಓದುಗಾರಿಕೆಯ ಸಮಸ್ಯೆಗಳಿಗೆ ಕಾರಣವಾಗುತ್ತದೆ. ಎರಡು ಗುಣಿತಾಕ್ಷರಗಳ ನಡುವೆ ಇರುವ ರಚನೆಯಲ್ಲಿ ಅಲ್ಪ ವ್ಯತ್ಯಾಸವನ್ನು ಗಮನಿಸದೇ ಇರುವುದು ಕಂಡು ಬರುತ್ತದೆ. ಬೋಧಕರು ಗುಣಿತಾಕ್ಷರಗಳ ಬಗ್ಗೆ ಸರಿಯಾದ ರೀತಿಯಲ್ಲಿ ವಿದ್ಯಾರ್ಥಿಗಳಿಗೆ ಪರಿಕಲ್ಪನೆಯನ್ನು ಮೂಡಿಸಬೇಕು. ಜೊತೆಗೆ ಪೋಷಕರು ವಿದ್ಯಾವಂತರಾಗಿದ್ದರೆ ಈ ಕೊರತೆಯನ್ನು ನೀಗಿಸುತ್ತಾರೆ. ಇಲ್ಲವಾದಲ್ಲಿ ಮಕ್ಕಳು ಓದುಗಾರಿಕೆಯಲ್ಲಿ ಹಿಂದುಳಿಯುವ ಸಾಧ್ಯತೆ ಹೆಚ್ಚಾಗಿದೆ. ಪರಿಸರದ ಭಾಷೆಯು ಆಂಗ್ಲ ಮಾಧ್ಯಮವಾಗಿರುವುದರಿಂದ ವಿದ್ಯಾರ್ಥಿಗಳು ಒಂದು ಅವಧಿಯಲ್ಲಿ ಮಾತ್ರ ಕನ್ನಡವನ್ನು ಒಂದು ವಿಷಯವನ್ನಾಗಿ

ಓದುತ್ತಾರೆ. ಉಳಿದೆಲ್ಲಾ ವಿಷಯಗಳನ್ನು ಆಂಗ್ಲ ಭಾಷೆಯಲ್ಲಿ ಬರೆಯುತ್ತಾರೆ. ಕಾರಣ ಕನ್ನಡ ಕಲಿಕೆಯಲ್ಲಿ ಹೆಚ್ಚು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಕನ್ನಡ ಪದಗಳನ್ನು ಆಂಗ್ಲ ಭಾಷೆ ಅನುವಾದ ಮಾಡಿಕೊಂಡು ಓದುವ ಮಕ್ಕಳನ್ನೂ ಇಲ್ಲಿ ಗಮನಿಸಲಾಗಿದೆ. ಪದಾದಿ, ಪದಮಧ್ಯ, ಪದಾಂತ್ಯದಲ್ಲಿ ಕನ್ನಡ ಭಾಷೆಯನ್ನು ಬಳಸುವಾಗ ಸರಿಯಾದ ಗ್ರಹಿಕೆಯಿಲ್ಲದೆ ಓದುವುದೇ ಮುಖ್ಯ ಕಾರಣವಾಗಿದೆ. ಅನ್ಯ ಮಾತೃ ಭಾಷೆಗಳಾದ ತೆಲುಗು, ಉರ್ದು, ಮರಾಠಿಯ ಪ್ರಭಾವವೂ ಇದೆ. ಮಾತೃ ಭಾಷೆ ಬೇರೆಯಾಗಿದ್ದು, ಮಾಧ್ಯಮದ ಪ್ರತಿಶತ ಆಂಗ್ಲ ಭಾಷೆ ಆಗಿದ್ದು, ಕನ್ನಡವನ್ನು ಕಲಿಯುವುದು ವಿದ್ಯಾರ್ಥಿಗಳಿಗೆ ಉಚ್ಚರಿಸುವಾಗ ಧ್ವನಿ ವ್ಯತ್ಯಾಸಗಳಾಗುವುದನ್ನು ಗಮನಿಸಬಹುದಾಗಿದೆ.

**೫.೧.೪ ಒತ್ತಕ್ಷರಗಳಲ್ಲಿ ಉಂಟಾಗುವ ಸಮಸ್ಯೆಗಳು**

- **ಸಜಾತಿ ಒತ್ತಕ್ಷರಗಳನ್ನು ಓದುವಾಗ ಉಂಟಾಗುವ ಸಮಸ್ಯೆಗಳು**

ಆಂಗ್ಲ ಭಾಷೆಯಲ್ಲಿರುವ ೨೬ ವರ್ಣಮಾಲೆಯ ಪ್ರಭಾವವನ್ನು ಇಲ್ಲಿ ಗಮನಿಸಬಹುದು. ಅಲ್ಲಿ ಯಾವುದೇ ಉಚ್ಚರಣೆಯ ಧ್ವನಿಗಳನ್ನು ಒತ್ತಿ ಹೇಳುವ ಅಗತ್ಯವಿಲ್ಲ. ಅದೇ ರೀತಿ ಕನ್ನಡ ಕಲಿಕೆಯಲ್ಲಿಯೂ ವಿದ್ಯಾರ್ಥಿಗಳು ಓದುವುದು ದೋಷಗಳಾಗಲು ಕಾರಣವಾಗಿದೆ.

- **ಕ್ಕ>ಕ**

- ಪದ ಮಧ್ಯ ಪರಿಸರದಲ್ಲಿ ಕ್ಕ ಒತ್ತಾಕ್ಷರಗಳ ಬದಲು ಕ ಕಂಠ್ಯ ವ್ಯಂಜನ ಧ್ವನಿಯನ್ನು ಉಚ್ಚಾರ ಮಾಡಿ ಓದುತ್ತಾರೆ. ಈ ವ್ಯತ್ಯಾಸವು ಎಲ್ಲ ಬಹುತೇಕ ಮಕ್ಕಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ರೊಕ್ಕ | ರೊಕ |
| ಅಕ್ಕ | ಅಕ |
| ತಿಕ್ಕ | ತಿಕ |
| ಅಕ್ಕಿಕಾಳು | ಅಕಿಕಾಳು |
| ಹೊಕ್ಕು | ಹೊಕು |

- **ಗ್ಗ>ಗ**

ಪದ ಮಧ್ಯ ಪರಿಸರದಲ್ಲಿ 'ಗ್ಗ' ಒತ್ತಕ್ಷರಗಳನ್ನು ಧ್ವನಿ ಬದಲು 'ಗ' ಕಂಠ್ಯ ವ್ಯಂಜನ ಧ್ವನಿಯನ್ನು ಉಚ್ಚಾರ ಮಾಡಿ ಓದುತ್ತಾರೆ. ಮಕ್ಕಳಿಗೆ ಒತ್ತಕ್ಷರಗಳ ಬಗ್ಗೆ ಸ್ಪಷ್ಟತೆ ಇಲ್ಲದಿರುವುದು.

ಆಂಗ್ಲ ಭಾಷೆಯಲ್ಲಿ ಒತ್ತಕ್ಷರಗಳು ಇಲ್ಲದಿರುವುದು, ಸುಲಭವಾಗಿ ಓದುವ ಕ್ರಮ ಅಭ್ಯಾಸವಾಗಿರುವುದು ಮತ್ತೊಂದು ಕಾರಣ.

| ಬರಹ ರೂಪ | ಓದುವ ರೂಪ |
|---|---|
| ಹಗ್ಗ | ಹಗ |
| ಬಗ್ಗು | ಬಗು |
| ತಗ್ಗು | ತಗು |
| ಬಗ್ಗೆ | ಬಗೆ |

ಮಕ್ಕಳು ವಿಶೇಷವಾಗಿ ಕನ್ನಡವನ್ನು ಆಂಗ್ಲ ಭಾಷೆಯಲ್ಲಿ ಕಲಿಯುವುದಾಗಿದೆ. ಗಾಡ್, ಗುಡ್ ಮಾರ್ನಿಂಗ್, ಗೋಟ್, ಗೆಸ್ಟ್ ಮುಂತಾದ ಪದಗಳ ಬಳಕೆ ಮಾಡುತ್ತಿರುವ ವಿದ್ಯಾರ್ಥಿಗಳು ಕನ್ನಡ ಕಲಿಕಾ ಸಂದರ್ಭದಲ್ಲಿ ಒತ್ತಕ್ಷರಗಳನ್ನು ತೇಲಿಸಿ ಹೇಳುವುದು ಅಭ್ಯಾಸವಾಗಿರುವುದನ್ನು ಗಮನಿಸಬಹುದಾಗಿದೆ.

- **ಚ್ಚ > ಚ**

ವಿದ್ಯಾರ್ಥಿಗಳಿಗೆ 'ಚ' ಕಾರದ ಧ್ವನಿ ಪರಿಚಯವಿದೆ. ಆದರೆ ಒತ್ತಕ್ಷರದ ಗ್ರಹಿಕೆಯಿಲ್ಲ. ಪದಮಧ್ಯ ಪರಿಸರದಲ್ಲಿ 'ಚ್ಚ' ದ್ವಿತ್ವ ಧ್ವನಿ ಬದಲು 'ಚ' ವ್ಯಂಜನ ಧ್ವನಿಯನ್ನು ಉಚ್ಚಾರ ಮಾಡುತ್ತಾ ಈ ವ್ಯತ್ಯಾಸವನ್ನು ಮಾಡುತ್ತಾರೆ. ಇದು ಎಲ್ಲಾ ತರಗತಿಗಳಲ್ಲಿ ಕಂಡು ಬರುತ್ತದೆ. ಚೇಂಬರ್, ಚೈರ್, ಚಕ್, ಪದ ಬಳಕೆಯನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಯಾವುದೇ ಧ್ವನಿಯನ್ನು ಒತ್ತಿ ಹೇಳುವುದಿಲ್ಲ. ಇದರ ಪ್ರಭಾವದಿಂದ ವಿದ್ಯಾರ್ಥಿಗಳು ಒತ್ತಕ್ಷರಗಳನ್ನು ಬಳಸುತ್ತಿಲ್ಲ.

| ಬರಹ ರೂಪ | ಓದುವ ರೂಪ |
|---|---|
| ಹೆಚ್ಚು | ಹೆಚು |
| ನಿಚ್ಚಣಿಗೆ | ನಿಚಣಿಗೆ |
| ಬಚ್ಚಲ | ಬಚಲ |
| ಅಚ್ಚರಿ | ಅಚರಿ |
| ಕಿಚ್ಚು | ಕಿಚು |

- **ಜ್ಜ>ಜ**

ಪದ ಮಧ್ಯ ಪರಿಸರದಲ್ಲಿ 'ಜ್ಜ' ದ್ವಿತ್ವ ಧ್ವನಿ ಬದಲು 'ಜ' ತಾಲವ್ಯ ವ್ಯಂಜನ ಧ್ವನಿಯನ್ನು ಉಚ್ಚಾರಣೆ ಮಾಡಿ ಓದುತ್ತಾರೆ. ಈ ವ್ಯತ್ಯಾಸ ಎಲ್ಲ ವಿದ್ಯಾರ್ಥಿಗಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಬಿಜ್ಜಳ | ಬಿಜಲ |
| ಕಜ್ಜಿ | ಕಜಿ |
| ಮಜ್ಜನ | ಮಜನ |
| ಗಜ್ಜರಿ | ಗಜರಿ |

- ಟ್ಟ> ಟ

ಟಿ–ಫಾರ್ ಟಾಯ್, ಟೈಗರ್, ಟೀಚರ್ ಎಂಬ ಪದಗಳ ಉಚ್ಚರಣೆ ಮಾಡುವಾಗ ಉಚ್ಚರಣೆಯಲ್ಲಿ ಕ್ಲಿಷ್ಟತೆಯಿಲ್ಲ. ಆದರೆ ಕನ್ನಡ ಪದಗಳ ಉಚ್ಚಾರಣೆ ಮಾಡುವಾಗ ಅವರಿಗೆ ಧ್ವನಿಗಳ ಅರಿವಿಲ್ಲದಿರುವುದು ಗಮನಕ್ಕೆ ಬರುತ್ತದೆ. ಪದ ಮಧ್ಯ ಪರಿಸರದಲ್ಲಿ 'ಟ್ಟ' ದ್ವಿತ್ವ ಧ್ವನಿ ಬದಲು 'ಟ' ಮೂರ್ಧನ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ವ್ಯತ್ಯಾಸವನ್ನು ಎಲ್ಲ ಪ್ರಾಥಮಿಕ ಶಾಲಾ ಮಕ್ಕಳಲ್ಲಿ ನೋಡಬಹುದು.

| ಬರಹ ರೂಪ | ಓದುವ ರೂಪ |
|---|---|
| ದಟ್ಟಡವಿ | ದಟಡವಿ |
| ಕಟ್ಟಡ | ಕಟಡ |
| ತಟ್ಟನೆ | ತಟನೆ |
| ಭಟ್ಟಾರಿಕೆ | ಬಟರಿಕೆ |
| ಬೆಟ್ಟ | ಬೆಟ |

ಮಕ್ಕಳ 'ದ', ಡ ಇವುಗಳ ಸ್ಪಷ್ಟ ಉಚ್ಚಾರಣೆಯನ್ನು ಆಂಗ್ಲ ಭಾಷೆಯ ತಿಳಿದುಕೊಂಡಿದ್ದಾರೆ. ದ, ದಟ್, ದಿಸ್, ಡಾಂಕಿ, ಡೇಟ್, ಡೀಪ್ ಪದಗಳ ಬಳಕೆ ಮಾಡುತ್ತಾರೆ. ಆದರೆ ಕನ್ನಡ ಓದುವ ಸಂದರ್ಭದಲ್ಲಿ ವ್ಯತ್ಯಾಸವನ್ನು ಗ್ರಹಿಸದಿರುವುದು ಕಂಡು ಬರುತ್ತದೆ.

- ಡ್ಡ>ಡ

ಪದಮಧ್ಯ ಪರಿಸರದಲ್ಲಿ ಡ್ಡ ದ್ವಿತ್ವ ಧ್ವನಿ ಬದಲು ಡ ಮೂರ್ಧನ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ. ಈ ತೆರನಾದ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| ಬರಹ ರೂಪ | ಓದುವ ರೂಪ |
|---|---|
| ದಡ್ಡ | ದಡ |
| ಗಿಡ್ಡ | ಗಿಡ |
| ಗುಡ್ಡ | ಗುಡ |
| ಗಡ್ಡ | ಗಡ |
| ದುಡ್ಡು | ದುಡು |

- ಣ್ಣ> ನ್ನ

ಮಕ್ಕಳು 'ಎನ್' ಅಕ್ಷರವನ್ನು ಉಚ್ಚರಿಸುವಾಗ ಬಳಸುವ ಉಚ್ಚರಣೆ 'ನ' ಕಾರಗಳನ್ನು ಓದುವಾಗ ಅದೇ ರೀತಿ ಓದುತ್ತಾರೆ. ಪದಮಧ್ಯ ಪರಿಸರದಲ್ಲಿ 'ಣ್ಣ' ದ್ವಿತ್ವ ಧ್ವನಿ ಬದಲು 'ನ್ನ' ದಂತ್ಯ ಅನುನಾಸಿಕ ವ್ಯಂಜನ ಧ್ವನಿಯನ್ನು ಮಕ್ಕಳು ಉಚ್ಚಾರಣೆ ಮಾಡಿ ಓದುತ್ತಾರೆ. ಈ ರೀತಿಯಾದ ವ್ಯತ್ಯಾಸವನ್ನು ಎಲ್ಲ ವಿದ್ಯಾರ್ಥಿಗಳು ಅದರಲ್ಲೂ ತೆಲುಗು ಭಾಷೆಯನ್ನು ಮಾತೃಭಾಷೆಯಾಗಿ ಮಾತನಾಡುವ ವಿದ್ಯಾರ್ಥಿಗಳ ಧ್ವನಿಯಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಬಣ್ಣಿಸು | ಬನ್ನಿಸು |
| ಬಣ್ಣ | ಬನ್ನ |
| ನಾಣ್ಣುಡಿ | ನಾನ್ನುಡಿ |
| ಉಣ್ಣು | ಉನ್ನು |

- ತ್ತ>ತ

ಪದಮಧ್ಯ ಪರಿಸರದಲ್ಲಿ 'ತ್ತ' ದ್ವಿತ್ವ ಧ್ವನಿ ಬದಲು 'ತ' ದಂತ್ಯ ವ್ಯಂಜನ ಧ್ವನಿಯನ್ನು ಉಚ್ಚರಿಸುತ್ತಾರೆ.

| ಬರಹ ರೂಪ | ಓದುವ ರೂಪ |
|---|---|
| ಭತ್ತ | ಬತ |
| ಗುತ್ತಿಗೆ | ಗುತ್ಗಿ |
| ಸುತ್ತಿಗೆ | ಸುತಿಗೆ |
| ಕತ್ತರಿ | ಕತ್ರಿ |

• ದ್ದ>ದ

ಪದಮಧ್ಯ ಪರಿಸರದಲ್ಲಿ 'ದ್ದ' ದ್ವಿತ್ವ ಧ್ವನಿ ಬದಲು 'ದ' ದಂತ್ಯ ವ್ಯಂಜನ ಧ್ವನಿಯನ್ನು ಓದುತ್ತಾರೆ.

| ಬರಹ ರೂಪ | ಓದುವ ರೂಪ |
|---|---|
| ಇದ್ದಲಿ | ಇದಿಲಿ |
| ಗೆದ್ದಲು | ಗೆದಿಲು |
| ಇದ್ದರೆ | ಇದರೆ |
| ಗೆದ್ದರೆ | ಗೆದರೆ |

• ನ್ನ>ನ

ಪದಮಧ್ಯ ಪರಿಸರದಲ್ಲಿ 'ನ್ನ' ದ್ವಿತ್ವ ಧ್ವನಿ ಬದಲು ನ ದಂತ್ಯ ಅನುನಾಸಿಕ ಧ್ವನಿಯನ್ನು ಉಚ್ಚರಿಸುತ್ತಾರೆ. ಈ ವ್ಯತ್ಯಾಸ ಕೆಲ ವಿದ್ಯಾರ್ಥಿಗಳಲ್ಲಿ ಮಾತ್ರ ಕಂಡು ಬರುತ್ತದೆ.

| ಬರಹ ರೂಪ | ಓದುವ ರೂಪ |
|---|---|
| ಚೆನ್ನಾಗಿ ಇದೆ | ಚೆನಾಗಿದೆ |
| ಚಿನ್ನ | ಚಿನ |
| ಅನ್ನಪೂರ್ಣ | ಅನಪೂರ್ಣ |
| ತನ್ನಂತೆ | ತನತೆ |

• ಪ್ಪ> ಪ

ಪದ ಮಧ್ಯ ಪರಿಸರದಲ್ಲಿ 'ಪ್ಪ' ಬದಲು 'ಪ' ವನ್ನು ಉಭಯೋಷ್ಠ್ಯ ವ್ಯಂಜನ ಧ್ವನಿಯನ್ನು ಉಚ್ಚರಿಸುತ್ತಾರೆ. ಈ ರೀತಿಯಾಗಿ ಕೆಲವು ಮಕ್ಕಳು ಉಚ್ಚರಿಸುತ್ತಾರೆ.

| ಬರಹ ರೂಪ | ಓದುವ ರೂಪ |
|---|---|
| ಕಪ್ಪಗೆ | ಕಪಗೆ |
| ಉಪ್ಪು | ಉಪು |
| ಸಪ್ಪಳ | ಸಪಳ |
| ಗುಪ್ಪು | ಗುಪು |

| | |
|---|---|
| ದುಪ್ಪಟ್ಟು | ದುಪಟು |
| ಮುಪ್ಪು | ಮುಪು |

- ಬ್ಬ> ಬ

ಪದಮಧ್ಯ ಪರಿಸರದಲ್ಲಿ ಬ್ಬ ದ್ವಿತ್ವ ಧ್ವನಿ ಬದಲು 'ಬ' ಉಭಯೋಷ್ಠ್ಯ ವ್ಯಂಜನ ಧ್ವನಿಯನ್ನು ಉಚ್ಚರಿಸುತ್ತಾರೆ. ಈ ವ್ಯತ್ಯಾಸವನ್ನು ಕೆಲವು ವಿದ್ಯಾರ್ಥಿಗಳಲ್ಲಿ ಕಾಣಬಹುದು.

| ಬರಹ ರೂಪ | ಓದುವ ರೂಪ |
|---|---|
| ಬೊಬ್ಬೆ | ಬೊಬೆ |
| ಒಬ್ಬಟ್ಟು | ಹೊಬಟು |
| ಕಬ್ಬು | ಕಬು |
| ದಿಬ್ಬ | ದಿಬ |
| ಮಬ್ಬು | ಮಬು |

- ಲ್ಲ>ಲ

ಪದಮಧ್ಯ ಪರಿಸರದಲ್ಲಿ 'ಲ್ಲ' ಒತ್ತಾಕ್ಷರದ ಬದಲು 'ಲ' ವ್ಯಂಜನವನ್ನು ಉಚ್ಚಾರಣೆ ಮಾಡುತ್ತಾರೆ. ಆಂಗ್ಲ ಮಾಧ್ಯಮದ ಪ್ರಭಾವ ಮುಖ್ಯ ಕಾರಣವಾಗಿದೆ.

| ಬರಹ ರೂಪ | ಓದುವ ರೂಪ |
|---|---|
| ಅಲ್ಲಿ | ಅಲಿ |
| ಹಲ್ಲು | ಹಲು |
| ನಲ್ಲ | ನಲ |
| ಗೊಲ್ಲೆಂದು | ಗೊಲೆಂದು |
| ಜೊಲ್ಲು | ಜೊಲು |

- **ವಿಜಾತಿ ಒತ್ತಕ್ಷರಗಳನ್ನು ಓದುವುದು.**

ಮಕ್ಕಳು ಒತ್ತಕ್ಷರಗಳನ್ನು ಗಮನಿಸಿದೇ ವ್ಯತ್ಯಾಸ ತಿಳಿಯದೆ ವಿಜಾತಿ ಒತ್ತಕ್ಷರಗಳನ್ನು ಪದಾಂತ್ಯದಲ್ಲಿ ಓದುವಾಗ ಒತ್ತಕ್ಷರಗಳನ್ನು ಲೋಪ ಮಾಡಿ ಓದುವುದು ಕಂಡು ಬರುತ್ತದೆ. ಅಂದರೆ ಆಡು ಭಾಷೆಯಲ್ಲಿರುವುದು ಇದಕ್ಕೆ ಕಾರಣವಾಗಿದೆ

| ಬರಹ ರೂಪ | ಓದುವ ರೂಪ |
|---|---|
| ಜನ್ಮ | ಜನುಮ |
| ಪತ್ರ | ಪತರ |

| | |
|---|---|
| ಮಿತ್ರ | ಮಿತ್ರ್ |
| ಆತ್ಮ | ಆತುಮ |
| ಭಕ್ತ | ಬಕ್ತ್ |

ಮಹಾಪ್ರಾಣ ಒತ್ತಕ್ಷರದ ಬದಲು ಅಲ್ಪಪ್ರಾಣ ಒತ್ತಕ್ಷರದ ಬಳಕೆ ಮಾಡುವ ವಿಜಾತಿ ಒತ್ತಕ್ಷರಗಳು ವಿದ್ಯಾರ್ಥಿಗಳಿಗೆ ಅಲ್ಪಪ್ರಾಣ, ಮಹಾಪ್ರಾಣ, ಸಜಾತಿ, ವಿಜಾತಿ, ಒತ್ತಕ್ಷರಗಳ ಕಲ್ಪನೆ ಇಲ್ಲದಿರುವುದು, ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ ಬರುವ ವಿಜಾತಿ ಮಹಾಪ್ರಾಣ ಒತ್ತಕ್ಷರದ ಬದಲಿಗೆ ಅಲ್ಪಪ್ರಾಣ ಒತ್ತಕ್ಷರದ ಬಳಕೆ ಮಾಡಿ ಓದುತ್ತಾರೆ. ಒಂದು ವಿಷಯವಾಗಿ ಕನ್ನಡವನ್ನು ಓದುತ್ತಿರುವುದು ಇದಕ್ಕೆ ಕಾರಣ. ಆಸಕ್ತಿಯ ಕೊರತೆಯೂ ಕಂಡು ಬರುತ್ತದೆ. ಆಲಿಸುವಿಕೆಯ ಕೊರತೆಯನ್ನು ಗಮನಿಸಬಹುದು.

| **ಬರಹ ರೂಪ** | **ಓದುವ ರೂಪ** |
|---|---|
| ದೃಷ್ಟಿ | ದ್ರುಷ್ಟಿ |
| ಕಷ್ಟ | ಕಸ್ಟ |
| ಕೃಷ್ಣ | ಕೃಷ್ಣ |
| ಸ್ಥಳ | ಸ್ತಲ |
| ಕ್ರೂರ | ಕ್ರೂರ |

**ವಿಶ್ಲೇಷಣೆ**

ಈ ಮೇಲಿನ ಎಲ್ಲಾ ಉದಾಹರಣೆಗಳನ್ನು ಅವಲೋಕಿಸಿದಾಗ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡುತ್ತಿರುವಂತಹ ವಿದ್ಯಾರ್ಥಿಗಳು ಓದುಗಾರಿಕೆಯಲ್ಲಿ ಮಾಡುವ ಪ್ರಮುಖ ವ್ಯತ್ಯಾಸಗಳನ್ನು ಗಮನಿಸಲಾಗಿದೆ. ಒತ್ತಕ್ಷರಗಳ ಬಗ್ಗೆ ವಿದ್ಯಾರ್ಥಿಗಳಿಗೆ ಮನವರಿಕೆಯಾಗದಿರುವುದು ಕಂಡು ಬಂದಿದೆ. ಮೂಲ ಅಕ್ಷರ ಹಾಗೂ ಒತ್ತಕ್ಷರಗಳ ಬಗ್ಗೆ ಸರಿಯಾದ ರೀತಿಯಲ್ಲಿ ಗ್ರಹಿಸದೇ ಇರುವುದು, ಬೋಧಕರು ಮಕ್ಕಳಿಗೆ ಒತ್ತಕ್ಷರಗಳ ಬಗ್ಗೆ ಕಲಿಸದಿರುವುದೇ ಈ ರೀತಿಯ ವ್ಯತ್ಯಾಸಕ್ಕೆ ಕಾರಣವಾಗಿರಬಹುದು. ಜೊತೆಗೆ ಶಾಲೆ ಮತ್ತು ಮನೆಯಲ್ಲಿ ಮಕ್ಕಳ ಮನೆಪಾಠವನ್ನು ಸರಿಯಾಗಿ ಪರಿಶೀಲಿಸದೆ ಇರುವುದರಿಂದಲೂ ಇಂತಹ ದೋಷಗಳಾಗಲು ಕಾರಣವಾಗಿರಬಹುದು.

ಕನ್ನಡವನ್ನು ಓದುವಾಗ ಸಜಾತಿ, ವಿಜಾತಿ ಹಾಗೂ ವಿಭಿನ್ನ ಒತ್ತಕ್ಷರಗಳ ಪರಿಕಲ್ಪನೆ ಹಾಗೂ ಬಳಕೆಯ ಬಗ್ಗೆ ಮಕ್ಕಳು ತಿಳಿಯದಿರುವುದು ಒಂದು ಕಾರಣವಾಗಿದೆ. ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವ ವಿದ್ಯಾರ್ಥಿಗಳ ಜೊತೆಗೆ ಪ್ರಥಮ ಭಾಷೆಯಾಗಿ

ಕನ್ನಡವನ್ನು ಕಲಿಯುವ ವಿದ್ಯಾರ್ಥಿಗಳು ಕೆಲವೊಮ್ಮೆ ಈ ರೀತಿಯ ಉಚ್ಚಾರಣಾ ದೋಷಗಳನ್ನು ಮಾಡಿರುವುದನ್ನು ಹಿಂದಿನ ಅಧ್ಯಯನಗಳಲ್ಲಿ ಗಮನಿಸಲಾಗಿದೆ. ಇದಕ್ಕೆ ಕಾರಣ ಪರಿಸರದಲ್ಲಿ ಒತ್ತಕ್ಷರಗಳನ್ನು ಬಳಸದೇ ಮಾತನಾಡುವುದರ ಪ್ರಭಾವ ಹಾಗೂ ಮೂಲಾಕ್ಷರ ಮತ್ತು ಒತ್ತಕ್ಷರಗಳ ಸ್ಪಷ್ಟ ಪರಿಕಲ್ಪನೆಯ ಗ್ರಹಿಕೆಯ ಲೋಪವಿರುವುದು ಬೋಧಿಸುವ ಸಂದರ್ಭದಲ್ಲಿ ಶಿಕ್ಷಕರು ಒತ್ತಕ್ಷರದ ಮಹತ್ವವನ್ನು ತಿಳಿಸದೇ ಬೋಧಿಸುವುದು, ಮಕ್ಕಳ ಆಲಿಸುವಿಕೆಯಲ್ಲಿ ದೋಷಗಳು ಈ ರೀತಿಯ ಸಮಸ್ಯೆಗಳಾಗಲು ಕಾರಣವಾಗಿದೆ.

ಪ್ರಸ್ತುತ ದಿನಗಳಲ್ಲಿ ಓದುವಿಕೆಗೆ ಹೆಚ್ಚು ಆದ್ಯತೆ ನೀಡಲಾಗುತ್ತಿದೆ. ಇದರಿಂದಾಗಿ ಅದು ಮಹತ್ವವನ್ನು ಪಡೆದುಕೊಳ್ಳುತ್ತದೆ. ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲಾ ಹಂತದಲ್ಲಿ ವಿದ್ಯಾರ್ಥಿಗಳಿಗೆ ಸರಿಯಾದ ರೀತಿಯಲ್ಲಿ ಅಕ್ಷರ ದೋಷಗಳನ್ನು ಅಥವಾ ಅವರ ಉಚ್ಚಾರಣೆಯ ತಪ್ಪುಗಳನ್ನು ಸರಿಯಾಗಿ ತಿದ್ದುಪಡಿ ಮಾಡಿದಾಗ ಆ ವಿದ್ಯಾರ್ಥಿಗಳಲ್ಲಿ ಉಚ್ಚಾರಣಾ ದೋಷಗಳು ಕಡಿಮೆಯಾಗುತ್ತವೆ. ಇಲ್ಲವಾದಲ್ಲಿ ವಿದ್ಯಾರ್ಥಿಗಳು ನುಡಿಯುವ ನುಡಿಗಳು ಅಪಭ್ರಂಶವಾಗುತ್ತವೆ. ಇದಕ್ಕೆ ಕಾರಣ ಕಲಿಯುವ, ಕಲಿಸುವ ಪ್ರಕ್ರಿಯೆಗಳ ದೋಷಗಳೇ ಆಗಿವೆ. ಉತ್ತಮವಾದ ತರಬೇತಿ ನೀಡಿದ್ದಲ್ಲಿ ಇಂತಹ ದೋಷಗಳನ್ನು ಸರಿಪಡಿಸಲು ಸಾಧ್ಯವಿದೆ.

ಮೊದಲನೆಯದಾಗಿ ಇಲ್ಲಿ ಕಲಿಸುವಂತಹ ಶಿಕ್ಷಕರಿಗೆ ಕನ್ನಡ ಭಾಷೆಯ ಬಗ್ಗೆ ಹೆಚ್ಚು ಅರಿವಿರಬೇಕು. ಭಾಷಾ ಶಿಕ್ಷಕರು ಇತರೆ ಎಲ್ಲ ವಿಷಯಗಳ ಶಿಕ್ಷಕರಿಗಿಂತಲೂ ವ್ಯಾಕರಣ ಬದ್ಧವಾಗಿ ಮಾತನಾಡಬೇಕು. ಆಡುನುಡಿಗೂ ಗ್ರಾಂಥಿಕ ಭಾಷೆಗೂ ವ್ಯತ್ಯಾಸವಿರಬೇಕು. ಶಿಕ್ಷಕರು ಉಚ್ಚಾರಣೆಯ ದೋಷಗಳನ್ನು ತಿದ್ದುಪಡಿ ಮಾಡಿದಾಗ ಮಾತ್ರ ಆ ವಿದ್ಯಾರ್ಥಿಗಳಲ್ಲಿ ತಾನು ತಪ್ಪಿಲ್ಲದಂತೆ ಓದುತ್ತಿದ್ದೇನೆ ಎನ್ನುವ ವಿಶ್ವಾಸ ಮೂಡಲು ಸಾಧ್ಯ. ವಿದ್ಯಾರ್ಥಿಗಳು ಯಾವ ಯಾವ ಪದಗಳನ್ನು ತಪ್ಪು ಉಚ್ಚಾರಣೆ ಮಾಡುತ್ತಾರೋ ಅಂತಹ ಪದಗಳನ್ನು ಮತ್ತೆ ಮತ್ತೆ ಬರೆಯಿಸಿ ಅವುಗಳನ್ನು ಸರಿಯಾಗಿ ಬರೆಯುವಂತೆ, ಉಚ್ಚಾರ ಮಾಡುವಂತೆ ತಿಳಿಸಬೇಕು. ಇದಕ್ಕಾಗಿ ಭಾಷಾ ಶಿಕ್ಷಕರಿಗೆ ಉತ್ತಮವಾದ ತರಬೇತಿಯ ಅವಶ್ಯಕತೆಯೂ ಇದೆ.

ವಿದ್ಯಾರ್ಥಿಗಳು ಓದಿನಲ್ಲಿ ಮಾಡುವ ದೋಷಗಳನ್ನು ಸಮಾಧಾನದಿಂದ, ಪ್ರೀತಿಯಿಂದ ಹಂತ ಹಂತವಾಗಿ ತಿದ್ದುತ್ತಾ ಹೋಗಬೇಕು. ಶಾಲಾ ಮಕ್ಕಳು ಶಿಕ್ಷಕರ ಮಾತುಗಳನ್ನೇ ಅನುಕರಿಸುತ್ತಾ ಇರುತ್ತಾರೆ. ಹಾಗಾಗಿ ಶಿಕ್ಷಕರು ತಪ್ಪಾಗಿ ಉಚ್ಚಾರ ಮಾಡಿದರೆ ಮಕ್ಕಳು ಸಹ ತಪ್ಪಾಗಿ ಉಚ್ಚಾರ ಮಾಡುವ ಅಪಾಯವಿರುತ್ತದೆ. ವಿದ್ಯಾರ್ಥಿಗಳ ಮುಂದೆ ಯಾವುದೇ

ಒಂದು ವಿಷಯದ ಬಗ್ಗೆ ಪಾಠವನ್ನು ಓದುವಂತಹ ಸಂದರ್ಭದಲ್ಲಿ ಸ್ಪಷ್ಟತೆಯಿಂದ ಓದಬೇಕು. ದೋಷ ರಹಿತವಾದ ಓದನ್ನು ವಿದ್ಯಾರ್ಥಿಗಳು ಗಮನಿಸುತ್ತಾರೆ. ಇನ್ನು ಕೆಲವು ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯ ಪ್ರಭಾವದಿಂದಲೂ ಕೆಲವೊಮ್ಮೆ ತಪ್ಪಾಗಿ ಓದುವ ಸಾಧ್ಯತೆ ಇರುತ್ತದೆ. ಜೊತೆಗೆ ವಿದ್ಯಾರ್ಥಿಗಳಲ್ಲಿ ಕನ್ನಡ ಭಾಷೆಯ ಬಗ್ಗೆ ಇರುವ ಭಯವೂ ಕಾರಣವಾಗುತ್ತದೆ. ಅಲ್ಲದೆ ಕನ್ನಡವು ನನ್ನ ಮಾತೃ ಭಾಷೆಯಲ್ಲ ಇದು ನನಗೆ ಕಠಿಣ ಎಂಬ ಭಾವನೆಯೂ ಕಾರಣವಾಗಬಹುದು. ವಿದ್ಯಾರ್ಥಿಗಳಿಗೆ ಸಕಾಲಿಕವಾದ, ಸೂಕ್ತ ಅಭ್ಯಾಸ ಚಟುವಟಿಕೆಗಳನ್ನು ಮಾಡಿಸಿದ್ದಲ್ಲಿ ಓದುಗಾರಿಕೆಯ ದೋಷಗಳನ್ನು ನಿವಾರಿಸಲು ಸಾಧ್ಯವಿದೆ. ಆಂಗ್ಲ ಮಾಧ್ಯಮ ಶಾಲೆಗಳಲ್ಲಿ  ಕನ್ನಡ ಕಲಿಕೆಗೆ ಪ್ರಾಧ್ಯಾನ್ಯತೆ ಕೊಡಬೇಕು. ಪೂರ್ವ ಪ್ರಾಥಮಿಕ ಮತ್ತು ಪ್ರಾಥಮಿಕ ಶಾಲೆಯ ಹಂತದಲ್ಲೇ ಮಕ್ಕಳ ಓದಿನ ದೋಷಗಳನ್ನು ಗಮನಿಸಿ ಪ್ರಾರಂಭದ ವರ್ಣಮಾಲೆಯಿಂದಲೇ ಅಕ್ಷರಗಳನ್ನು ಕಲಿಸಬೇಕು. ಉಚ್ಚಾರ ಮಾಡುವ ಧ್ವನಿ ವಿಧಾನವನ್ನು ಕಂಠಪಾಠ ಮಾಡಿಸಬೇಕು. ಅಲ್ಪಪ್ರಾಣ, ಮಹಾಪ್ರಾಣ, ಸ್ವರಗಳು, ಒತ್ತಕ್ಷರಗಳು, ಸಂಯುಕ್ತಾಕ್ಷರಗಳ ಧ್ವನಿ ವ್ಯತ್ಯಾಸಗಳ ಪರಿಕಲ್ಪನೆಯನ್ನು ಮೂಡಿಸಬೇಕು. ಧ್ವನಿ ಉತ್ಪತ್ತಿ ಸ್ಥಾನಗಳ ಕುರಿತು ಪರಿಚಯ ಮಾಡಿಸಬೇಕು.

ಇನ್ನು ಹೆಚ್ಚು ಗೊಂದಲಕ್ಕೆ ಈಡಾಗುವ ಧ್ವನಿಗಳೆಂದರೆ, ಅ>ಹ, ಳ>ಲ, ಣ>ನ, ಶ>ಷ>ಸ ಧ್ವನಿಗಳ  ಉಚ್ಚಾರಣೆಯ ವ್ಯತ್ಯಾಸವನ್ನು ವಿವರಿಸಬೇಕು. ಇದನ್ನು ಮಕ್ಕಳು ಅನುಕರಿಸಿ ಕಲಿಯಬೇಕು. ಆಯಾ ಪದಗಳಿಗೆ ಉದಾಹರಣೆ ಸಹಿತವಾಗಿ ವಿದ್ಯಾರ್ಥಿಗಳಿಗೆ ವಿವರಿಸಬೇಕು. ಪ್ರಾರಂಭದಲ್ಲಿ ವಿದ್ಯಾರ್ಥಿಗಳಿಗೆ ಗಟ್ಟಿ ಧ್ವನಿಯಲ್ಲಿ ಓದುವಂತೆ ತಿಳಿಸಿದಾಗ ಅವರಲ್ಲಿರುವ ನಾಲಗೆಯ ತೊಡರನ್ನು ಸರಿಪಡಿಸಲು ಸಾಧ್ಯವಾಗುತ್ತದೆ. ಮಕ್ಕಳು ಓದುವಾಗ ಮಕ್ಕಳ ಓದುಗಾರಿಕೆಯನ್ನೇ ಗಮನಿಸಬೇಕು. ಏನು ತಪ್ಪು ಓದುತ್ತಾನೆ ಎಂಬುದನ್ನು ಪತ್ತೆ ಮಾಡಿ ಅಲ್ಲಲ್ಲಿ ಸರಿಪಡಿಸುತ್ತಾ ಹೋಗಬೇಕು.

ವಿದ್ಯಾರ್ಥಿಗಳಲ್ಲಿ ಶಾರೀರಿಕ ತೊಂದರೆಗಳು, ಗಂಟಲಿನಲ್ಲಿ ಧ್ವನ್ಯಂಗಗಳಲ್ಲಿ ಸಮಸ್ಯೆಗಳು ಇದ್ದಾಗ ಅಂತಹ ವಿದ್ಯಾರ್ಥಿಗಳನ್ನು ವೈದ್ಯರ ಬಳಿಗೆ ಕರೆದೊಯ್ದು ಆ ವಿದ್ಯಾರ್ಥಿಯ ಧ್ವನಿ ಪೆಟ್ಟಿಗೆಯನ್ನು ಸರಿಪಡಿಸಬೇಕು. ಮಕ್ಕಳಲ್ಲಿ ಓದುವ ಕೌಶಲವನ್ನು ಹೆಚ್ಚಿಸಲು ಪುಸ್ತಕಗಳನ್ನು ನೀಡಬೇಕು. ಪರಭಾಷಾ ಪದಗಳನ್ನು ಸರಿಯಾಗಿ ಪರಿಚಯಿಸಿ ಕನ್ನಡದೊಳಗೆ ಬಳಸುವುದನ್ನು ಕಲಿಸಬೇಕು.[೫] ಆಗಿದ್ದಾಗ ಮಾತ್ರ ಆಂಗ್ಲ ಮಾಧ್ಯಮದ ಶಾಲೆಗಳಲ್ಲಿಯೂ ಉತ್ತಮವಾದ ಕನ್ನಡ ಓದುವ ವಿದ್ಯಾರ್ಥಿಗಳು ಹೊರಹೊಮ್ಮಲು ಸಾಧ್ಯ. ವಿದ್ಯಾರ್ಥಿಗಳಲ್ಲಿ

ಅಡಗಿರುವ ಭಾಷಾ ಜ್ಞಾನವನ್ನು ಹೊರತೆಗೆಯಬೇಕಾದರೆ ಅವರನ್ನು ಓದುವ ಅಭಿರುಚಿಗೆ ತೊಡಗಿಸಬೇಕು. ಆಗ ಮಾತ್ರ ವಿದ್ಯಾರ್ಥಿಗಳು ಉತ್ತಮ ಓದುಗಾರಿಕೆಯ ಮೂಲಕ ಉತ್ತಮ ಓದುಗರಾಗಿ ಹೊರಹೊಮ್ಮಲು ಸಾಧ್ಯವಾಗುತ್ತದೆ.

ಓದುವಾಗ ಅರ್ಥಗ್ರಹಿಕೆಗಾಗಿ ಓದುವ ವಿವಿಧ ಕೌಶಲಗಳನ್ನು ತಿಳಿಸಬೇಕು. ಮುಕ್ತ ವಾತಾವರಣವನ್ನು ಒದಗಿಸಿ ಓದುವಂತೆ ಮಾಡಬೇಕು. ಮಕ್ಕಳ ವಯೋಮಾನಕ್ಕೆ ತಕ್ಕಂತೆ ವೈವಿಧ್ಯಮಯವಾದ ಓದುವ ಸಾಮಗ್ರಿಗಳನ್ನು ಒದಗಿಸಿಕೊಡಬೇಕು. ಓದುವ ಕೌಶಲಗಳ ಬಗೆಗೆ ಸೂಕ್ತ ತರಬೇತಿಯನ್ನು ನೀಡಬೇಕು. ಓದು ಮಾನಸಿಕ ಕ್ರಿಯೆಯಾಗುವಂತೆ ಅಭ್ಯಾಸ ಮಾಡಿಸಬೇಕು. ಆಗ ವಿದ್ಯಾರ್ಥಿಗಳು ಕನ್ನಡ ಭಾಷೆಯಲ್ಲಿ ಉಚ್ಚಾರಣಾ ದೋಷಗಳನ್ನು ಮಾಡದೇ ಓದುವುದನ್ನು ಕಲಿಯುತ್ತಾರೆ.

**೫.೨ ಬರವಣಿಗೆಯ ಸಮಸ್ಯೆಗಳು**

**ಬರವಣಿಗೆ ಅರ್ಥ ಮತ್ತು ಮಹತ್ವ**

*"ಏತೋತ್ವ ಕೊಂಬಿಳಿ ದೀರ್ಘ*
*ಸುಳಿ ಗುಣಿಸು ಬಾಲ ಎಂಬಿವುಗಳ*
*ಲಿಪಿಯನ್ನು ಕ್ರಮಬದ್ಧವಾಗಿ ಬರೆಯುವುದೇ*
*ಸುಲಕ್ಷಣ ಬರಹ"* [೬]

ಬರವಣಿಗೆಯು ಸಹ ಇತರ ಕಲೆಗಳಂತೆ ಒಂದು ಕಲೆ. ಎಲ್ಲರೂ ಒಪ್ಪುವಂತೆ ಎಲ್ಲರು ಒಂದು ಕಡೆ ಬರೆದು ಹಾಕಲಾಗುವುದಿಲ್ಲ. ಬರವಣಿಗೆಯು ಮಾನವನ ಆವಿಷ್ಕಾರಗಳಲ್ಲೊಂದು. ಭಾಷೆಗೆ ಒಂದು ವ್ಯಾಪ್ತಿ ಮತ್ತು ಶಾಶ್ವತತೆಯನ್ನು ತಂದು ಕೊಟ್ಟಿರುವುದು ಬರವಣಿಗೆ. ಬರವಣಿಗೆ ಇಲ್ಲದ ಭಾಷೆಗಳ ಅಸ್ತಿತ್ವದಲ್ಲಿವೆಯಾದರೂ ಅವುಗಳ ಉಳಿವು ಅನಿಶ್ಚಿತ. ಹಾಗೆಯೇ ಆ ಭಾಷೆಗೆ ಶಾಶ್ವತವಾದ ಮೌಲ್ಯವೂ ಇರುವುದಿಲ್ಲ. ಭಾಷೆ ಕಾಲ ಮತ್ತು ದೂರವನ್ನು ಜಯಿಸಿ ನಿಂತಿರುವುದು ತನ್ನ ಬರವಣಿಗೆಯಿಂದಲೇ. ಮಾತು ಕಲಿತ ಮನುಷ್ಯ ಮಾನವನಾದನು. ಬರವಣಿಗೆ ಕಲಿತ ಮಾನವನು ನಾಗರಿಕನಾದನು.೭

ಬರಹ ನಾಗರಿಕತೆಯ ಒಂದು ಪ್ರತಿಬಿಂಬವಾಗಿದೆ. ಮಾನವನಷ್ಟೇ ಬರವಣಿಗೆಯು ಪುರಾತನವಾದದ್ದು. ಆದ್ದರಿಂದ ಭಾಷಾ ಕೌಶಲಗಳಾದ ಆಲಿಸುವಿಕೆ, ಮಾತನಾಡುವಿಕೆ, ಓದುಗಾರಿಕೆ ಮತ್ತು ಬರವಣಿಗೆಯಲ್ಲಿ ಅತ್ಯಂತ ಮಹತ್ವವನ್ನು ಪಡೆದಿದೆ. ಬರವಣಿಗೆ

ಎಂದರೆ ತಾನು ತಿಳಿದಿದ್ದನ್ನು ಅಥವಾ ಇನ್ನೊಬ್ಬರು ಹೇಳಿದ್ದನ್ನು ಗೊತ್ತಾದ ಲಿಪಿಯನ್ನು ಬಳಸಿಕೊಂಡು ಬೆರಳುಗಳ ಮೂಲಕ ವ್ಯಕ್ತಪಡಿಸುವಂತಹದ್ದು. ಬಾಯಲ್ಲಿ ಅಕ್ಷರಗಳು ಉಚ್ಚಾರಣೆಯಾದಾಗ ಅದು ಓದದರೆ, ಕೈಯ ಸ್ನಾಯುಗಳ ಬಲದಿಂದ ಅಕ್ಷರಗಳು ಉಚ್ಚಾರಣೆಯಾಗುವುದನ್ನು ಬರವಣಿಗೆ ಎಂದು ಕರೆಯುತ್ತೇವೆ. ಬರವಣಿಗೆ ಒಂದು ಸಂಕೀರ್ಣ ಕೌಶಲ. ಅದರ ಪ್ರಭುತ್ವ ಪಡೆಯಲು ಬಿದಿರಿನ ಕಡ್ಡಿ, ಬಳಪ, ಸೀಸದ ಕಡ್ಡಿ, ಲೇಖನಿ ಮೊದಲಾದವುಗಳ ಮೇಲೆ ಹತೋಟಿ ಉಂಟಾಗಬೇಕು. ಬೆರಳು ತುದಿಯ ಸ್ನಾಯುಗಳು ಪಳಗುವುದರಿಂದ ಬರವಣಿಗೆ ರೂಢಿಯಾಗುತ್ತದೆ. ಅದೊಂದು ಕಲೆ. ಜ್ಞಾಪಕ ಶಕ್ತಿಯು ಬರಹದಿಂದ ವೃದ್ಧಿಯಾಗುತ್ತದೆ. ಹತ್ತು ಬಾರಿ ಓದುವ ಬದಲು ಒಂದು ಬಾರಿ ಬರೆದರೆ ಹೆಚ್ಚು ಪರಿಣಾಮಾರಿಯಾಗುತ್ತದೆ. ಉರ್ದುವಿನಲ್ಲಿ ಒಂದು ಗಾದೆ ಮಾತು ಇದೆ. "ಸಾವಿರ ಮಾತು ಹೇಳುವುದಕ್ಕಿಂತ ಒಂದು ಮಾತನ್ನು ಬರೆದಿಡು" ಎನ್ನುವುದು ಬರವಣಿಗೆಯ ಮಹತ್ವವನ್ನು ಹೇಳುತ್ತದೆ. ಬರೆಯುವಾಗ ಮನಸ್ಸು ಅವಧಾನ ಕೇಂದ್ರೀಕೃತವಾಗಿರುವುದರಿಂದ ಬರೆದ ವಿಷಯವು ಸ್ಮೃತಿ ಪಟಲದಲ್ಲಿ ದೀರ್ಘ ಕಾಲದವರೆಗೆ ಉಳಿಯುತ್ತದೆ. ಓದಿನಂತೆ ಬರೆಯುವುದರಿಂದ ಮತ್ತು ಬರದಂತೆ ಓದುವುದರಿಂದ ವಿಷಯವು ಮನಸ್ಸಿನಲ್ಲಿ ಉಳಿಯುತ್ತದೆ.

ಬರೆಯುವ ಬರವಣಿಗೆಯು ಓದುಗರನ್ನು ಆಕರ್ಷಿಸುವ ರೀತಿಯಲ್ಲಿರಬೇಕು. ಉತ್ತಮವಾಗಿ ಅಕ್ಷರಗಳನ್ನು ಬರೆಯುವ ವ್ಯಕ್ತಿಗೆ ಅಥವಾ ವಿದ್ಯಾರ್ಥಿಗಳಿಗೆ ಹೆಚ್ಚು ಗೌರವ ದೊರೆಯುತ್ತದೆ. ಆದ್ದರಿಂದ ಶಿಕ್ಷಕರು ಮಕ್ಕಳಿಗೆ ಬರವಣಿಗೆಯನ್ನು ಕಲಿಸುವಾಗ ಹೆಚ್ಚು ಎಚ್ಚರಿಕೆಯಿಂದ ಕಲಿಸಬೇಕು. ಏಕೆಂದರೆ ಬರವಣಿಗೆಯು ಮಕ್ಕಳನ್ನು ಉತ್ತಮ ಬರಹಗಾರರನ್ನಾಗಿ ಮಾಡುತ್ತದೆ. ಸ್ಮರಣ ಶಕ್ತಿಯನ್ನು, ಬುದ್ಧಿ ಶಕ್ತಿಯುನ್ನು, ವಿವೇಚನಾಕ್ರಮವನ್ನು ಬೆಳೆಸುತ್ತದೆ. ಮನೋಸ್ಥೈರ್ಯ, ಜ್ಞಾನಾರ್ಜನೆಯನ್ನು ಸಾಧಿಸಲು ಸಹಾಯ ಮಾಡುತ್ತದೆ. ಒಬ್ಬ ಉತ್ತಮ ಬರಹಗಾರ ನಿಧಾನವಾಗಿ ತನ್ನ ಮನಸ್ಸಿನಲ್ಲಿರುವ ಭಾವನೆಗಳಿಗೆ ಒಂದು ಅಕ್ಷರ ರೂಪವನ್ನು ಕೊಡುತ್ತಾನೆ. ಬರವಣಿಗೆಯು ತನ್ನದೇ ಆದ ಚೌಕಟ್ಟನ್ನು ಹೊಂದಿದ್ದು, ನೀತಿ ನಿಯಮಗಳಿರುತ್ತವೆ. ಈ ನಿಯಮಗಳೊಂದಿಗೆ ಒಂದು ಗೊತ್ತಾದ ವಿಷಯವನ್ನು ಅರ್ಥಪೂರ್ಣವಾಗಿ ಜೋಡಿಸುವ ಉದ್ದೇಶ ಹೊಂದಿರುತ್ತದೆ.

ಬರಹದಲ್ಲಿ ಪ್ರತಿಯೊಂದು ಪದ, ವಾಕ್ಯಕ್ಕೂ ಅಗತ್ಯವಾದ ಕಾಗುಣಿತವನ್ನು ಅಳವಡಿಸಿಕೊಳ್ಳುತ್ತಾ ಹೋಗಿ ದೀರ್ಘ, ಗುಡಿಸು, ಕೊಂಬು, ಇಳಿ, ಒತ್ತು, ಲೇಖನ ಚಿಹ್ನೆಗಳು, ಶಿರೋನಾಮೆ ಕೊಟ್ಟು ವಿಷಯಕ್ಕನುಗುಣವಾಗಿ ವಿಚಾರಗಳನ್ನು ಒಂದೊಂದು

ಭಾಗದಲ್ಲಿ ಬರೆಯುವ ತಂತ್ರಗಾರಿಕೆಯಾಗಿದೆ. ಬರವಣಿಗೆಯು ಮಕ್ಕಳಲ್ಲಿರುವ ವೈಯಕ್ತಿಕ ಭಾವನೆಗಳನ್ನು ರಚನಾತ್ಮಕ ಚಿಂತನೆಗಳನ್ನು ಒಟ್ಟುಗೂಡಿಸುವ ಒಂದು ಪ್ರಕ್ರಿಯೆಯಾಗಿದೆ.

**ಅಧ್ಯಯನದ ವಿಶ್ಲೇಷಣೆ**

ಕನ್ನಡ ಭಾಷೆಯನ್ನು ಕಲಿಯುವಾಗ ವಿದ್ಯಾರ್ಥಿಗಳು ಕನ್ನಡವನ್ನು ಓದುವಾಗ, ಬರೆಯುವಾಗ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದು ಪ್ರಸ್ತುತ ದಿನಗಳಲ್ಲಿ ಬೋಧಕ ವರ್ಗ, ಪೋಷಕರ ವರ್ಗದಿಂದ ಕೇಳಿ ಬರುತ್ತಿರುವ ಮಾತಾಗಿದೆ. ಹಾಗಾದರೆ ವಿದ್ಯಾರ್ಥಿಗಳು ಕನ್ನಡವನ್ನು ದ್ವಿತೀಯ ಭಾಷೆಯಾಗಿ ಬರೆಯುವ ಸಂದರ್ಭದಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎನ್ನುವುದು ಪ್ರಮುಖವಾದ ಅಂಶವಾಗಿದೆ. ವಿದ್ಯಾರ್ಥಿಗಳು ಬರವಣಿಗೆಯಲ್ಲಿ ಸಮಸ್ಯೆ ಎದುರಿಸಲು ಆಲಿಸುತ್ತಾರೆಯೋ ಅದನ್ನು ಬರೆಯುತ್ತಾರೆ. ಆಲಿಸುವ ಪ್ರಕ್ರಿಯೆಯಲ್ಲಿ ಸ್ಪಷ್ಟವಾದ ಗ್ರಹಿಕೆ ಇಲ್ಲದಿದ್ದರೂ ಬರವಣಿಗೆಯಲ್ಲಿ ದೋಷಗಳನ್ನು ಮಾಡುತ್ತಾರೆ. ಇಂತಹ ಬರವಣಿಗೆಯ ಸಮಸ್ಯೆಗಳನ್ನು ಗಮನಿಸಲಾಗಿದೆ.

ಆಂಗ್ಲ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಭಾಷೆಯನ್ನು ದ್ವಿತೀಯ ಭಾಷೆಯಾಗಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳ ಕನ್ನಡ ಬರವಣಿಗೆಯ ರೀತಿ ಭಿನ್ನವಾಗಿದ್ದು, ಬರೆಯುವಾಗ ವಿದ್ಯಾರ್ಥಿಗಳು ಎದುರಿಸುತ್ತಿರುವ ಸಮಸ್ಯೆಗಳಿಗೆ ಕಾರಣ ಮತ್ತು ಸರಿಪಡಿಸುವ ವಿಧಾನಗಳನ್ನು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಬಳ್ಳಾರಿ ನಗರ ಪ್ರದೇಶದ ೨೫ ಹಿರಿಯ ಪ್ರಾಥಮಿಕ ಆಂಗ್ಲ ಮಾಧ್ಯಮದ ಶಾಲೆಗಳಿಗೆ ಭೇಟಿ ನೀಡಿ ಪ್ರತಿ ತರಗತಿಯ ಕನ್ನಡ ಭಾಷಾ ಪಠ್ಯಪುಸ್ತಕಗಳಿಂದ ಅಕಾರಾದಿಯಾಗಿ ರಚಿಸಿದ ಪದಗಳ ಪಟ್ಟಿಯನ್ನು ಮಾಡಿಕೊಳ್ಳಲಾಯಿತು. ಪಠ್ಯಪುಸ್ತಕಗಳಲ್ಲಿ ಪಾಠಗಳನ್ನು ಮೌಖಿಕವಾಗಿ ಹೇಳಿ ಬರೆಯಿಸಲಾಯಿತು. ನಂತರ ವಿದ್ಯಾರ್ಥಿಗಳಿಗೆ ಪ್ರಶ್ನಾವಳಿಯನ್ನು ನೀಡಿ ಉತ್ತರಗಳನ್ನು ಬರೆಯಿಸಲಾಯಿತು. ಹಾಗೆಯೇ ಸ್ವಂತ ಲೇಖನಗಳನ್ನು ಬರೆಯಿಸಲಾಯಿತು. ಈ ಎರಡೂ ಬರವಣಿಗೆಯ ಕ್ರಮಗಳನ್ನು ಇಟ್ಟುಕೊಂಡು ಸಮಸ್ಯೆಗಳನ್ನು ಗುರುತಿಸಲಾಗಿದೆ. ವಿದ್ಯಾರ್ಥಿಗಳ ಪ್ರಶ್ನಾವಳಿ ಮಾದರಿಯನ್ನು ಯಥಾ ಪ್ರಕಾರ ಸ್ಕ್ಯಾನ್ ಮಾಡಿ ಹಾಕಲಾಗಿದೆ.

# ವಿದ್ಯಾರ್ಥಿಗಳ ಪ್ರಶ್ನಾವಳಿ

ಜಿ. ಸಂಧ್ಯ
೭ನೇ ತರಗತಿ
[illegible]

ವಿದ್ಯಾರ್ಥಿಗಳಿಗಾಗಿ ಪ್ರಶ್ನಾವಳಿ

## Questionnaire for Students

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ :ಭಾಷಿಕ ಅಧ್ಯಯನ

(ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ)

A Study of Language : Kannada Teaching and Learning in English Medium School

(With Reference to Bellary City).

ಸೂಚನೆ:

ಈ ಕೆಳಗಿನ ಕೆಲವೊಂದು ಪ್ರಶ್ನೆಗಳನ್ನು ಪ್ರಶ್ನಾವಳಿ ರೂಪದಲ್ಲಿ ನೀಡಲಾಗಿದೆ. ಈ ಪ್ರಶ್ನಾವಳಿಯ ಮುಖ್ಯವಾದ ಉದ್ದೇಸವೆಂದರೆ ನೀವು ಆಂಗ್ಲ ಮಾಧ್ಯಮದಲ್ಲಿ ಕನ್ನಡ ಭಾಷೆಯನ್ನು ಧ್ವಿತೀಯ ಭಾಷೆಯಾಗಿ ಅಧ್ಯಯನ ಮಾಡುತ್ತಿರುವಿರಿ. ಅದರ ಬಗೆಗೆ ಅಮೂಲ್ಯ ಅಭಿಪ್ರಾಯವನ್ನು ಪಡೆಯುವುದಾಗಿದೆ. ನೀವು ದಯವಿಟ್ಟು ಇಲ್ಲಿರುವ ವಿವಿಧ ಅಂಶಗಳಿಗೆ ಮುಕ್ತವಾದ ಅಭಿಪ್ರಾಯವನ್ನು ನೀಡಿರಿ.

ಪ್ರತಿ ಯೊಂದು ಪ್ರಶ್ನೆಯ ಬಲಬದಿಗೆ ಹೌದು ಮತ್ತು ಇಲ್ಲ ಎಂಬ ಕೆಲವು ಉತ್ತರಗಳನ್ನು ನೀಡಲಾಗಿದೆ. ನಿಮ್ಮ ಸಲಹೆಯು ಪ್ರಶ್ನೆಗೆ ಅನುಕೂಲವಿದ್ದಲ್ಲಿ, 'ಹೌದು' ಉತ್ತರಕ್ಕೆ ದುಂಡು ಸುತ್ತಲು, ತಪ್ಪಿದ್ದಲ್ಲಿ 'ಇಲ್ಲ' ಉತ್ತರಕ್ಕೆ ದುಂಡು ಸುತ್ತಲು ತಿಳಸಲಾಗಿದೆ.

Direction:

Given below are a few questions in the form of Questionnaire. The main purpose of this questionnaire is to seek your valuable opinion regarding studying Kannada Language in English medium. Please give your frank opinion on different aspects. In the right hand side of Each question, the words 'Yes' and 'No' are give. Please encircle 'yes' if you hold the favourable opinion and 'No' if you hold an opinion unfavourable .

1. ಹೆಸರು/ Name : ಜಿ. ಸಂಧ್ಯ
2. ಲಿಂಗ/ Gender — ಹುಡುಗ/ Boy ○ ಹುಡುಗಿ/ Girl ☑
3. ವಯಸ್ಸು/ Age : 5 ರಿಂದ 8 ವರ್ಷ / 5 to 8 years ○ ; 9 ರಿಂದ 13 ವರ್ಷ / 9 to 13 years ☑
4. ತರಗತಿ/ Class : ೭ನೇ ತರಗತಿ
5. ವಿಳಾಸ/ Address : [illegible]
   a) ಮನೆ ವಿಳಾಸ/ Home [illegible]
   b) ಶಾಲೆ ವಿಳಾಸ/ School ______

6. ವಾಸ್ತವ್ಯ/ Location : ಗ್ರಾಮ/Village ◯ ಪಟ್ಟಣ/Town ◯ ನಗರ/City ✓

7. ತಂದೆಯ ಹೆಸರು/ Fathers Name : [illegible]

ವೃತ್ತಿ/ Occupation : [illegible]

8. ತಾಯಿಯ ಹೆಸರು/ Mothers Name : [illegible]

ವೃತ್ತಿ/ Occupation : [illegible]

9. ತಂದೆಯ ಶೈಕ್ಷಣಿಕ ಅರ್ಹತೆಗಳು :

Fathers Education Qualification:

ಅನಕ್ಷರಸ್ಥರು / Uneducated ◯ 10 ನೇ ತರಗತಿಗಿಂತ ಕಡಿಮೆ/ Below t0th Std ◯

10ನೇ ತರಗತಿ/ 10th Std ◯ ಪಿ.ಯು.ಸಿ/ PUC ◯ ಪದವಿಶಿಕ್ಷಣ/Graduation ◯

ಸ್ನಾತಕೋತ್ತರ ಪದವಿ / Post Graduation ◯ ಇತರೆ/ Others [illegible]

10. ತಾಯಿಯ ಶೈಕ್ಷಣಿಕ ಅರ್ಹತೆಗಳು : ______________________

Mothers Education Qualification:

ಅನಕ್ಷರಸ್ಥರು / Uneducated ◯ 10 ನೇ ತರಗತಿಗಿಂತ ಕಡಿಮೆ/ Below t0th Std ◯

10ನೇ ತರಗತಿ/ 10th Std ✓ ಪಿ.ಯು.ಸಿ/ PUC ◯ ಪದವಿಶಿಕ್ಷಣ/Graduation ◯

ಸ್ನಾತಕೋತ್ತರ ಪದವಿ / Post Graduation ◯ ಇತರೆ/ Others ______________

11. ಕುಟುಂಬದಲ್ಲಿರುವ ಸದಸ್ಯರ ಸಂಖ್ಯೆ :

Number of Members at Family

3 ◯ 4 to 5 ✓ 6 to 8 ◯ More than 8 ◯

12. ನೀನು ದೂರದರ್ಶನ ವೀಕ್ಷಿಸುವಿಯಾ?

Do you watch Television ?

ಹೌದು/ Yes ✓ ಇಲ್ಲ/No ◯

➤ ಹೌದು ಎನ್ನುವುದಾದರೆ ಯಾವ ಭಾಷೆಯಲ್ಲಿ ವೀಕ್ಷಿಸುವಿರಿ ?

if yes in which languages

ಕನ್ನಡ/ Kannada ✓ ಇಂಗ್ಲಿಷ್/ English ◯ ಇತರ ಭಾಷೆ / Others ✓ [illegible]

13. ನೀನು ರೇಡಿಯೋವನ್ನು ಆಲಿಸುವಿಯಾ? / Do you listen Radio ?

ಹೌದು/ Yes ○ ಇಲ್ಲ/No ✓

➤ ಹೌದು ಎನ್ನುವುದಾದರೆ ಯಾವ ಭಾಷೆಯಲ್ಲ ವೀಕ್ಷಿಸುವಿರಿ ?

if yes in which languages

ಕನ್ನಡ/ Kannada ✓ ಇಂಗ್ಲಿಷ್ / English ✓ ಇತರ ಭಾಷೆ / Others ✓ ತೆಲುಗು

14. ನೀನು ಚಲನಚಿತ್ರಗಳನ್ನು ವೀಕ್ಷಿಸುವಿಯಾ ? / Do you Watch films?

ಹೌದು/ Yes ✓ ಇಲ್ಲ/No ○

➤ ಹೌದು ಎನ್ನುವುದಾದರೆ ಯಾವ ಭಾಷೆಯಲ್ಲ ವೀಕ್ಷಿಸುವಿರಿ ? / if yes in which languages

ಕನ್ನಡ/ Kannada ○ ಇಂಗ್ಲಿಷ್ / English ○ ಇತರ ಭಾಷೆ / Others ○

15. ನೀವು ಈ ಕೆಳಗಿನವುಗಳನ್ನು ಯಾವ ಭಾಷೆಯಲ್ಲ ಓದುವಿರಿ ?

In which language do you read the following?

| | ಮನೆ ಭಾಷೆ Regional Language | ಇಂಗ್ಲಿಷ್ English | ಇತರ other |
|---|---|---|---|
| ಪುಸ್ತಕಗಳು/ Books | ✓ | ✓ | ○ |
| ದಿನಪತ್ರಿಕೆಗಳು/ Newspaper | ✓ | ○ | ○ |
| ವಾರ, ಮಾಸ ಪತ್ರಿಕೆಗಳು/ Weakly,monthly Magazines | ○ | ○ | ○ |

16. ನೀವು ಕಥೆಗಳನ್ನು ಕೇಳುವಿರೇ? ಹೌದಾದರೆ ಯಾರಿಂದ ಕೇಳುವಿರಿ.

Do you listen stories, if yes from whom

ಹೌದು/ Yes ✓ ಇಲ್ಲ/No ○

ಅಜ್ಜಿ, ತಾಯಿ, ಶಿಕ್ಷಕರು

17. ಮನೆಯಲ್ಲಿ ನೀವು ಯಾವ ಭಾಷೆಯನ್ನು ಮಾತನಾಡುತ್ತೀರಿ ?

which language do you use speak at your home ?

- ಕನ್ನಡ/ Kannada ○
- ತೆಲುಗು/ Telugu ✓
- ಉರ್ದು/ Urdu ○
- ಹಿಂದಿ/ Hindi ○
- ಇಂಗ್ಲಿಷ್/ English ○
- ಇತರೆ/ Others ________________

18. ನಿಮ್ಮ ನೆರೆ ಹೊರೆಯವರು ಹೆಚ್ಚು ಉಪಯೋಗಿಸುವ ಭಾಷೆಗಳು ಯಾವುವು?
which language is commonly used in your neighborhood/ locality

- ಕನ್ನಡ/ Kannada
- ತೆಲುಗು/ Telugu
- ಹಿಂದಿ/ Hindi
- ಇಂಗ್ಲಿಷ್/ English
- ಇತರೆ/ Others _______________

19. ನೀವು ನಿಮ್ಮ ಶಾಲೆಯಲ್ಲ ಮಾತನಾಡುವ ಭಾಷೆಗಳು ಯಾವುವು?
which language do you speak at your school?

- ಕನ್ನಡ/ Kannada
- ಇಂಗ್ಲಿಷ್/ English
- ಇತರೆ/ Others _______________

20. ನಿಮ್ಮ ಶಾಲೆಯಲ್ಲ ಯಾವ ಯಾವ ಭಾಷೆಗಳನ್ನು ಕಲಿಸುವರು ?
Which are the languages are taught at your school?

- ಕನ್ನಡ/ Kannada
- ಹಿಂದಿ/ Hindi
- ಇಂಗ್ಲಿಷ್/ English
- ಇತರೆ/ Others _______________

21. ನಿನಗೆ ಯಾವ ಭಾಷೆಗಳು ಸರಳವೆನಿಸುತ್ತವೆ ?
Which is the easiest languages for you?

- ಕನ್ನಡ/ Kannada
- ಹಿಂದಿ/ Hindi
- ಇಂಗ್ಲಿಷ್/ English
- ಇತರೆ/ Others _______________

22. ನಿನಗೆ ಯಾವ ಭಾಷೆಗಳು ಕಠಿಣವೆನಿಸುತ್ತದೆ ?
Which language is difficult for you?

- ಕನ್ನಡ/ Kannada
- ಹಿಂದಿ/ Hindi
- ಇಂಗ್ಲಿಷ್/ English

- ಇತರೆ/ Others ________________

23. ಯಾವ ಭಾಷೆಯನ್ನು ನೀನು ಇನ್ನೂ ಹೆಚ್ಚಾಗಿ ಕಲಿಯ ಬೇಕೆಂದುಕೊಳ್ಳುತ್ತೀ ?

    Which language do you want to learn more?

    - ಕನ್ನಡ/ Kannada [✓]
    - ಹಿಂದಿ/ Hindi [✓]
    - ಇಂಗ್ಲಿಷ್/ English [✓]
    - ಇತರೆ/ Others ________________

24. ಆಂಗ್ಲ ಮಾಧ್ಯಮ ಕಲಿಕೆಯಲ್ಲಿ ಕನ್ನಡವನ್ನು ಒಂದು ಭಾಷೆಯಾಗಿ ಕಲಿಯುವುದರ ಬಗ್ಗೆ ನಿನಗೆ ಏನೆನಿಸುತ್ತದೆ ?

    How do you feel about learning Kannada in English Medium

    - ಸರಳ/ Easy [ ]
    - ಸಾಮಾನ್ಯ/ Average [✓]
    - ಕಠಿಣ/ Difficult [ ]

25. ಕನ್ನಡ ತರಗತಿಯ ಬಗ್ಗೆ ನಿನ್ನ ಅಭಿಪ್ರಾಯವೇನು ?

    How do you feel about the Kannada Classes ?

    - ಹೆಚ್ಚು ಆಸಕ್ತಿದಾಯಕವಾಗಿದೆ/ Interesting [✓]
    - ತುಂಬಾ ಬೇಜಾರು/ Boring [ ]
    - ನಿರಾಸಕ್ತಿ ದಾಯಕವಾಗಿದೆ/ Uninteresting [ ]

26. ನೀನು ಕನ್ನಡ ಭಾಷೆಯನ್ನು ಕಲಿಯಲು ಇಷ್ಟಪಡುತ್ತೀಯೇ ?

    Would you like to learn Kannada language ?

    ಹೌದು/ Yes [✓] ಇಲ್ಲ/ No [ ]

    ಕಾರಣ/ Reason ನಾವು ಕರ್ನಾಟಕದಲ್ಲಿ ಇದ್ದೇವೆ ಆದ್ದರಿಂದ ನಾವು ಕನ್ನಡವನ್ನು ಕಲಿಯಬೇಕು.

27. ನಿಮಗೆ ಸಕಾಲದಲ್ಲಿ ಪಠ್ಯಪುಸ್ತಕಗಳು ದೊರೆಯುತ್ತಿವೆಯೇ ?

    Do you get text books in the time ?

    ಹೌದು/ Yes [✓] ಇಲ್ಲ/ No [ ]

28. ನಿಮ್ಮ ಪಾಠಗಳು ನಿಗಧಿತ ಅವಧಿಯೊಳಗೆ ಪೂರ್ಣಗೊಳ್ಳುತ್ತಿವೆಯೇ ?

    Do your lessons will completed in time ?

    ಹೌದು/ Yes [✓] ಇಲ್ಲ/ No [ ]

    ಇಲ್ಲವೆಂದಾದಲ್ಲಿ ಕಾರಣಕೊಡಿ/ if no give reason ____________________________

29. ಶಿಕ್ಷಕರು ಯಾವ ಭಾಷಾ ಬೋಧನಾ ವಿಧಾನವನ್ನು ಬಳಸಿ ಬೋಧನೆಯನ್ನು ಮಾಡುತ್ತಿರುವರು ?

In your classes which methods are followed by teachers to teach Kannada?

- ಚಟುವಟಿಕೆಯಿಂದ ಕೂಡಿರುವ ವಿಧಾನ/ Activity oriented method ☑
- ವಿಶಿಷ್ಟ ವಿಧಾನ ಪ್ರತ್ಯೇಕ ವಿಧಾನ/ Special method ○
- ಸಾಮಾನ್ಯ ವಿಧಾನ/ General method ☑
- ಪ್ರಾತ್ಯಕ್ಷಿತ ವಿಧಾನ/ Demonstration method ○
- ಉಪನ್ಯಾಸ ವಿಧಾನ/ lecturing method ○

30. ನಿಮ್ಮ ಪಠ್ಯಕ್ರಮ ನಿಮಗೆ ತೃಪ್ತಿಯನ್ನು ನೀಡಿದೆಯೇ ?

Are you satisfied with you textbook syllabus ?

ಹೌದು/ Yes ☑ ಇಲ್ಲ/ No ○

ಕಾರಣ ಕೊಡಿ/ Give Reason ಓದಲು ಸುಲಭಗೆ ಸರಳವಾಗಿದೆ

31. ಕನ್ನಡ ಭಾಷಾ ಬೋಧನೆಯ ಸಂದರ್ಭದಲ್ಲ ಶಿಕ್ಷಕರು ದೃಕ್‌ಶ್ರವಣೋಪಕರಣಗಳನ್ನು ಬಳಸುತ್ತಾರೆಯೇ ? ಅವು ಯಾವುವು ?

In Kannada language class teachers are using any multimedia? What are those?

ಹೌದು/ Yes ○ ಇಲ್ಲ/ No ☑

ಹೌದಾದರೆ ವಿವರಿಸಿ/ If yes explain it ----------------------------------------

----------------------------------------------------------------

32. ಕನ್ನಡ ಭಾಷಾ ಬೋಧನೆ ಇವರಿಂದ ನಡೆಯುತ್ತದೆ ?

Who teaches you Kannada Language class ?

- ಭಾಷಾ ಬೋಧಕರಿಂದ/ Language Teacher

  ಹೌದು/ Yes ☑ ಇಲ್ಲ/ No ○
- ಇತರೆ ಶಿಕ್ಷಕರಿಂದ/ Other Teacher

  ಹೌದು/ Yes ○ ಇಲ್ಲ/ No ○
- ಕನ್ನಡ ಮಾತೃಭಾಷೆಯುಳ್ಳ ಶಿಕ್ಷಕರಿಂದ/ Kannada Mother tongue Teacher

  ಹೌದು/ Yes ☑ ಇಲ್ಲ/ No ○
- ಕನ್ನಡೇತರ ಭಾಷಾ ಶಿಕ್ಷಕರಿಂದ/Other Mother tongue teacher

  ಹೌದು/ Yes ○ ಇಲ್ಲ/ No ○

33. ನೀನು ಕನ್ನಡ ಕಲಿಕೆಗೆ ಸಂಬಂಧಿಸಿದ ಗೃಹಕಾರ್ಯವನ್ನು ಮಾಡುವಿಯಾ? ಅದನ್ನು ಶಿಕ್ಷಕರು ಪರಿಶೀಲಿಸುತ್ತಾರೆಯೇ ?

Are you doing Kannada Homework? Whether it is corrected by the teacher

ಹೌದು/ Yes ☑ ಇಲ್ಲ/ No ○

34. ಕನ್ನಡ ವಿಷಯಕ್ಕಾಗಿ ನೀನು ಖಾಸಗಿ ಪಾಠವನ್ನು ತೆಗೆದುಕೊಳ್ಳುತ್ತಿಯಾ ?

Do you take private tuition for Kannada Subject ?

ಹೌದು/ Yes ☑ ಇಲ್ಲ/ No ○

35. ನೀನು ಮನೆಗೆಲಸವನ್ನು ಹೇಗೆ ಮಾಡುವಿ

How would you do your homework ?

- ಸ್ವತಃ ಮಾಡುವಿರಾ/ Doing by yourself

  ಹೌದು/ Yes ☑ ಇಲ್ಲ/ No ☑

- ಮನೆಯ ಸದಸ್ಯರ ಸಹಾಯ ಪಡೆಯುವುದು/ Taking help with the family members

  ಹೌದು/ Yes ☑ ಇಲ್ಲ/ No ○

- ಶಿಕ್ಷಕರ ಮೇಲ್ವಿಚಾರಣೆಯಿಂದ ಮಾಡುವುದು/ Under the supervision of teacher

  ಹೌದು/ Yes ☑ ಇಲ್ಲ/ No ○

36. ಕನ್ನಡಭಾಷೆಯ ಬಗೆಗೆ ನಿಮ್ಮ ಅಭಿಪ್ರಾಯಗಳನ್ನು ತಿಳಿಸಿ ?

Specify your opinions about Kannada Languages ?

- ಕಲಿಯಲು ಸುಲಭ/ Easy to learn ○
- ಕಲಿಯಲು ಕಷ್ಟ / Difficult to learn ○
- ಅರ್ಥಮಾಡಿಕೊಳ್ಳಲು ಸುಲಭ/ Easy to understand ☑
- ಅರ್ಥಮಾಡಿಕೊಳ್ಳಲು ಕಷ್ಟ/ Difficult to understand ○
- ಮಾಧ್ಯಮದ ಭಾಷೆಗೆಹತ್ತಿರ/ Its near to medium ☑
- ಮಾಧ್ಯಮದ ಭಾಷೆಗಿಂತಲು ಭಿನ್ನವಾಗಿದೆ/ its different from medium ○

37. ಕನ್ನಡದ ಕುರಿತು ಒಟ್ಟಾರೆ ನಿನ್ನ ಅಭಿಪ್ರಾಯವೇನು ?

How do you feel about Kannada ?

[illegible] ಕನ್ನಡ ಓದಲು [illegible]
[illegible]

ಸ್ಥಳ/ Place : [illegible]

ದಿನಾಂಕ/ Date : [illegible]

| ಮೂಲ ರೂಪ | ಬರವಣಿಗೆ ರೂಪ |
|---|---|
| ನನ್ನ | ನನ್ನು |
| ಓದುತ್ತಿದ್ದೇನೆ | ಒದುತಿದೆನೆ |
| ಕಣೇಕಲ್ | ಕನೆಕಲ್ |
| ಆದಿನಾರಾಯಣ | ಅದಿನರಯಣ |
| ನಮಗೆ | ನಮ್ಮಗೆ |
| ಹೆಮ್ಮೆ | ಹ್ಮೆಮೆ |

ನನ್ನು ಮಕ್ಕಲ ಮಂಟಪ ಶಾಲೆಯಲಿ ಒದುತಿದೆನೆ, ಕನೆಕಲ್, ವ್ಯಪರಿ, ಇದೆವೆ. ನಮ್ಮಗೆ ಸರಳವಗಿದೆ. ನಮ್ಮಗೆ ಕನ್ನಡ ಹ್ಮೆಮೆ. ಈ ರೀತಿಯಾಗಿ ವಿದ್ಯಾರ್ಥಿಯು ಪದಾದಿ, ಪದ ಮಧ್ಯ, ಪದಾಂತ್ಯದಲ್ಲಿ ಅಕ್ಷರ ದೋಷಗಳು ಮಾಡಿರುವುದನ್ನು ಗಮನಿಸಬಹುದು. 'ಆ' ಕಾರಕ್ಕೆ ಬದಲಾಗಿ 'ಅ'ಕಾರವನ್ನು ಬಳಸಿರುತ್ತಾರೆ. ಒತ್ತಕ್ಷರಗಳನ್ನು ಲೋಪ ಮಾಡಿರುವುದು ಕಂಡು ಬರುತ್ತದೆ. 'ಹ' ಕಾರಕ್ಕೆ 'ಎ' ಕಾರವನ್ನು ಬಳಸಿರುತ್ತಾರೆ. ಕಾರಣ ಪರಿಸರದಲ್ಲಿ 'ಅ' ಕಾರ ಮತ್ತು 'ಹ' ಕಾರಗಳನ್ನು ಬಳಸದೆ ಇರುವುದನ್ನು ಗಮನಿಸಬಹುದು. ಒತ್ತಕ್ಷರಗಳ ಬಳಕೆ ಇಲ್ಲದಿರುವುದು ಕಂಡು ಬರುತ್ತದೆ. ಈ ನಿಟ್ಟಿನಲ್ಲಿ ವಿದ್ಯಾರ್ಥಿಗಳ ಬರವಣಿಗೆಯ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ.

**೫.೨.೧ ಸ್ವರಗಳನ್ನು ಬರೆಯುವಾಗ ಕಂಡು ಬಂದ ಸಮಸ್ಯೆಗಳು**

ವಿದ್ಯಾರ್ಥಿಗಳು ಬರವಣಿಗೆಯಲ್ಲಿ ಸಾಮಾನ್ಯವಾಗಿ ಮಾಡುವ ದೋಷಗಳೆಂದರೆ ಹ್ರಸ್ವಸ್ವರಕ್ಕೆ ದೀರ್ಘಸ್ವರ, ದೀರ್ಘಸ್ವರಕ್ಕೆ ಹ್ರಸ್ವರವನ್ನು ಬಳಸಿ ಬರೆಯುವುದು. ಪದಾದಿ ಪದ, ಮಧ್ಯ ಮತ್ತು ಪದಾಂತ್ಯ ಪರಿಸರದಲ್ಲಿ ವ್ಯಂಜನಗಳನ್ನು ಲೋಪ ಮಾಡಿ ಬರೆಯುವುದು. ಕಾಗುಣಿತದ ರೇಖಾ ವಿನ್ಯಾಸಗಳನ್ನು ಸರಿಯಾಗಿ ಅಳವಡಿಸದೇ ಇರುವುದು. ತಲಕಟ್ಟು, ಏತ್ವ, ದೀರ್ಘ, ಕೊಂಬು, ಐತ್ವ, ಅರ್ಕಾವತ್ತು, ಅರ್ಧಾಕ್ಷರ ಚಿಹ್ನೆ ಮೊದಲಾದವುಗಳನ್ನು ಸರಿಯಾಗಿ ಸೇರಿಸದೇ ಬರೆಯುವುದು. ಅಲ್ಪಪ್ರಾಣ, ಮಹಾಪ್ರಣಾ, ದೀರ್ಘಾಕ್ಷರ, ಸಂಯುಕ್ತಾಕ್ಷರಗಳನ್ನು ಕ್ರಮವಾಗಿ ಬರೆಯದಿರುವುದು. ಅನುಸ್ವಾರ, ವಿಸರ್ಗಗಳನ್ನು ಲೋಪ ಮಾಡಿ ಬರೆಯುವುದು. ಅ, ಹ, ಸ, ಷ, ಲ, ಳ, ನ, ಣ, ಕ್ಷ, ಹ, ವ, ಇತ್ಯಾದಿಗಳನ್ನು ಬರೆಯುವಾಗ ಮಾಡುವ ದೋಷಗಳನ್ನು ಗಮನಿಸಬಹುದು.

• ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬಳಕೆ ಮಾಡಿ ಓದುವುದು

ಪದಾದಿ ಪರಿಸರ

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಆ>ಅ | ಆಶ್ಚರ್ಯ | ಅಚರ್ಯ |
| | ಆದರ | ಅದರ |
| | ಆವರಣ | ಅವರಣ |
| | ಆಟ | ಅಟ |
| | ಆಳು | ಅಲು |
| | ಆಲ | ಅಲ |
| ಈ>ಇ | ಈತ | ಇತ |
| | ಈಚಲ ಮರ | ಇಚಲ ಮರ |
| | ಈಡೇರು | ಇಡೇರು |
| | ಈಗ | ಇಗ |
| | ಈಡೇರು | ಇಡೇರು |
| ಊ>ಉ | ಊದು | ಉದು |
| | ಊರಿಗೆ | ಉರಿಗೆ |
| | ಊನ | ಉನ |
| | ಊಳಿಗ | ಉಳಿಗ |
| ಏ>ಎ | ಏತ | ಎತ |
| | ಏರು | ಎರು |
| | ಏಕೆ | ಎಕೆ |
| | ಏಕದಳ | ಎಕದಳ |
| ಓ>ಒ | ಓಲೆ | ಒಲೆ |
| | ಓದು | ಒದು |
| | ಓಜ | ಒಜ |
| | ಓರ್ವ | ಒರವ |
| | ಓಲಗ | ವಾಲಗ |

- **ಪದಮಧ್ಯ ಪರಿಸರ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಆ>ಅ | ಆರಾಮ | ಅರಾಮ |
| | ಉಷಾ | ಉಷ |
| | ಉಪಾಯ | ಉಪಯ |
| | ಪರ್ಯಾಯ | ಪರ್ಯಯ |
| ಈ>ಇ | ವಿನೀತ | ವಿನತ |
| | ಸುನೀತ | ಸುನಿತ |
| | ಪ್ರಣೀತ | ಪ್ರಣಿತ |
| | ಸುಪ್ರೀತ | ಸುಪ್ರಿತ |
| ಏ>ಎ | ತೇರು | ತೆರು |
| | ಮೇರು | ಮೆರು |
| | ಗೇರು | ಗೆರು |
| | ಬೇರೆ | ಬೆರೆ |
| | ಸೇಬು | ಸೆಬು |
| ಓ>ಒ | ಭೋಜನ | ಬೊಜನ |
| | ಗೋಲಿ | ಗೊಲಿ |
| | ತೋರು | ತೊರು |
| | ಜೋರು | ಜೊರು |
| | ತೋಟ | ತೊಟ |

**ಪದಾಂತ್ಯ ಪರಿಸರ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಆ>ಅ | ಜಟಕಾ | ಜಟಕ |
| | ಶಾಲಾ | ಶಾಲ |
| | ತುಂಬಾ | ತುಬ |
| | ಕೂಬಾ | ಕುಬ |

| | | |
|---|---|---|
| **ಈ>ಇ** | ಕೀಟ | ಕಿಟ |
| | ನೀರು | ನಿರು |
| | ಮೀರಾ | ಮಿರ |
| | ರೀತಿ | ಎತಿ |
| **ಊ>ಉ** | ಗೂಡು | ಗುಡು |
| | ನಿಗೂಡ | ನಿಗುಡ |
| | ಸಮೂಹ | ಸಮುಹ |
| | ಕೂಟ | ಕೂಟ |
| | ಹಿಂದೂ | ಹಿಂದು |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಪದಾದಿ, ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಬರುವ ದೀರ್ಘ ಸ್ವರಗಳಿಗೆ ಹ್ರಸ್ವಸ್ವರಗಳನ್ನು ಬರೆಯುತ್ತಾರೆ. ಈ ರೀತಿಯ ವ್ಯತ್ಯಾಸಕ್ಕೆ ಕಾರಣಗಳೆಂದರೆ

- ಬರವಣಿಗೆಯ ಕೌಶಲವನ್ನು ಕಲಿಯದೇ ಇರುವ ಮಕ್ಕಳು ಆಡುಮಾತಿನಲ್ಲಿ ದೀರ್ಘ ಸ್ವರಗಳ ಬಳಕೆ ಮಾಡದಿರುವುದು. ಆದರೆ ಇದು ಮಕ್ಕಳು ಸ್ವಯಂ ಆಗಿ ಅಕ್ಷರಗಳನ್ನು ಬರೆಯುತ್ತಾ ತಪ್ಪುಗಳನ್ನು ಮಾಡಿದ್ದಾರೆ.
- ಸ್ವರಗಳ ಉಚ್ಚಾರಣೆಯಲ್ಲಿನ ಅಲ್ಪಧ್ವನಿ ಸಾಮ್ಯತೆಯನ್ನು ಗಮನಿಸದೆ ಬರೆಯುವುದು.
- ಉಚ್ಚಾರಣೆ ಮಾಡುವಂತೆಯೇ ಬರೆಯುತ್ತಾರೆ.
- ಶಿಕ್ಷಕರು ಸ್ವತಃ ತಾವೇ ಸರಿಯಾಗಿ ಬರಿಯದೆ ಇರುವುದರಿಂದ ಶಿಕ್ಷಕರನ್ನೇ ಅನುಕರಣೆ ಮಾಡುವ ವಿದ್ಯಾರ್ಥಿಗಳು ಶಿಕ್ಷಕರು ಮಾಡಿದಂತಹ ತಪ್ಪುಗಳನ್ನೇ ಬರವಣಿಗೆಯಲ್ಲಿ ಮಾಡುವ ಸಂದರ್ಭದಲ್ಲಿ ಮಾಡುತ್ತಾರೆ.
- ವಿದ್ಯಾರ್ಥಿಗಳು ಶಬ್ದಗಳ ಗ್ರಹಿಕೆಯಲ್ಲಿನ ದೋಷದಿಂದಾಗಿ ಆ ವಿದ್ಯಾರ್ಥಿಗಳು ಸ್ವರಗಳನ್ನು ವ್ಯತ್ಯಾಸ ಮಾಡಿ ಬರೆಯುತ್ತಾರೆ.
- ಮಕ್ಕಳಿಗೆ ಹ್ರಸ್ವಸ್ವರ ಹಾಗೂ ದೀರ್ಘಸ್ವರಗಳ ಬಗ್ಗೆ ಸ್ಪಷ್ಟವಾಗಿ ಬರೆಯುವುದರ ಬಗ್ಗೆ ತಿಳಿಯದೆ ಇರುವ ಕಾರಣಗಳಿಂದ ಈ ರೀತಿಯಲ್ಲಿ ವಿದ್ಯಾರ್ಥಿಗಳು ಸ್ವರಗಳನ್ನು ವ್ಯತ್ಯಾಸ ಮಾಡಿ ಬರೆಯುತ್ತಾರೆ.

➤ **ಸ್ವರಗಳಿಗೆ ಬದಲಾಗಿ ವ್ಯಂಜನಗಳ ಬಳಕೆ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಆ>ಹಾ | ಆವಿ | ಹಾವಿ |
| | ಆರಿಸು | ಹಾರಿಸು |
| | ಆವು | ಹಾವು |
| | ಆಳು | ಹಾಳು |
| ಈ>ಹಿ | ಈಗ | ಹಿಗ |
| | ಈಟಿ | ಹಿಟಿ |
| | ಈಸು | ಹಿಸು |
| | ಈಶ್ವರ | ಹಿಶವರ |
| | ಈಜು | ಹಿಜು |
| ಋ>ರು | ಋಗ್ವೇದ | ರುಗವೇದ |
| | ಋಷಿ | ರುಷಿ |
| | ಋಣ | ರುಣ |
| | ಋಜು | ರುಜು |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಪದಾಥಿಯಲ್ಲಿ ಸ್ವರಗಳಿಗೆ ಬದಲಾಗಿ ವ್ಯಂಜನಗಳನ್ನು ಬಳಕೆ ಮಾಡಿ ಬರೆಯುತ್ತಾರೆ. ಆ, ಈ, ಋ ಸ್ವರಗಳಿಗೆ ಹಾ, ಹೀ, ರು, ವ್ಯಂಜನಗಳನ್ನು ಬಳಕೆ ಮಾಡಿ ಬರೆದಿರುವುದನ್ನು ಗಮನಿಸಬಹುದು.

➤ ಇಲ್ಲಿ ಉಚ್ಚಾರಣಾ ಭಿನ್ನತೆ ತಿಳಿಯದಿರುವುದು.

➤ ಪರಿಸರದ ಭಾಷೆಯಲ್ಲಿ ಸ್ವರಗಳ ಬಳಕೆ ಇಲ್ಲದಿರುವುದನ್ನು ಗಮನಿಸಬಹುದು.

➤ ತೆಲುಗು ಮಾತೃ ಭಾಷೆಯು ಪ್ರಭಾವ ಬೀರುವುದು.

➤ ಆಂಗ್ಲಮಾಧ್ಯಮದಲ್ಲಿ ಕಲಿಯುತ್ತಿರುವುದು ಕಾರಣವಾಗಿದೆ.

ಇನ್ನು 'ಈ' 'ಋ' ಸ್ವರಗಳ ಬದಲಾಗಿ ವ್ಯಂಜನ ಧ್ವನಿ 'ಹಿ' 'ರು'ಗಳನ್ನು ಬಳಕೆ ಮಾಡಿ ಬರೆಯುವುದನ್ನು ಗಮನಿಸಿದಾಗ ಈ ಧ್ವನಿಗಳಲ್ಲಿನ ಉಚ್ಚಾರಣಾ ವ್ಯತ್ಯಾಸವನ್ನು ಗಮನಿಸದಿರುವುದು ಹಾಗೂ 'ಈ' 'ಋ' ಗಳ ಬಳಕೆ ಕನ್ನಡದಲ್ಲಿ ಕಡಿಮೆ ಬಳಕೆ ಮಾಡುವುದರಿಂದ ಈ ರೀತಿಯಲ್ಲಿ ವ್ಯತ್ಯಾಸದಿಂದ ಬರೆಯಲು ಸಾಧ್ಯವಿದೆ.

- **ಅನುಸ್ವಾರ ಹಾಗೂ ವಿಸರ್ಗಗಳನ್ನು ಲೋಪ ಮಾಡಿ ಬರೆಯುವುದು**

| ಬರಹ ರೂಪ | ಬರವಣಿಗೆ ರೂಪ |
|---|---|
| ಮಂದ | ಮದ |
| ಕಂಪನ | ಕಪನ |
| ಅಂತ | ಅತ |
| ಬಂದ | ಬದ |
| ದುಃಖ | ದುಕ |
| ಅಂತಃಪುರ | ಅತಪುರ |
| ಅಂತಃಕರಣ | ಅತಕರಣ |

**ವಿಶ್ಲೇಷಣೆ**

ಪದಮಧ್ಯ ಪರಿಸರದಲ್ಲಿನ ಅನುಸ್ವರ ಮತ್ತು ವಿಸರ್ಗಗಳನ್ನು ಲೋಪ ಮಾಡಿ ಬರೆಯುತ್ತಾರೆ. ಈ ರೀತಿ ವ್ಯತ್ಯಾಸ ಮಾಡಿ ಬರೆಯಲು ಅನುಸ್ವರ ಮತ್ತು ವಿಸರ್ಗಗಳ ಬರೆವಣಿಗೆಯ ವ್ಯತ್ಯಾಸ ತಿಳಿಯದಿರುವುದು ಹಾಗೂ ತೆಲುಗು ಮತ್ತು ಉರ್ದು, ಮರಾಠಿ, ಭಾಷೆಗಳ ಪ್ರಭಾವವಿರುವುದು ಕಂಡು ಬರುತ್ತದೆ. ಇಂಗ್ಲಿಷ್ ಮಾಧ್ಯಮವು ಕಾರಣವಾಗಿದೆ.

- **ಸಂಧ್ಯಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು**

ಸಂಧ್ಯಕ್ಷರಗಳಾದ 'ಐ', 'ಔ' ಗಳನ್ನು ಪದಾದಿ, ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ 'ಐ' ಹಾಗೂ 'ಔ' ಧ್ವನಿಗಳಿಗೆ ಬದಲಿಗೆ ಕ್ರಮವಾಗಿ 'ಅಯ್' ಹಾಗೂ 'ಅವ್' ಬಳಕೆ ಮಾಡಿ ಬರೆಯುತ್ತಾರೆ. ಈ ರೀತಿಯ ವ್ಯತ್ಯಾಸ ಎಲ್ಲ ತರಗತಿಗಳಲ್ಲಿ ಕಂಡು ಬರುತ್ತದೆ.

**ಪದಾದಿ ಪರಿಸರ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| **ಐ>ಅಯ್** | ಐಸಿರಿ | ಅಯಿಸಿರಿ |
| | ಐಹಿಕ | ಅಯಿಕ |
| | ಐದೆ | ಅಯಿದೆ |
| | ಐಕ್ಯ | ಅಯಿಕ್ಯ |
| | ಐಲು | ಅಯಲು |
| | ಐದು | ಅಯಿದು |

| | | |
|---|---|---|
| ಔ>ಅವ್ | ಔತಣ | ಅವತಣ |
| | ಔಡಲ | ಅವಡಲ |
| | ಔಷಧ | ಅವಶದ |
| | ಔಚಿತ್ಯ | ಅವಚಿತ |

**ಪದಮಧ್ಯ ಪರಿಸರ**

| | ಬರಹ ರೂಪ | ಬರೆಯುವ ರೂಪ |
|---|---|---|
| ಐ>ಯಿ | ಕೈಮುದ್ದು | ಕಯ್‌ಮದ್ದು |
| | ಕೈಗುಣ | ಕಯಗುಣ |
| | ಕೈದಿ | ಕಯದಿ |
| | ಪೈಲು | ಪಯಲು |
| ಔ>ಅವ್ | ಗೌಡ | ಗವುಡ |
| | ಪೌರುಷ | ಪವರುಷ |
| | ಸೌಲಭ್ಯ | ಸವಲಬ |
| | ಮೌನ | ಮವುನ |
| | ಕೌಶಲ | ಕವಸಲ |

**ಪದಾಂತ್ಯ ಪರಿಸರ**

| | ಬರಹ ರೂಪ | ಬರೆಯುವ ರೂಪ |
|---|---|---|
| ಐ>ಅಯ್ | ರೈ | ರಯ್ |
| | ಚೈ | ಚಯರ್ |
| | ಟೈ | ಟಯ್ |
| | ಸೈ | ಸಯ್ |

**ವಿಶ್ಲೇಷಣೆ**

ಸಂಧ್ಯಕ್ಷರಗಳಾದ 'ಐ' ಹಾಗೂ 'ಔ' ಗಳನ್ನು ಮಕ್ಕಳು ಪದಾದಿ, ಪದಮಧ್ಯ ಮತ್ತು ಪದಾಂತ್ಯದಲ್ಲಿ ಬರೆಯುವಾಗ ಕೆಲವು ಬಗೆಯ ಸಮಸ್ಯೆಗಳನ್ನು ಮಾಡುತ್ತಾರೆ. ಬಳ್ಳಾರಿ ನಗರ ಪ್ರದೇಶವು ವಿಶೇಷವಾಗಿ ಬಹುಭಾಷಿಕ ನಗರವಾಗಿರುವುದರಿಂದ ಇಲ್ಲಿನ ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡವನ್ನು ಅಭ್ಯಾಸ ಮಾಡುವಂತಹ ಸಂದರ್ಭದಲ್ಲಿ ಸಂಧ್ಯಕ್ಷರಗಳನ್ನು ವ್ಯತ್ಯಾಸವಾಗಿ ಬರೆಯುತ್ತಾರೆ. ಸಂಧ್ಯಕ್ಷರಗಳ ಉಚ್ಚಾರಣೆ ಹಾಗೂ

ಬರಹಕ್ಕೂ ಇರುವ ಭಿನ್ನತೆಯನ್ನು ಗಮನಿಸದೆ ಇರುವುದು, ಶಿಕ್ಷಕರು ಬರವಣಿಗೆಯ ದೋಷ, ವಿದ್ಯಾರ್ಥಿಗಳು ಆಲಿಸುವಿಕೆಯಲ್ಲಿ ದೋಷ, ತಮ್ಮ ತಮ್ಮ ಮಾತೃ ಭಾಷೆಯ ಪ್ರಭಾವ ಇತ್ಯಾದಿ ಕಾರಣಗಳಿಂದ ಈ ರೀತಿಯ ವ್ಯತ್ಯಾಸ ಬರವಣಿಗೆಯಲ್ಲಿ ಕಾಣುತ್ತೇವೆ.

**೫.೨.೨ ವ್ಯಂಜನ ಪದಗಳನ್ನು ಬರೆಯುವಾಗ ಕಂಡು ಬಂದ ಸಮಸ್ಯೆಗಳು**

ಸಾಮಾನ್ಯವಾಗಿ ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಬರೆಯುವಾಗ ವಿದ್ಯಾರ್ಥಿಗಳು ಅಲ್ಪಪ್ರಾಣಕ್ಕೆ, ಮಹಾಪ್ರಾಣ, ಕ>ಖ, ಗ>ಘ ಕಾರಗಳನ್ನು ಬಳಸುವುದು. ಮಹಾಪ್ರಾಣಾಕ್ಷರಗಳಿಗೆ ಅಲ್ಪಪ್ರಾಣಾಕ್ಷರಗಳನ್ನು ಬರೆಯುತ್ತಾರೆ. ಛ>ಚ, 'ಠ>ಟ', 'ಫ'ಕಾರಕ್ಕೆ ಪಕಾರ ಬಳಸಿ ಬರೆಯುವುದನ್ನು ಗಮನಿಸಬಹುದು. ಅನುನಾಸಿಕ ಧ್ವನಿಗಳನ್ನು ವ್ಯತ್ಯಾಸ ಮಾಡಿ ಬರೆಯುತ್ತಾರೆ. 'ನ' ಕಾರಕ್ಕೆ 'ಣ' ಕಾರವನ್ನು ಬಳಸಿ ಬರೆಯುತ್ತಾರೆ. ಹಾಗೆಯೇ ಪಾರ್ಶ್ವಿಕ ವ್ಯಂಜನ 'ಳ' ಧ್ವನಿಗೆ 'ಲ' ಧ್ವನಿಯನ್ನು ಬಳಕೆ ಮಾಡಿ ಬರೆಯುವುದನ್ನು ಗಮನಿಸಬಹುದು.

- **ಮಹಾಪ್ರಾಣಕ್ಕೆ ಅಲ್ಪಪ್ರಾಣ ಬಳಕೆ**

ಪದಾದಿ, ಪದಮಧ್ಯ ಹಾಗೂ ಪದಾಂತ್ಯ ಪರಿಸರದಲ್ಲಿ ಮಹಾಪ್ರಾಣಕ್ಕೆ ಬದಲಾಗಿ ಅಲ್ಪಪ್ರಾಣ ಶಬ್ದಗಳನ್ನು ಬರೆಯುವುದು ಕಂಡು ಬರುತ್ತದೆ. ಈ ರೀತಿಯ ದೋಷಗಳು ಸಾಮಾನ್ಯವಾಗಿ ಎಲ್ಲ ತರಗತಿಯ ವಿದ್ಯಾರ್ಥಿಗಳಲ್ಲಿಯೂ ಕಂಡು ಬರುತ್ತದೆ.

**ಪದಾದಿ ಪರಿಸರ**

| | **ಬರಹ ರೂಪ** | **ಬರೆಯುವ ರೂಪ** |
|---|---|---|
| ಖ>ಕ | ಖರೆ | ಕರೆ |
| | ಖಡ್ಗ | ಕಡ್ಗ |
| | ಖರ್ಚು | ಕರ್ಚು |
| | ಖೂನಿ | ಕೂನಿ |
| | ಖಂಡಿತ | ಕಂಡಿತ |
| ಘ>ಗ | ಘಟಕ | ಗಟಕ |
| | ಘಾಟು | ಗಾಟು |
| | ಘಟ್ಟ | ಗಟ್ಟ |
| | ಘನತೆ | ಗನತೆ |
| | ಘರ್ಷಣೆ | ಗರಸಣೆ |

| | | |
|---|---|---|
| **ಛ>ಚ** | ಛಂದ | ಚದ |
| | ಛಲ | ಚಲ |
| | ಛತ್ರಿ | ಚತಿರಿ |
| | ಛೀಮಾರಿ | ಚಿಮರಿ |
| | ಛಾಪ | ಚಾಪ |
| **ಝ>ಜ** | ಝಳ | ಜಳ |
| | ಝೇಂಕಾರ | ಜೆಕಾರ |
| | ಝುಂಡಾ | ಜಂಡ |
| | ಝರಿ | ಜರಿ |
| | ಝೊಂಪು | ಜಂಪು |
| **ಠ>ಟ** | ಠರಾವು | ಟರವು |
| | ಠಾಣೆ | ಟಣೆ |
| | ಠಿಕಾಣಿ | ಟಿಕಣ |
| | ಠುಸ್ | ಟುಸ್ |
| | ಠಾವು | ಟವು |
| **ಢ>ಡ** | ಢಾಲು | ಡಲು |
| | ಢಗೆ | ಡಗೆ |
| | ಢಾಳ | ಡಳ |
| | ಢಕ್ಕೆ | ಡಕ್ಕೆ |
| **ಥ>ತ** | ಥಟ್ಟನೆ | ತಟ್ಟನೆ |
| | ಥಳಕು | ತಳಕು |
| | ಥಳಥಳ | ತಳತಳ |
| | ಥೈಲಿ | ತೈಲಿ |
| **ಧ>ದ** | ಧನ್ಯ | ದನ್ಯ |
| | ಧೂಳ್ | ದುಳ್ |
| | ಧಾವಿಸು | ದಾವಿಸು |

| | | |
|---|---|---|
| | ಧೀಮಂತ | ದಿಮಂತ |
| | ಧುರೀಣ | ದುರಿಣ |
| ಫ>ಪ | ಫಕೀರ | ಪಕಿರ |
| | ಫಣಿ | ಪಣಿ |
| | ಫಲಿತ | ಪಲಿತ |
| | ಫಾಲ್ಗುಣ | ಪಲುಗುಣ |
| | ಫಲಕ | ಪಲಕ |
| ಭ>ಬ | ಭಾಗಶಃ | ಬಾಗಶಅ |
| | ಭಟ | ಬಟ |
| | ಭತ್ತ | ಬತ್ತ |
| | ಭರಣಿ | ಬರಣಿ |
| | ಭರವಸೆ | ಬರವಸೆ |

**ಪದಮಧ್ಯ ಪರಿಸರ**

| | **ಬರಹ ರೂಪ** | **ಬರೆಯುವ ರೂಪ** |
|---|---|---|
| ಖ>ಕ | ಕಾರ್ಖಾನೆ | ಕಾರ್‌ಕಾನೆ |
| | ಮುಖ್ಯಾಂಶ | ಮುಕ್ಯಂಸ |
| | ದಖ್ಖನ್ | ದಕನ್ |
| | ಅಖಿಲ | ಅಕಿಲ |
| ಘ>ಗ | ಸಂಘ | ಸಂಗ |
| | ಸಂಘಟನೆ | ಸಂಗಟನೆ |
| | ಮೇಘನ | ಮೆಗನ |
| | ಲಂಘನೆ | ಲಂಗನೆ |
| ಛ>ಚ | ಮೂರ್ಛನ | ಮುರುಚನ |
| | ಮೂರ್ಛೆ | ಮುರುಚೆ |
| | ಊಂಛಾ | ಉಂಚ |
| ಠ>ಟ | ಕಠಿಣ | ಕಟಿನ |
| | ಪೀಠಿಕೆ | ಪಿಟಿಕೆ |

| | | |
|---|---|---|
| | ಪಾಠಿ | ಪಾಟಿ |
| | ಕಠೋರ | ಕಟೊರ |
| **ಥ>ತ** | ಅಂಥಹ | ಅಂತಹ |
| | ಸಾರಥಿ | ಸರತಿ |
| | ಪಂಥ | ಪಂತ |
| | ಅಥವಾ | ಅತವ |
| | ಯಥೇಚ್ಛ | ಎತೆಚ |
| **ಧ>ದ** | ಅಭಯ | ಅಬಯ |
| | ಅಧರ್ಮ | ಅದರ್ಮ |
| | ಅಧಿಕೃತ | ಅದಿಕೃತ |
| | ಅಧೀನ | ಅದಿನ |
| | ಅಧ್ಯಕ್ಷ | ಅದ್ಯಕ್ಷ |
| **ಫ>ಪ** | ಕಫ | ಕಪ |
| | ಸಫಲ | ಸಪಲ |
| | ರೇಫೆ | ರೆಪೆ |
| | ಜಾಫರ್ | ಜಪರ್ |
| | ಆಫ್ತಾ | ಅಪ್ತ |
| **ಭ>ಬ** | ಅಭಿನಯ | ಅಬಿನಯ |
| | ವಿಭಜನೆ | ವಿಬಜನೆ |
| | ಗರ್ಭ | ಗರ್ಬ |
| | ದರ್ಭೆ | ದರಬೆ |
| | ಸಂಭಾವನೆ | ಸಂಬವನೆ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಮಹಾಪ್ರಾಣಕ್ಕೆ ಬದಲಾಗಿ ಅಲ್ಪಪ್ರಾಣವನ್ನು ಬರೆಯಲು ಕಾರಣ ಆಡು ಮಾತಿನಲ್ಲಿ ಮಹಾಪ್ರಾಣಗಳ ಉಚ್ಚರಣೆ ಇಲ್ಲದಿರುವುದು ಕಂಡು ಬರುತ್ತದೆ. ಕನ್ನಡಿಗರು ಅಲ್ಪಪ್ರಾಣ ಮತ್ತು ಮಹಾಪ್ರಾಣಗಳ ಧ್ವನಿಗಳ ವ್ಯತ್ಯಾಸವನ್ನು ತಮಗರಿವಿಲ್ಲದೆ

ಉಚ್ಚರಿಸುತ್ತಾರೆ. ಅಂದರೆ ಧ್ವನಿ ಸಾಮ್ಯತೆಯನ್ನು ಲೋಪ ಮಾಡಿ ಮಾತನಾಡುತ್ತಾರೆ. ಹಾಗೆಯೇ ಬರೆಯುತ್ತಾರೆ. ಆದರೆ ಬರವಣಿಗೆಯ ಸಂದರ್ಭದಲ್ಲಿ ವ್ಯಾಕರಣ ಬದ್ಧವಾಗಿ ಬರೆಯಬೇಕು. ಮನೆಯ ಪರಿಸರದಲ್ಲಿ ವ್ಯತ್ಯಾಸವಿಲ್ಲದೆ ಬಳಸುವುದು ಒಂದು ಕಾರಣವಾಗಿದೆ. ಈ ಧ್ವನಿಗಳನ್ನು ಶಿಕ್ಷಕರು ಮಕ್ಕಳಿಗೆ ಸಮರ್ಪಕವಾದ ರೀತಿಯಲ್ಲಿ ಅಕ್ಷರ ತಿದ್ದುವ ಸಂದರ್ಭದಲ್ಲಿಯೇ ಬರೆಸಬೇಕು. ಧ್ವನಿಯ ಏರಿಳಿತವನ್ನು ಮಕ್ಕಳಲ್ಲಿ ಬರುವಂತೆ ಮಾಡಬೇಕು. ಅಲ್ಪಪ್ರಾಣ ಮಹಾಪ್ರಾಣಕ್ಕಿರುವ ಸಾಮ್ಯತೆ ಇರುವಂತೆ ವಿದ್ಯಾರ್ಥಿಗಳಲ್ಲಿ ಕಲ್ಪನೆ ಮೂಡಿಸಬೇಕು. ಈ ರೀತಿಯಾಗಿ ಬರೆಯಲು ಕಾರಣವೆಂದರೆ ವಿದ್ಯಾರ್ಥಿಗಳು ಕೇವಲ ಕನ್ನಡದ ಮಾತೃಭಾಷೆವುಳ್ಳವರು ಮಾತ್ರ ಆಗಿರುವುದಿಲ್ಲ. ಆ ವಿದ್ಯಾರ್ಥಿಗಳ ಮಾತೃ ಭಾಷೆ ಬೇರೆ ಬೇರೆಯಾಗಿರುವುದು ಕಂಡು ಬರುತ್ತದೆ. ಆದ್ದರಿಂದ ತಮ್ಮ ಮಾತೃಭಾಷೆಯ ಪ್ರಭಾವದಿಂದಲೂ ಕನ್ನಡ ಬರವಣಿಗೆಯಲ್ಲಿ ಲೋಪಗಳನ್ನು ಮಾಡಿ ಬರೆಯುತ್ತಾರೆ. ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವಲ್ಲಿ ಆಸಕ್ತಿಯ ಕೊರತೆಯೂ ಒಂದು ಕಾರಣವಾಗಿದೆ.

- **ಅನುನಾಸಿಕ ಅಕ್ಷರಗಳನ್ನು ವ್ಯತ್ಯಾಸ ಮಾಡಿ ಬರೆಯುವುದು**

ಅನುನಾಸಿಕ ಅಕ್ಷರಗಳನ್ನು ಮುಖ್ಯವಾಗಿ ಪದಮಧ್ಯ ಮತ್ತು ಪದಾಂತ್ಯದಲ್ಲಿ ಮೂರ್ಧನ್ಯ ಅನುನಾಸಿಕ 'ಣ' ಕಾರಕ್ಕೆ ಬದಲಾಗಿ ದಂತ್ಯ ಅನುನಾಸಿಕ 'ನ' ವನ್ನು ಬರೆಯುತ್ತಾರೆ.

**ಪದಮದ್ಯ ಹಾಗೂ ಪದಾಂತ್ಯ ಶಬ್ದಗಳಲ್ಲಿ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಣ>ನ | ಕಣ | ಕನ |
| | ಗಣಿ | ಗನಿ |
| | ಕಣ್ಣು | ಕನ್ನು |
| | ಕಣೊ | ಕನೊ |
| | ಗಣಿತ | ಗನಿತ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಅನುನಾಸಿಕ ಶಬ್ದಗಳನ್ನು ವ್ಯತ್ಯಾಸ ಮಾಡಿ ಬರೆಯುವುದಕ್ಕೆ ಕಾರಣವೇನೆಂದರೆ ಅನುನಾಸಿಕ ಶಬ್ದಗಳ ಬರವಣಿಗೆಯಲ್ಲಿನ ಶಬ್ದ ಒಂದೇ ರೀತಿಯ ಸಾಮ್ಯತೆಯಾಗಿರುತ್ತದೆ. ಅನುನಾಸಿಕ ಧ್ವನಿ ಸ್ಪಷ್ಟವಾಗಿ ತಿಳಿಯದೇ ಇರುವುದು. ಇದಕ್ಕೆ

ಮತ್ತೊಂದು ಕಾರಣವೆಂದರೆ ವಿದ್ಯಾರ್ಥಿಗಳ ಮನೆಮಾತು ಬೇರೆಯಾಗಿರುವುದು. ಇಲ್ಲಿ ಉರ್ದು, ತಮಿಳು, ತೆಲುಗು ಭಾಷೆಯನ್ನಾಡುವ ಮಕ್ಕಳು ಓದುವಾಗ ಅವರು ಕಣ್ಣು ಎನ್ನುವುದಕ್ಕೆ ಕಳ್ಳು ಎನ್ನುತ್ತಾರೆ. ಇಲ್ಲಿ ಮಕ್ಕಳಿಗೆ ಅನುನಾಸಿಕ ಪದಗಳನ್ನು ಉಚ್ಚಾರಣೆ ಮಾಡಲು ಮಕ್ಕಳು ನಾಲಿಗೆಯು ಹೊರಳದೆ ಇರುವುದು ಇತ್ಯಾದಿ ಕಾರಣಗಳಿಂದ ಶಬ್ದಗಳನ್ನು ಬರೆಯುವಲ್ಲಿ ವ್ಯತ್ಯಾಸಗಳಾಗುವುದನ್ನು ಗಮನಿಸಬಹುದು.

**ಪಾರ್ಶ್ವಿಕ ಶಬ್ದಗಳ ವ್ಯತ್ಯಾಸ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಳ>ಲ | ಕಾಳಹಸ್ತಿ | ಕಾಲಹಸ್ತಿ |
| | ಗುರಳ್ಳು | ಗುರಲ್ಲು |
| | ಗುಳಿಗೆ | ಗುಲಿಗೆ |
| | ಕಂಬಾಲಪಳ್ಳಿ | ಕಂಬಾಲಪಲ್ಲಿ |

**ವಿಶ್ಲೇಷಣೆ**

ವಿದ್ಯಾರ್ಥಿಗಳು ಪಾರ್ಶ್ವಿಕ ಶಬ್ದಗಳನ್ನು ಬರೆಯುವಾಗ ಪಾರ್ಶ್ವಿಕ ಧ್ವನಿಗಳಲ್ಲಿನ ಬರವಣಿಗೆಯ ಭಿನ್ನತೆಯನ್ನು ಗಮನಿಸದೆ ಈ ವಿಧವಾದ ವ್ಯತ್ಯಾಸವನ್ನು ಮಾಡಿ ಬರೆಯುವುದು ಕಂಡು ಬರುತ್ತದೆ. ಈ ರೀತಿಯ ಬರವಣಿಗೆ ತೆಲುಗು, ತಮಿಳು ಮಾತೃ ಭಾಷೆಯನ್ನಾಗಿ ಮಾತನಾಡುವ ವಿದ್ಯಾರ್ಥಿಗಳಲ್ಲಿ ಕಾಣಬಹುದು.

ಆಂಗ್ಲ ಮಾಧ್ಯಮದಲ್ಲಿ 'ಎಲ್' ಧ್ವನಿಯನ್ನು ಉಚ್ಚಾರಣೆ ಮಾಡುವಾಗ ಒಂದೇ ಉಚ್ಚಾರಣೆ ಕೇಳಿಸುತ್ತದೆ. ಕಾರಣ ಕನ್ನಡದಲ್ಲಿರುವ ಉಚ್ಚಾರಣೆಯ ವ್ಯತ್ಯಾಸವನ್ನು ಗ್ರಹಿಸದೇ 'ಳ' ಕಾರಕ್ಕೆ 'ಲ'ಕಾರವನ್ನು ಬಳಸುವುದು ಕಂಡು ಬರುತ್ತದೆ.

- **ಶ,ಷ,ಸ ಧ್ವನಿಗಳಲ್ಲಿ ವ್ಯತ್ಯಾಸಗಳು**

**ಪದಾದಿ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಶ>ಸ | ಶಂಕರ | ಸಂಕರ |
| | ಶತಕ | ಸತಕ |
| | ಶಕ್ತಿ | ಸಕಿತಿ |
| | ಶರಣ | ಸರಣ |

| | | |
|---|---|---|
| ಷ>ಸ | ಷಣ್ಮುಖ | ಸಣ್ಮುಖ |
| | ಷರಾ | ಸರಾ |
| | ಷಟ್ಪದಿ | ಸಟ್ಪದಿ |
| | ಷರಾಯಿ | ಸರಾಯಿ |

**ಪದ ಮಧ್ಯ ಶಬ್ದಗಳು**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಶ>ಸ | ವಿಶಾಖ | ವಿಸಾಕ |
| | ದೇಶ | ದೇಸ |
| | ಕಾಶ್ಮೀರ | ಕಾಸಿಮಿರ |
| | ಶಿಷ್ಯ | ಸಿಸ್ಯ |
| | ದಶಕಂಠ | ದಸಕಂಟ |
| ಷ>ಸ | ವಿಷಮ | ವಿಸಮ |
| | ಔಷಧಿ | ಅವಸದಿ |
| | ಋಷಿ | ರುಸಿ |
| | ಭಾಷೆ | ಬಾಸೆ |
| | ಕಷಾಯ | ಕಸಾಯ |

**ವಿಶ್ಲೇಷಣೆ**

➢ ವಿದ್ಯಾರ್ಥಿಗಳು ಆಡು ಮಾತಿನಲ್ಲಿ ಶ, ಷ, ಕಾರಗಳಿಗೆ 'ಸ' ಕಾರವನ್ನು ಬಳಸುವುದೇ ಕಾರಣ. ಊಷ್ಮ ಶಬ್ದಗಳನ್ನು ಉಚ್ಚಾರಣೆ ಮಾಡುವಾಗ ಶ, ಷ ಧ್ವನಿಗಳ ಬಳಕೆ ಕನ್ನಡದಲ್ಲಿ ಇಲ್ಲದಿರುವುದು ಅಥವಾ ಕಡಿಮೆ ಇರುವುದು ಗಮನಿಸಬಹುದು.

➢ ಶ, ಷ ಗಳ ಬಳಕೆ ಮಾಡುವಾಗ ಧ್ವನಿ ವ್ಯತ್ಯಾಸಗಳನ್ನು ಮಾಡುವ ಬಗ್ಗೆ ಸರಿಯಾದ ಗ್ರಹಿಕೆ ಇಲ್ಲದಿರುವುದು. ಉಚ್ಚಾರಣೆಯಲ್ಲಿ ದೋಷಗಳು ಕಂಡು ಬರಲು ಕಾರಣ ಅನ್ಯಭಾಷೆಯನ್ನು ಮಾತೃಭಾಷೆಯಾಗಿ ಹೊಂದಿರುವುದು.

➢ ಕನ್ನಡ ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಪರಿಸ್ಥಿತಿ ಇದಾಗಿದೆ. ಹೀಗಾಗಿ ಶ, ಷ ಗಳ ಬದಲಾಗಿ ಸ ವನ್ನು ಬಳಸುವುದು ಸಾಮಾನ್ಯವಾಗಿರುವುದನ್ನು ಗಮನಿಸಬಹುದು.

- ಇಂಗ್ಲಿಷಿನ 'ಎಸ್' ಅಕ್ಷರ ಒಂದೇ ಅವರು ಒಳಸುತ್ತಾರೆ. ಎಸ್.ಉಚ್ಚಾರಣೆಯನ್ನು ಮಾಡಿ ರೂಢಿಯಾಗಿರುವುದು ಒಂದು ಕಾರಣವಾಗಿದೆ.
- ಶ, ಷ, ಸ ಗಳ ಉಚ್ಚಾರಣೆ ಒಂದೇ ರೀತಿಯಾಗಿ ಕೇಳಿಸುವುದು ಒಂದು ಕಾರಣವಾಗಿದೆ.

**ಹ ಕಾರಕ್ಕೆ ಬದಲಾಗಿ ಹ್ರಸ್ವ ಸ್ವರ ಬಳಕೆ**

ಪದಾದಿ ಪದಮಧ್ಯ ಪರಿಸರದಲ್ಲಿ ವ್ಯಂಜನ 'ಹ' ಬದಲಿಗೆ ಅ ವನ್ನು ಬಳಕೆ ಮಾಡಿ ವಿದ್ಯಾರ್ಥಿಗಳು ಓದುತ್ತಾರೆ. ಈ ವ್ಯತ್ಯಾಸವು ಎಲ್ಲ ತರಗತಿಗಳಲ್ಲಿಯೂ ಕಂಡು ಬರುತ್ತದೆ.

**ಪದಾದಿ ಪರಿಸರ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಹ>ಅ | ಹಣ | ಅಣ |
| | ಹಸು | ಅಸು |
| | ಹಲಸು | ಅಲಸು |
| | ಹೆಮ್ಮೆ | ಎಮ್ಮೆ |
| | ಹಣತೆ | ಅನತೆ |

- **ಪದಮಧ್ಯ**

| | ಬರಹ ರೂಪ | ಬರವಣಿಗೆ ರೂಪ |
|---|---|---|
| ಹ>ಅ | ಬಹಳ | ಬಅಳ |
| | ಸಾಹಸ | ಸಾಅಸ |
| | ವರಾಹಮಿಹಿರ | ವರಾಅಮಿಇರ |
| | ಸಂಗ್ರಹಾಲಯ | ಸಂಗ್ರ ಆಲಯ |

**ವಿಶ್ಲೇಷಣೆ**

ಶಿಕ್ಷಕರಲ್ಲಿ 'ಹ' ಕಾರದ ಉಚ್ಚಾರಣಾ ದೋಷ ಕಂಡು ಬರುತ್ತವೆ. ವಿದ್ಯಾರ್ಥಿಗಳು ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ವ್ಯಂಜನ ಹ ಧ್ವನಿಗೆ ಬದಲಾಗಿ ಸ್ವರ

ಧ್ವನಿಯಾದ ಅ ಕಾರವನ್ನು ಬಳಕೆ ಮಾಡಿ ಓದುತ್ತಾರೆ. ಇಲ್ಲಿ ವಿದ್ಯಾರ್ಥಿಗಳಿಗೆ ಅಕ್ಷರಗಳ ಉಚ್ಚಾರಣೆ ಸರಿಯಾಗಿ ತಿಳಿಯದೆ ಇರುವುದೇ ಕಾರಣವಾಗಿದೆ. ಈ ಪರಿಸರದಲ್ಲಿ 'ಹ' ಕಾರದ ಬಳಕೆ ಕಡಿಮೆಯಿರುವುದು. ಅ, ಆ, ಹ ಕಾರಗಳ ವ್ಯತ್ಯಾಸ ಗಮನಿಸದೇ ಇರುವುದು ಕಂಡು ಬರುತ್ತದೆ.

**೫.೨.೩ ಗುಣಿತಾಕ್ಷರಗಳ ಬರವಣಿಗೆ**

- ' ಾ '

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ತಲಕಟ್ಟು ದೀರ್ಘವನ್ನು ಬಳಕೆ ಮಾಡದೆ ಬರೆಯುವುದು. ಈ ರೀತಿಯ ವ್ಯತ್ಯಾಸವು ಬಹುತೇಕ ಮಕ್ಕಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಕಾರು | ಕರ್ |
| ಕಾಲು | ಕಲು |
| ಬಾಸಿಂಗ | ಬಸಿಂಗ |
| ಬಾಣಸವಾಡಿ | ಬಣಸವಾಡಿ |
| ಯತನೆ | ತಯನೆ |

- ' ೀ '

ಪದಾದಿ ಮತ್ತು ಪದ ಮಧ್ಯ ಪರಿಸರದಲ್ಲಿ ಮಕ್ಕಳು (ೀ) ಇಳಿಯನ್ನು ಬಳಕೆ ಮಾಡದೆ ಬರೆಯುವುದು ಕಂಡು ಬರುತ್ತದೆ. ಈ ರೀತಿಯ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಮಾತ್ರ ಇದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ತೀರ | ತಿರ |
| ರೀತಿ | ರಿತಿ |
| ಸಮೀಪ | ಸಮಿಪ |
| ಕೀಳು | ಕಿಳು |

- 'ೂ ು'

ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ ಕೊಂಬೊಂದು ದೀರ್ಘವು ಲೋಪ ಮಾಡಿ ಕೊಂಬು ಮಾತ್ರವನ್ನೇ ಬರೆಯುವುದು ಕಂಡು ಬರುತ್ತದೆ. ಈ ರೀತಿಯ ವ್ಯತ್ಯಾಸವು ಕೆಲವು ಮಕ್ಕಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಗೂಟ | ಗುಟ |
| ರೂಪ | ರುಪ |
| ತೂಕ | ತುಕ |
| ಚೂಪು | ಚುಪು |
| ಜೂಜು | ಜುಜು |

- ೃ > ್ರ

ಪದಾದಿ ಮತ್ತು ಪದಾಂತ್ಯ ಸಂದರ್ಭದಲ್ಲಿ ವಟ್ರುಸುಳಿ ( ೃ )ಯನ್ನು ಬಳಸುವ ಬದಲಿಗೆ ಗುಡಿಸಿ ಅಥವಾ ಕೊಂಬನ್ನು ನೀಡಿ ರ ಕಾರದ ಒತ್ತಕ್ಷರಗಳನ್ನು ಬಳಕೆ ಮಾಡಿ ಬರೆಯುತ್ತಾರೆ. ಇದರಿಂದ ಅಕ್ಷರಗಳಲ್ಲಿ ಅರ್ಥ ಕೆಡುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಗೃಹಿಣಿ | ಗ್ರುಹಿನಿ |
| ಗೃಹ | ಗ್ರುಹ |
| ಪೃಥ್ವಿ | ಪ್ರುತುವಿ |
| ಕೃತ್ಯ | ಕ್ರುತಯ |

- ' ೀ '

ಪದಮಧ್ಯ ಪರಿಸರದಲ್ಲಿ ಏತ್ವಧೀರ್ಘ( ೀ)ವನ್ನು ಬರೆಯದೆ ಇರುವುದು ಕಂಡು ಬರುತ್ತದೆ. ಈ ರೀತಿಯ ವ್ಯತ್ಯಾಸ ಕೆಲವು ಮಕ್ಕಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಶೇಂಗಾ | ಸೇಂಗಾ |
| ಬೇಗನೆ | ಬೆಗನೆ |
| ಸೇರುವ | ಸೆರುವ |
| ಅಪೇಕ್ಷೆ | ಅಪೆಕ್ಷೆ |
| ಮೇಲೆ | ಮೆಲೆ |

- 'ೋ> ೊ'

ಪದಮಧ್ಯ ಪರಿಸರದಲ್ಲಿ ಓತ್ವಧೀರ್ಘ( ೋ) ವನ್ನು ಬಳಸದೇ ಬರೆಯುವುದು ಕಂಡು ಬರುತ್ತದೆ. ಈ ರೀತಿಯಾಗಿ ಬಹುತೇಕ ಮಕ್ಕಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ತೋರಣಗಲ್ಲು | ತೊರನಗಲ್ |
| ತೋಳ | ತೊಲ್ |
| ನೋಟ | ನೊಟ್ |
| ಕೋಪಾಗ್ನಿ | ಕೊಪಾಗ್ನಿ |
| ಲೋಚನೆ | ಲೊಚನ್ |

- **‘ ೌ> ಅವ್’**

ಪದಾದಿ ಪರಿಸರದಲ್ಲಿ ಔತ್ವಧೀರ್ಘ( ೌ) ವನ್ನು ಓದದೇ ಆಯಾ ವ್ಯಂಜನದ ಮುಂದೆ ‘ಅವ’ ಕಾರವನ್ನು ಬಳಸಿ ಓದುವುದು ಕಂಡು ಬರುತ್ತದೆ. ಈ ರೀತಿಯಾಗಿ ಎಲ್ಲ ವಿದ್ಯಾರ್ಥಿಗಳು ಓದುತ್ತಾರೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಗೌಸ್ | ಗವಸ್ |
| ಹೌದು | ಅವದು |
| ಮೌಳಿ | ಮವಳಿ |
| ಪೌಳಿ | ಪವಳಿ |

ಪದಾದಿ ಪರಿಸರದಲ್ಲಿ ಗುಣಿತಾಕ್ಷರ ‘ಹಾ’ ಹೈ ಧ್ವನಿಗಳ ಬದಲಾಗಿ ಆ, ಐ ಶಬ್ದಗಳನ್ನು ಬಳಸಿ ಓದುತ್ತಾರೆ. ಈ ರೀತಿಯ ವ್ಯತ್ಯಾಸ ೫ ಮತ್ತು ೬, ೭ನೇ ತರಗತಿಗಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಹಾಲುಗಲ್ಲ | ಆಲುಗಲ್ಲ |
| ಹಾಲುಮತ | ಆಲುಮತ |
| ಹಾಲು | ಆಲು |
| ಹೈರಾಣ | ಐರಾಣ |
| ಹೈನು | ಐನು |

ಪದಾದಿ ಮತ್ತು ಪದಮಧ್ಯ ಪರಿಸರದಲ್ಲಿ ಧಾ, ಧೀ, ಧೋ ಬದಲು ದಾ, ದಿ, ದು, ದೊ ಎಂದು ಬರೆಯುತ್ತಾರೆ. ಈ ರೀತಿಯ ವ್ಯತ್ಯಾಸವನ್ನು ಎಲ್ಲ ವಿದ್ಯಾರ್ಥಿಗಳು

ಮಾಡುತ್ತಾರೆ. ಇಂಗ್ಲಿಷಿನ 'ದ' ಧ್ವನಿಯ ಉಚ್ಚಾರಣೆಯನ್ನು ಮಾತ್ರ ಗ್ರಹಿಸಿರುವುದು ಒಂದು ಕಾರಣವಾಗಿದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಧಾನ್ಯ | ದಾನ್ಯ |
| ಧಾರೆ | ದಾರೆ |
| ಧೀಮಂತ | ದಿಮತ |
| ಧುತ್ತನೆ | ದುತ್ತನೆ |
| ಧೋರಣೆ | ದೊರಣೆ |

ಪದಾದಿ ಪರಿಸರದಲ್ಲಿ ಫಾ, ಫಿ, ಫೇ ಬದಲು ಪಾ, ಪಿ, ಪೆ ಎಂದು ಉಚ್ಚರಿಸುತ್ತಾರೆ. ಈ ರೀತಿಯ ವ್ಯತ್ಯಾಸವು ೫ ರಿಂದ ೭ನೇ ತರಗತಿಯ ಮಕ್ಕಳಲ್ಲಿಯೂ ಕಂಡು ಬರುತ್ತದೆ. 'ಪ' ಧ್ವನಿಯ ಉಚ್ಚಾರಣೆ ಮಾತ್ರ ತಿಳಿದಿರುವುದು ಒಂದು ಕಾರಣ.

| ಬರಹ ರೂಪ | ಬರವಣಿಗೆ ರೂಪ |
|---|---|
| ಫಾಯದೆ | ಪಾಯದೆ |
| ಫಿರ್ಯಾದಿ | ಪಿರ್ಯಾದಿ |
| ಫೇನ | ಪೇನ |
| ಫೇರಿ | ಪೇರಿ |

ಪದಾದಿ ಮತ್ತು ಪದ ಮಧ್ಯ ಪರಿಸರದಲ್ಲಿ ಗುಣಿತಾಕ್ಷರ ಥಾ, ಥೇ, ಥೈ, ಗಳ ಬದಲು ತಾ,ತೆ, ತೈ ಎಂದು ಬರೆಯುತ್ತಾರೆ. ಈ ರೀತಿಯ ವ್ಯತ್ಯಾಸವು ಮಾಧ್ಯಮಿಕ ಶಾಲೆಗಳಲ್ಲಿ ಕಂಡು ಬರುತ್ತದೆ. ಆಂಗ್ಲ ಅಕ್ಷರ 'ಟಿ' ಧ್ವನಿಯ ಉಚ್ಚಾರಣಾ ಗ್ರಹಿಕೆ ಇರುವುದರಿಂದ ಥಾ 'ಕಾರ ಮತ್ತು ತಾ' ಕಾರ ವ್ಯತ್ಯಾಸ ತಿಳಿಯದೇ ತಪ್ಪು ಬರೆಯುತ್ತಾರೆ.

ಅಕ್ಷರಗಳ ಸರಿಯಾದ ರಚನಾಕ್ರಮ ತಿಳಿಯದಿರುವುದು ಒಂದು ಕಾರಣವಾಗಿದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಥಾಟು | ತಾಟು |
| ಥೈಲಿ | ತೈಲಿ |
| ಥೇಟ್ | ತೆಟ್ |

ವಿದ್ಯಾರ್ಥಿಗಳು ಪದಾದಿ ಮತ್ತು ಪದ ಮಧ್ಯ ಪರಿಸರದಲ್ಲಿ ಭಾ, ಭೀ, ಭೂ, ಭೇ, ಭೋ ಧ್ವನಿಗಳ ಬದಲಾಗಿ ಬಾ, ಬಿ, ಬೂ, ಬೆ, ಬೊ ಎಂದು ಬರೆಯುತ್ತಾರೆ. ಈ

ರೀತಿಯ ವ್ಯತ್ಯಾಸವು ಎಲ್ಲ ತರಗತಿಗಳಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ಮಾಡುತ್ತಾರೆ. ಅಲ್ಪಪ್ರಾಣ 'ಬ' ಮಹಾಪ್ರಾಣ 'ಭ' ಧ್ವನಿ'ಗಳ ವ್ಯತ್ಯಾಸ ತಿಳಿಯದಿರುವುದು. ಇಂಗ್ಲಿಷ್ ವರ್ಣಾಕ್ಷರ 'ಬಿ' ಧ್ವನಿಯ ಉಚ್ಚಾರಣೆಯಲ್ಲಿ ವ್ಯತ್ಯಾಸಗಳಿಲ್ಲದಿರುವುದು ಒಂದು ಕಾರಣವಾಗಿದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಭೀಮ | ಬಿಮ |
| ಭೂಮಿ | ಬೂಮಿ |
| ಭೇದ | ಬೇದ |
| ಭೋಜನ | ಬೋಜನ |

ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಶಾ, ಶಿ, ಶೆ, ಶೋ ಧ್ವನಿಯ ಬದಲಾಗಿ ಗುಣಿತಾಕ್ಷರ ಸಾ, ಸಿ, ಸೆ, ಸೊ ಧ್ವನಿಗಳನ್ನು ಬರೆಯುತ್ತಾರೆ. ಈ ರೀತಿಯ ವ್ಯತ್ಯಾಸಗಳು ಎಲ್ಲ ತರಗತಿಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತವೆ. ಆಂಗ್ಲ ಪದಗಳ ಬಳಕೆಯ ಪ್ರಭಾವದಿಂದ ಈ ರೀತಿಯ ವ್ಯತ್ಯಾಸಗಳಾಗುವುದನ್ನು ಗಮನಿಸಬಹುದು.

| ಬರಹ ರೂಪ | ಬರವಣಿಗೆ ರೂಪ |
|---|---|
| ಶಾಕುಂತಲೆ | ಸಕುಂತಲೆ |
| ಶಾಂಭವಿ | ಸಾಂಬವಿ |
| ಶಿಕಾರಿಪುರ | ಸಿಕರಿಪುರ |
| ಶೀತ | ಸೀತ |

ವಿದ್ಯಾರ್ಥಿಗಳು ಇಂಗ್ಲಿಷ್ ಅಕ್ಷರ 'ಎಸ್' ಅನ್ನು ಉಚ್ಚರಿಸುವಾಗ ಯಾವುದೇ ಧ್ವನಿ ವ್ಯತ್ಯಾಸ ಇಲ್ಲದಿರುವುದು ಕನ್ನಡದಲ್ಲಿ ಧ್ವನಿ ವ್ಯತ್ಯಾಸಕ್ಕೆ ಕಾರಣವಾಗುತ್ತದೆ. ಪದಾದಿ ಪರಿಸರದಲ್ಲಿ ಗುಣಿತಾಕ್ಷರ ಷ , ಷಾ, ಷಿ ಧ್ವನಿಗಳ ಬದಲು ಗುಣಿತಾಕ್ಷರ ಸ, ಸಾ, ಸಿ ಧ್ವನಿಗಳನ್ನು ಉಚ್ಚಾರ ಮಾಡುತ್ತಾ ಓದುತ್ತಾರೆ. ಈ ರೀತಿಯ ವ್ಯತ್ಯಾಸ ಎಲ್ಲ ತರಗತಿಗಳಲ್ಲಿ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಷಟ್ಪದಿ | ಸಟ್ಪದಿ |
| ಷಾಮೀಯಾನ | ಸಾಮಿಯಾನ |
| ಷಿಕಾರಿ | ಸಿಕಾರಿ |

ವಿದ್ಯಾರ್ಥಿಗಳು ಗುಣಿತಾಕ್ಷರಗಳನ್ನು ಬರೆಯುವಾಗ ಮಾಡುತ್ತಿರುವ ದೋಷಗಳನ್ನು ಈ ಮೇಲಿನ ಉದಾಹರಣೆಗಳ ಮೂಲಕ ಗಮನಿಸಬಹುದಾಗಿದೆ. ಇದಕ್ಕೆ ಆಂಗ್ಲ ಮಾಧ್ಯಮವೇ ಪ್ರಮುಖ ಕಾರಣವಾಗಿದೆ. ಪ್ರಥಮ ಭಾಷೆಯಾಗಿ ಆಂಗ್ಲ ಭಾಷೆಯನ್ನು ಕಲಿಯುತ್ತಿರುವುದು ದ್ವಿತೀಯ ಭಾಷೆಯಾಗಿ ಕನ್ನಡ ಕಲಿಯುವ ವಿದ್ಯಾರ್ಥಿಗಳ ಮೇಲೆ ಪ್ರಭಾವ ಬೀರುತ್ತಿರುವುದನ್ನು ಗಮನಿಸಬಹುದಾಗಿದೆ. ಕನ್ನಡ ಬೋಧಕರು ಸೂಕ್ಷ್ಮವಾಗಿ ಉಚ್ಚಾರಣಾ ಕ್ರಮಗಳನ್ನು ಬೋಧಿಸದಿರುವುದು ಇದಕ್ಕೆ ಕಾರಣವಾಗಿದೆ. ಪೋಷಕರ ಪಾತ್ರ ಕಡಿಮೆಯಿರುವುದು. ಕನ್ನಡ ಕಲಿಕೆಯ ಬಗ್ಗೆ ವಿದ್ಯಾರ್ಥಿಗಳಲ್ಲಿರುವ ನಿರಾಸಕ್ತಿಯೂ ಒಂದು ಕಾರಣವಾಗಿದೆ. ತರಗತಿಯಲ್ಲಿ ಆಲಿಸುವ ಕೌಶಲದಲ್ಲಿ ಅಡ್ಡಿ ಉಂಟಾಗುವುದು ಒಂದು ಮಿತಿಯಾಗಿದೆ. ಉಚ್ಚಾರಣಾ ಸಂದರ್ಭದಲ್ಲಿ ಗಮನವಿಟ್ಟು ಆಲಿಸದೇ ಇರುವುದು ದೋಷಗಳಾಗಲು ಕಾರಣವಾಗಿದೆ. ಪ್ರಥಮ ಭಾಷೆಗೆ ಕೊಟ್ಟಷ್ಟು ಪ್ರಾಧ್ಯಾನ್ಯತೆ ದ್ವಿತೀಯ ಭಾಷೆ ಕನ್ನಡಕ್ಕೆ ನೀಡದಿರುವುದು ಇಲ್ಲಿ ಗಮನಿಸಬಹುದು.

**೫.೨.೪ ಒತ್ತಕ್ಷರಗಳನ್ನು ಬರೆಯುವಾಗ ಕಂಡು ಬಂದ ಸಮಸ್ಯೆಗಳು**

- **ಸಜಾತಿ ಒತ್ತಕ್ಷರಗಳನ್ನು ಬರೆಯುವಾಗ ಉಂಟಾಗುವ ಸಮಸ್ಯೆಗಳು**

ಪದ ಮಧ್ಯ ಪರಿಸರದಲ್ಲಿ ಬರುವ ಸಜಾತಿಯ ಒತ್ತಕ್ಷರಗಳನ್ನು ಲೋಪ ಮಾಡಿ ಬರೆಯುತ್ತಾರೆ. ಈ ರೀತಿಯಾದ ವ್ಯತ್ಯಾಸವು ಎಲ್ಲ ತರಗತಿಗಳಲ್ಲಿ ಕಂಡು ಬರುತ್ತದೆ.

- **ಕ್ಕ>ಕ**

ಒತ್ತಕ್ಷರಗಳ ಉಚ್ಚಾರಣಾ ಗ್ರಹಿಕೆ ಇಲ್ಲದಿರುವುದು ಕಾರಣ. ಪದ ಮಧ್ಯ ಪರಿಸರದಲ್ಲಿ ಕ್ಕ ಒತ್ತಾಕ್ಷರಗಳ ಬದಲು ಕ ಕಂಠ್ಯ ವ್ಯಂಜನ ಶಬ್ದಗಳನ್ನು ಬರೆಯುತ್ತಾರೆ. ಈ ವ್ಯತ್ಯಾಸ ಬಹುತೇಕ ವಿದ್ಯಾರ್ಥಿಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ರೊಕ್ಕ | ರೊಕ |
| ಅಕ್ಕ | ಅಕ |
| ತಿಕ್ಕ | ತಿಕ |
| ಅಕ್ಕಿ ಕಾಳು | ಅಕಿಕಾಳು |
| ಹೊಕ್ಕರೆ | ಹೊಕರೆ |
| ಪೊಕ್ಕು | ಪೊಕ |

• ಗ್ಗ>ಗ

ಇಂಗ್ಲಿಷಿನ 'ಜಿ' ಧ್ವನಿಯ ಉಚ್ಚಾರಣೆಯಲ್ಲಿ ಒತ್ತಿ ಉಚ್ಚಾರಣೆ ಮಡುವ ಸಂದರ್ಭಗಳಿಲ್ಲ. ಆಂಗ್ಲ ಮಾಧ್ಯಮದ ಪ್ರಭಾವ ಒಂದು ಕಾರಣವಾಗಿದೆ. ಪದ ಮಧ್ಯ ಪರಿಸರದಲ್ಲಿ 'ಗ್ಗ' ಒತ್ತಕ್ಷರಗಳನ್ನು ಧ್ವನಿ ಬದಲು 'ಗ' ಕಂಠ್ಯ ವ್ಯಂಜನ ಶಬ್ದಗಳನ್ನು ಬರೆಯುತ್ತಾರೆ. ಈ ವ್ಯತ್ಯಾಸವನ್ನು ಮಕ್ಕಳು ಹೆಚ್ಚಾಗಿ ಬಳಸುತ್ತಾರೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ತಗ್ಗು | ತಗು |
| ಬಗ್ಗು | ಬಗು |
| ಉಗ್ಗು | ಉಗು |
| ಬಗ್ಗೆ | ಬಗೆ |

• ಚ್ಚ > ಚ

ಪದಮಧ್ಯ ಪರಿಸರದಲ್ಲಿ 'ಚ್ಚ' ದ್ವಿತ್ವ ಧ್ವನಿ ಬದಲು 'ಚ' ವ್ಯಂಜನ ಧ್ವನಿಯನ್ನು ಉಚ್ಚಾರ ಮಾಡುತ್ತಾರೆ.

**ವಿದ್ಯಾರ್ಥಿಗಳಿಗೆ 'ಚ್ಚ>ಚ ಕಾರಗಳ ವ್ಯತ್ಯಾಸ ತಿಳಿಯದೇ ಇರುವುದು.**

| ಬರಹ ರೂಪ | ಬರವಣಿಗೆ ರೂಪ |
|---|---|
| ನಿಚ್ಚಣಿಗೆ | ನಿಚಣಿಗೆ |
| ಹೆಚ್ಚು | ಹೆಚು |
| ಬಚ್ಚಲ | ಬಚಲ |
| ಅಚ್ಚರಿ | ಅಚರಿ |

• ಜ್ಜ>ಜ

ಆಂಗ್ಲ ವರ್ಣಮಾಲೆಯಲ್ಲಿ ಜೆ, ಝಡ್, ಸ್ವರಗಳ ಉಚಾರಣೆ ಧ್ವನಿ ಒಂದೇ ಆಗಿರುವುದು. ಉದಾಹರಣೆ: ಜಾಯ್, ಜೀಬ್ರಾ, ಜೆಗ್, ಜಿಮ್ ಇತ್ಯಾದಿ. ಪದಗಳ ಉಚ್ಚಾರಣೆ ಪ್ರಭಾವ ಜ್ಜ>ಜ ಧ್ವನಿಯ ಉಚ್ಚಾರಣೆಯಲ್ಲಿ ಸಮಸ್ಯೆಯಾಗುವುದನ್ನು ಗಮನಿಸಬಹುದು.

ತರಗತಿಯಲ್ಲಿ ಆಂಗ್ಲ ಭಾಷೆಯನ್ನು ಹೆಚ್ಚು ಬಳಸುವುದು. ಪದ ಮಧ್ಯ ಪರಿಸರದಲ್ಲಿ 'ಜ್ಜ' ದ್ವಿತ್ವ ಧ್ವನಿ ಬದಲು 'ಜ' ತಾಲವ್ಯ ವ್ಯಂಜನ ಶಬ್ದವನ್ನು ಬರೆಯುತ್ತಾರೆ. ಈ

ವ್ಯತ್ಯಾಸ ಎಲ್ಲ ವಿದ್ಯಾರ್ಥಿಗಳಲ್ಲಿ ಕಂಡು ಬರುತ್ತದೆ. ಕನ್ನಡ ಮಾತನಾಡಲು ಅವಕಾಶಗಳಿಲ್ಲದಿರುವುದು ಒಂದು ಕಾರಣವಾಗಿದೆ.

| **ಬರಹ ರೂಪ** | **ಬರವಣಿಗೆ ರೂಪ** |
|---|---|
| ಗಜ್ಜರಿ | ಗಜರಿ |
| ಬಜ್ಜಿ | ಬಜಿ |
| ಉಜ್ಜಿ | ಉಜಿ |
| ಕಜ್ಜಿ | ಕಜಿ |

- **ಟ್ಟ> ಟ**

ವಿದ್ಯಾರ್ಥಿಗಳು 'ಟ' ಕಾರದ ಧ್ವನಿಯ ವ್ಯತ್ಯಾಸಗಳನ್ನು ಗಮನಿಸದಿರುವುದು ಕಾರಣವಾಗಿದೆ. ಪದ ಮಧ್ಯ ಪರಿಸರದಲ್ಲಿ 'ಟ್ಟ' ದ್ವಿತ್ವ ಧ್ವನಿ ಬದಲು 'ಟ' ಮೂರ್ಧನ್ಯ ವ್ಯಂಜನ ಶಬ್ದವನ್ನು ಬರೆಯುತ್ತಾರೆ.

| **ಬರಹ ರೂಪ** | **ಬರವಣಿಗೆ ರೂಪ** |
|---|---|
| ದಟ್ಟಡವಿ | ದಟಡವಿ |
| ತಟ್ಟನೆ | ತಟನೆ |
| ಪಟ್ಟನೆ | ಪಟ್ನೆ |
| ದುಪ್ಪಟ್ಟು | ದುಪ್ಪಟ |

- **ಡ್ಡ>ಡ**

ವಿದ್ಯಾರ್ಥಿಗಳಿಗೆ ವ್ಯಂಜನಗಳ ಸ್ಪಷ್ಟ ಗ್ರಹಿಕೆಯಿಲ್ಲದಿರುವುದು. ಪದಮಧ್ಯ ಪರಿಸರದಲ್ಲಿ ಡ್ಡ ದ್ವಿತ್ವ ಧ್ವನಿ ಬದಲು ಡ ಮೂರ್ಧನ್ಯ ವ್ಯಂಜನ ಶಬ್ದವನ್ನು ಬರೆಯುತ್ತಾರೆ. ಈ ರೀತಿ ವ್ಯತ್ಯಾಸವನ್ನು ಎಲ್ಲಾ ತರಗತಿಯ ಕೆಲವು ಮಕ್ಕಳು ಮಾಡುತ್ತಾರೆ.

| **ಬರಹ ರೂಪ** | **ಬರವಣಿಗೆ ರೂಪ** |
|---|---|
| ಕಡ್ಡಿ | ಕಡಿ |
| ಬುಡ್ಡಿ | ಬುಡಿ |
| ಕಟ್ಟು | ಕಡಿ |
| ಗಿಡ್ಡ | ಗಿಡ |
| ದುಡ್ಡು | ದುಡು |

- ಣ್ಣ> ನ್ನ

ಪದಮಧ್ಯ ಪರಿಸರದಲ್ಲಿ 'ಣ್ಣ' ದ್ವಿತ್ವ ಧ್ವನಿ ಬದಲು 'ನ್ನ' ದಂತ್ಯ ಅನುನಾಸಿಕ ವ್ಯಂಜನ ಶಬ್ದಗಳನ್ನು ಮಕ್ಕಳು ಬರೆಯುತ್ತಾರೆ. ಈ ರೀತಿಯಾದ ವ್ಯತ್ಯಾಸವನ್ನು ಎಲ್ಲ ವಿದ್ಯಾರ್ಥಿಗಳು ಅದರಲ್ಲೂ ತೆಲುಗು ಭಾಷೆಯನ್ನು ಮಾತೃಭಾಷೆಯಾಗಿ ಮಾತನಾಡುವ ವಿದ್ಯಾರ್ಥಿಗಳ ಬರವಣಿಗೆಯಲ್ಲಿ ಗಮನಿಸಬಹುದು.

| ಬರಹ ರೂಪ | ಬರವಣಿಗೆ ರೂಪ |
|---|---|
| ಅಣ್ಣ | ಅನ್ನ |
| ಬಣ್ಣ | ಬನ್ನ |
| ನಾಣ್ನುಡಿ | ನಾನ್ನುಡಿ |
| ತಣ್ಣೀರು | ತನ್ನಿರು |
| ಹಣ್ಣು | ಅನ್ನು |

- ತ್ತ>ತ

ಪದಮಧ್ಯ ಪರಿಸರದಲ್ಲಿ 'ತ್ತ' ದ್ವಿತ್ವ ಧ್ವನಿ ಬದಲು 'ತ' ದಂತ್ಯ ವ್ಯಂಜನ ಶಬ್ದವನ್ನು ಬರೆಯುತ್ತಾರೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಭತ್ತ | ಬತ |
| ಗುತ್ತಿಗೆ | ಗುತ್ಗಿ |
| ಸುತ್ತಿಗೆ | ಸುತಿಗೆ |
| ಕತ್ತರಿ | ಕತ್ರಿ |

- ದ್ದ>ದ

ಪದಮಧ್ಯ ಪರಿಸರದಲ್ಲಿ 'ದ್ದ' ದ್ವಿತ್ವ ಶಬ್ದದ ಬದಲು 'ದ' ದಂತ್ಯ ವ್ಯಂಜನ ಶಬ್ದವನ್ನು ಬರೆಯುತ್ತಾರೆ. ಇದಕ್ಕೆ ಕಾರಣ ಸ್ಪಷ್ಟವಾದ ಉಚ್ಚಾರಣಾ ಧ್ವನಿಗಳ ಜ್ಞಾನ ಇಲ್ಲದಿರುವುದು.

| ಬರಹ ರೂಪ | ಬರವಣಿಗೆ ರೂಪ |
|---|---|
| ಗೆದ್ದಲು | ಗೆದಲು |
| ಇದ್ದಲಿ | ಇದಿಲಿ |

| | |
|---|---|
| ಗುದ್ದಲಿ | ಗುದಲಿ |
| ಇದ್ದರೆ | ಇದರೆ |

- ನ್ನ>ನ

ಆಂಗ್ಲ ಭಾಷೆಯಲ್ಲಿ ವರ್ಣಮಾಲೆಯಲ್ಲಿ ಒತ್ತಕ್ಷರಗಳಿಲ್ಲದಿರುವುದೇ ದೋಷಗಳಾಗಲು ಕಾರಣವಾಗಿದೆ. ಪದಮಧ್ಯ ಪರಿಸರದಲ್ಲಿ 'ನ್ನ' ದ್ವಿತ್ವ ಧ್ವನಿ ಬದಲು ನ ದಂತ್ಯ ಅನುನಾಸಿಕ ಶಬ್ದವನ್ನು ಬರೆಯುತ್ತಾರೆ. ಈ ವ್ಯತ್ಯಾಸ ಕೆಲ ವಿದ್ಯಾರ್ಥಿಗಳಲ್ಲಿ ಮಾತ್ರ ಕಂಡು ಬರುತ್ತದೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಅನ್ನಪೂರ್ಣ | ಅನಪೂರ್ಣ |
| ಚಿನ್ನ | ಚಿನ |
| ಚೆನ್ನಾಗಿ ಇದೆ | ಚೆನಾಗಿದೆ |
| ತನ್ನಂತೆ | ತನತೆ |

- ಪ್ಪ> ಪ

ಪದ ಮಧ್ಯ ಪರಿಸರದಲ್ಲಿ 'ಪ್ಪ' ಬದಲು 'ಪ' ವನ್ನು ಉಭಯೋಷ್ಠ್ಯ ವ್ಯಂಜನ ಬರೆಯುತ್ತಾರೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ಗುಪ್ಪು | ಗುಪು |
| ಅಪ್ಪಟ | ಅಪಟ |
| ಕಪ್ಪು | ಕಪು |
| ಉಪ್ಪು | ಉಪು |
| ಚಪ್ಪಲಿ | ಚಪಲಿ |

- ಬ್ಬ> ಬ

ಪದಮಧ್ಯ ಪರಿಸರದಲ್ಲಿ ಬ್ಬ ದ್ವಿತ್ವ ಧ್ವನಿ ಬದಲು 'ಬ' ಉಭಯೋಷ್ಠ್ಯ ವ್ಯಂಜನವನ್ನು ಬರೆಯುತ್ತಾರೆ. ಈ ವ್ಯತ್ಯಾಸವನ್ನು ಕೆಲವು ವಿದ್ಯಾರ್ಥಿಗಳಲ್ಲಿ ಕಾಣಬಹುದು.

| ಬರಹ ರೂಪ | ಬರವಣಿಗೆ ರೂಪ |
|---|---|
| ಬೊಬ್ಬೆ | ಬೊಬೆ |
| ಗೊಬ್ಬರ | ಗೊಬ್ರ |

| | |
|---|---|
| ಕಬ್ಬು | ಕಬು |
| ದಿಬ್ಬ | ದಿಬ |
| ಮಬ್ಬು | ಮಬು |

- ವ್ವ> ವ

ಪದಮಧ್ಯ ಪರಿಸರದಲ್ಲಿ 'ವ್ವ' ದ್ವಿತ್ವ ಧ್ವನಿ ಬದಲು 'ವ' ವ್ಯಂಜನ ಶಬ್ದವನ್ನು ಬರೆಯುತ್ತಾರೆ. ಈ ಧ್ವನಿ ವ್ಯತ್ಯಾಸವನ್ನು ಕೆಲವು ಮಕ್ಕಳು ಮಾತ್ರ ಬರೆಯುತ್ತಾರೆ. . ಬಹುತೇಕ ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳಲ್ಲಿ ಕಂಡು ಬರುತ್ತದೆ.

- ಲ್ಲ>ಲ

ಪದಮಧ್ಯ ಪರಿಸರದಲ್ಲಿ 'ಲ್ಲ' ಒತ್ತಾಕ್ಷರಗಳ ಬದಲು 'ಲ' ವ್ಯಂಜನವನ್ನು ಬರೆಯುತ್ತಾರೆ. ಒತ್ತಕ್ಷರಗಳನ್ನು ಲೋಪ ಮಾಡಿ ಬರೆಯುವುದು ಸಾಮಾನ್ಯವಾಗಿ ಕಾಣಬಹುದು.

| ಬರಹ ರೂಪ | ಬರವಣಿಗೆ ರೂಪ |
|---|---|
| ಕಲ್ಲು | ಕಲು |
| ಹಲ್ಲು | ಹಲು |
| ಇಲ್ಲ | ಇಲ |
| ನಲ್ಲಿ | ನಲಿ |
| ಪಲ್ಲವಿ | ಪಲವಿ |

- **ವಿಜಾತಿ ಒತ್ತಕ್ಷರಗಳ ಬಳಕೆ**

ವಿಜಾತಿ ಒತ್ತಕ್ಷರಗಳನ್ನು ಪದಾಂತ್ಯದಲ್ಲಿ ಬರೆಯುವಾಗ ಒತ್ತಕ್ಷರಗಳನ್ನು ಲೋಪ ಮಾಡಿ ಬರೆಯುವುದು. ಅಂದರೆ ಆಡುಮಾತಿನಂತೆ ಬರೆಯುವುದನ್ನು ಗಮನಿಸಬಹುದು

| ಬರಹ ರೂಪ | ಬರವಣಿಗೆ ರೂಪ |
|---|---|
| ಜನ್ಮ | ಜನುಮ |
| ಪತ್ರ | ಪತರ |
| ಮಿತ್ರ | ಮಿತುರ |
| ಆತ್ಮ | ಆತುಮ |
| ಭಕ್ತ | ಬಕುತ |

• ಮಹಾಪ್ರಾಣ ಒತ್ತಕ್ಷರದ ಬದಲು ಅಲ್ಪಪ್ರಾಣ ಒತ್ತಕ್ಷರದ ಬಳಕೆ ಮಾಡುವ ವಿಜಾತಿ ಒತ್ತಕ್ಷರಗಳು

ಪದಾದಿ ಹಾಗೂ ಪದಮಧ್ಯ ಪರಿಸರದಲ್ಲಿ ಬರುವ ವಿಜಾತಿ **ಮಹಾಪ್ರಾಣ ಒತ್ತಕ್ಷರದ ಬದಲಿಗೆ ಅಲ್ಪಪ್ರಾಣ ಒತ್ತಕ್ಷರದ** ಬಳಕೆ ಮಾಡಿ ಬರೆಯುತ್ತಾರೆ.

| ಬರಹ ರೂಪ | ಬರವಣಿಗೆ ರೂಪ |
|---|---|
| ದೃಷ್ಟಿ | ದ್ರುಷ್ಪಿ |
| ಕಷ್ಟ | ಕಸ್ಪ |
| ಸ್ಥಳ | ಸ್ತಲ |

**ವಿಶ್ಲೇಷಣೆ**

ಆಂಗ್ಲ ಮಾಧ್ಯಮದ ಶಾಲೆಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡುತ್ತಿರುವಂತಹ ವಿದ್ಯಾರ್ಥಿಗಳು ಬರವಣಿಗೆಯಲ್ಲಿ ಮಾಡುವ ಪ್ರಮುಖ ವ್ಯತ್ಯಾಸಗಳನ್ನು ಈ ಮೇಲೆ ನೀಡಿರುವ ಉದಾಹರಣೆಗಳ ಮೂಲಕ ಗಮನಿಸಬಹುದಾಗಿದೆ.

ಒತ್ತಕ್ಷರಗಳ ಬಗ್ಗೆ ವಿದ್ಯಾರ್ಥಿಗಳಿಗೆ ಮನವರಿಕೆಯಾಗದಿರುವುದು ಕಂಡು ಬಂದಿದೆ. ಮೂಲ ಅಕ್ಷರ ಹಾಗೂ ಒತ್ತಕ್ಷರಗಳ ಬಗ್ಗೆ ಸರಿಯಾದ ರೀತಿಯಲ್ಲಿ ಗ್ರಹಿಸದೇ ಇರುವುದು ಕಾರಣವಾಗಿದೆ. ಬೋಧಕರು ಮಕ್ಕಳಿಗೆ ಒತ್ತಕ್ಷರಗಳನ್ನು ಕಲಿಸದಿರುವುದೇ ಈ ರೀತಿಯ ವ್ಯತ್ಯಾಸಕ್ಕೆ ಕಾರಣವಾಗಿರಬಹುದು. ಜೊತೆಗೆ ಶಾಲೆ ಮತ್ತು ಮನೆಯಲ್ಲಿ ಮಕ್ಕಳ ಮನೆಪಾಠವನ್ನು ಸರಿಯಾಗಿ ಪರಿಶೀಲಿಸದೆ ಇರುವುದರಿಂದಲೂ ಇಂತಹ ವ್ಯತ್ಯಾಸಗಳಿಗೆ ಕಾರಣವಾಗಬಹುದು. ತರಗತಿಯಲ್ಲಿ ಉಕ್ತ ಲೇಖನ ಬರೆಸದೇ ಇರುವುದು. ಬರವಣಿಗೆಯಲ್ಲಿ ಸಮಸ್ಯೆ ಉಂಟಾಗಲು ಒಂದು ಕಾರಣವಾಗಿದೆ. ಪ್ರತಿ ನಿತ್ಯ ಕಾಪಿ (ನಕಲು ಬರಹ) ಬರೆಸುವುದು. ಬರವಣಿಗೆಯ ದೋಷಗಳನ್ನು ಕಡಿಮೆ ಮಾಡುವ ಒಂದು ಉಪಾಯ. ಆದರೆ ವಿದ್ಯಾರ್ಥಿಗಳು ಆಸಕ್ತಿಯಿಂದ ಕಾಪಿ ಬರಹ ಬರೆಯದಿರುವುದು ಬರವಣಿಗೆಯ ದೋಷಗಳಿಗೆ ಕಾರಣವಾಗಿದೆ. ನೋಡಿ ಬರೆಯುವ ವಿಧಾನವನ್ನು ಅಳವಡಿಸಿಕೊಂಡರೆ ದೋಷಗಳು ಕಡಿಮೆಯಾಗುತ್ತವೆ.

ಇಂಗ್ಲಿಷ್ ಭಾಷೆಯಲ್ಲಿ ಬರೆದಂತೆ ಕೂಡಿಸಿ ಬರೆಯದೇ ಕನ್ನಡವನ್ನು ಬಿಡಿ ಬಿಡಿಯಾಗಿ ಬರೆಯಬೇಕು ಎಂಬುದನ್ನು ಬೋಧಕರು ರೂಢಿ ಮಾಡಿಸಬೇಕು. ನಿರಂತರ ಅಭ್ಯಾಸ ಮತ್ತು ತರಬೇತಿಯಿಂದ ಅಕ್ಷರ ದೋಷಗಳನ್ನು ತಡೆಗಟ್ಟಬಹುದು. ಮಾದರಿ ಬರಹಗಳನ್ನು ಪರಿಚಯ ಮಾಡಿ ನೋಡಿ ಬರೆಸುವ ವಿಧಾನವನ್ನು ವಿದ್ಯಾರ್ಥಿಗಳಿಗೆ ರೂಢಿ ಮಾಡಿಸಬೇಕು.

## ೫.೩ ವಾಕ್ಯ ರಚನಾ ಸಮಸ್ಯೆಗಳು

### ವಾಕ್ಯಗಳ ಅರ್ಥ ಮತ್ತು ಸ್ವರೂಪ :

ಅರ್ಥಪೂರ್ಣವಾದ ಶಬ್ದಗಳಿಂದ ಕೂಡಿರುವುದೇ ವಾಕ್ಯ. ಒಂದು ಭಾಷೆಯ ವ್ಯವಹಾರದಲ್ಲಿ ಪದಗಳು ಮತ್ತು ವಾಕ್ಯಗಳು ಬಹಳ ಮುಖ್ಯವಾದ ಪಾತ್ರ ವಹಿಸುತ್ತವೆ. ಪದಗಳು ಅವುಗಳ ಒಳರಚನೆ ಮುಂತಾದವುಗಳನ್ನು ವಿವೇಚಿಸುವುದು ಪದ ಜ್ಞಾನವಾದರೆ, ವಾಕ್ಯಗಳು ಅವುಗಳ ಒಳರಚನೆಯನ್ನು ವಿವೇಚಿಸುವುದು ವಾಕ್ಯ ವಿಜ್ಞಾನವಾಗಿದೆ. ಪದ ಮತ್ತು ವಾಕ್ಯಗಳ ಅಧ್ಯಯನ ವ್ಯಾಕರಣವೆನಿಸುತ್ತದೆ. ಪದ ಮತ್ತು ವಾಕ್ಯಗಳ ಸಂಬಂಧ ಮತ್ತು ವ್ಯತ್ಯಾಸವನ್ನು ತಿಳಿದುಕೊಳ್ಳಬೇಕಾಗಿದೆ.

ವಾಕ್ಯವು ಭಾಷೆಯ ಅತ್ಯಂತ ದೊಡ್ಡ ಘಟಕವಾಗಿದೆ. ಒಂದು ವಾಕ್ಯದಲ್ಲಿ ಧ್ವನಿ ಪ್ರಕೃತಿ, ಪದ, ಸಮಾಸ ಪದಗಳು ಇರುತ್ತವೆ. ಇವೆಲ್ಲವೂ ಸೇರಿ ವಾಕ್ಯವಾಗುತ್ತದೆ. ವಾಕ್ಯ ಭಾಷೆಯಲ್ಲಿ ಪೂರ್ಣ ಅರ್ಥ ಕೊಡುವಂತಹ ದೊಡ್ಡರಚನೆ. ಪದ, ಪದಪುಂಜ, ಉಪ ವಾಕ್ಯಗಳು ಚಿಕ್ಕ ರಚನೆಗಳಾಗಿ ಕಾಣಿಸಿಕೊಳ್ಳುತ್ತವೆ. ಭಾಷೆಯಲ್ಲಿ ವಾಕ್ಯಗಳಿಗೆ ಪದಗಳೇ ಮೂಲ ಆಧಾರ. ಈ ಪದಗಳ ಜೋಡಣೆಯಿಂದ ಬೇರೆ ಬೇರೆ ವಾಕ್ಯಗಳು ಸಿದ್ಧಿಸುತ್ತವೆ. ಆಗ ಪ್ರತಿಯೊಂದು ಪದವು ವಾಕ್ಯದ ಭಾಗವಾಗಿ ಕಾಣಿಸಿಕೊಳ್ಳುತ್ತದೆ.[೮]

ವಾಕ್ಯಗಳು ಎಲ್ಲಾ ಭಾಷೆಗಳಲ್ಲಿಯೂ ಒಂದೇ ರೀತಿಯಲ್ಲಿರುವುದಿಲ್ಲ. ಇವು ಭಾಷೆಯಿಂದ ಭಾಷೆಗೆ ಬೇರೆ ಬೇರೆಯಾಗಿರುತ್ತವೆ. ಆಯಾ ಪರಿಸರಕ್ಕೆ ತಕ್ಕಂತೆ ಅರ್ಥವನ್ನು ಪಡೆಯುತ್ತವೆ. ವಾಕ್ಯವು ಪೂರ್ಣ ಅರ್ಥವನ್ನು ವ್ಯಕ್ತಗೊಳಿಸಬಲ್ಲ ಶಬ್ದಗಳ ಸಮೂಹ ಎಂದು ವ್ಯಾಕರಣಕಾರರು ವಿವರಿಸಿದ್ದಾರೆ. ವಾಕ್ಯ ಎಂಬುದು ಸಾರ್ಥಕ ಶಬ್ದಗಳ ಒಂದು ಸಮೂಹವೆಂದು ವಿವರಿಸಿರುವುದುಂಟು. ಕೆಲವೊಮ್ಮೆ ವಾಕ್ಯ ಶಬ್ದಗಳ ಸಮೂಹವಾಗಬಹುದು ಅಥವಾ ಅದೊಂದು ಶಬ್ದವೇ ಆಗಬಹುದು. ಇದಕ್ಕೆ ಕನ್ನಡದಲ್ಲಿ ಬಾ, ಹೋಗು, ಬರೆ, ಓದು, ತಿನ್ನು, ಕೇಳುವೆನೂ ಇತ್ಯಾದಿಗಳನ್ನು ಉದಾಹರಿಸಬಹುದು. ಕನ್ನಡದಲ್ಲಿ ಶಬ್ದ ರೂಪದ ಬೇರೆ ಬೇರೆ ವಾಕ್ಯಗಳು ಇದನ್ನು ವಿದ್ಯಾರ್ಥಿಗಳ ಭಾಷೆಯಲ್ಲಿ ಸ್ಪಷ್ಟವಾಗಿ ಗುರುತಿಸುವುದು. ಮಗು ಹಸಿದಾಗ ಬಿಸ್ಕೆಟ್, ಹಣ್ಣು ಎನ್ನುತ್ತದೆ. ಆ ಮಗುವಿನ, ದೃಷ್ಟಿಯಲ್ಲಿ ಇದೊಂದು ಶಬ್ದವಲ್ಲ, ವಾಕ್ಯವಾಗುತ್ತದೆ. ಅದು ಇದರ ಮೂಲಕ ಪೂರ್ಣವಾದ ಅರ್ಥವನ್ನು ವ್ಯಕ್ತಗೊಳಿಸುತ್ತದೆ. ಆಡು ಮಾತಿನಲ್ಲಿಯೂ ನಾವು ಇಂತಹ ವಾಕ್ಯ ರಚನೆಗಳನ್ನು ಗಮನಿಸಬಹುದು. ವೆಂಕಟೇಶನು ಗೋಪಾಲನನ್ನು ನೀನು ಯಾವಾಗ ಊರಿಗೆ ಹೋಗುತ್ತಿಯೇ? ಎಂದು ಪ್ರಶ್ನಿಸಿದರೆ ವೆಂಕಟೇಶನು ನಾಳೆ ಎಂದು ಉತ್ತರಿಸುತ್ತಾನೆ

ಎಂದಿಟ್ಟುಕೊಂಡರೆ ಈ ಶಬ್ದ ವೆಂಕಟೇಶನ ದೃಷ್ಟಿಯಲ್ಲಿ ಶಬ್ದವಲ್ಲ. ಅದೊಂದು ವಾಕ್ಯ. ಇದು ಪೂರ್ಣ ಅರ್ಥ ಕೊಡುವ ವಾಕ್ಯ. ಹೀಗೆ ಆಡುಮಾತಿನಲ್ಲಿ ಶಬ್ದದ ರೂಪದ ವಾಕ್ಯಗಳನ್ನು ಬಳಸುವುದನ್ನು ಗಮನಿಸಬಹುದು.[೯]

ವಾಕ್ಯ ಯಾವಾಗಲೂ ರಚನೆಯ ರೂಪದಲ್ಲಿರುತ್ತದೆಯೇ ವಿನಾ ಘಟಕದ ರೂಪದಲ್ಲಿ ಅಲ್ಲ. ಭಾಷೆಯಲ್ಲಿ ಒಂದು ಪರಿಪೂರ್ಣ ಹಾಗೂ ಹಿರಿಯ ಘಟಕ ವಾಕ್ಯವೇ ಆಗಿರುವುದರಿಂದ ಅದು ಯಾವಾಗಲೂ ರಚನೆಯ ರೂಪದಲ್ಲಿಯೇ ಕಾಣಿಸುತ್ತದೆ. ವಾಕ್ಯಗಳಲ್ಲಿ ಶಬ್ದಗಳು ಸಾರ್ಥಕವಾಗಿರಬೇಕಾದದ್ದು ಅತ್ಯಗತ್ಯ. ಅವು ಪರಸ್ಪರ ಒಂದಕ್ಕೊಂದು ಕೂಡಿಕೊಂಡು ಸಂದರ್ಭಕ್ಕೆ ತಕ್ಕಂತೆ ಪೂರ್ಣ ಅರ್ಥವ್ಯಕ್ತಗೊಳಿಸಬಲ್ಲ ಸಾಮರ್ಥ್ಯ ಮತ್ತು ಯೋಗ್ಯತೆಯನ್ನು ಪಡೆದಿರಬೇಕು. ಮಾತನಾಡುವವನ ಅಥವಾ ಬಳಸುವವನ ಆಕಾಂಕ್ಷೆ ಅಥವಾ ಇಚ್ಛೆಯನ್ನು ಪೂರೈಸುವ ಶಕ್ತಿ ವಾಕ್ಯಗಳಿರಬೇಕಾದದ್ದು ಅಗತ್ಯ. ವ್ಯಾಕರಣದ ದೃಷ್ಟಿಯಿಂದ ವಾಕ್ಯಗಳಲ್ಲಿ ಶಬ್ದಗಳು ಲಿಂಗ, ವಚನ, ವಿಭಕ್ತಿ ಇತ್ಯಾದಿಗಳಿಗೆ ಅನುಗುಣವಾಗಿ ಸಮಾನವಾಗಿರಬೇಕಾದದ್ದು ಅತ್ಯಗತ್ಯ. ಕನ್ನಡ ಭಾಷೆಯಲ್ಲಿ ಸರ್ವನಾಮಗಳು, ಲಿಂಗ, ವಚನ, ಪುರುಷಗಳಿಗೆ ಅನುಸಾರವಾಗಿದ್ದರೆ, ಆಂಗ್ಲ ಭಾಷೆಯಲ್ಲಿ ಪುರುಷ, ವಚನ, ಕ್ರಿಯೆ ಇವು ಕರ್ತೃವಿಗೆ ಅನುಗುಣವಾಗಿರುತ್ತವೆಯೇ ವಿನಾ ಲಿಂಗಕ್ಕೆ ಅನುಸಾರವಾಗಿ ಅಲ್ಲ. ಆದ್ದರಿಂದ ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯುತ್ತಿರುವ ವಿದ್ಯಾರ್ಥಿಗಳು ವಾಕ್ಯರಚನಾ ನಿಯಮಗಳನ್ನು ತಿಳಿಯದೇ ವ್ಯಾಕರಣ ದೋಷಗಳನ್ನು ಮಾಡುತ್ತಿರುವುದನ್ನು ಗಮನಿಸಲಾಗಿದೆ.

ವಾಕ್ಯಗಳಲ್ಲಿ ಶಬ್ದಗಳು ಬರುವ ಕ್ರಮ ಬಹಳ ಮುಖ್ಯ. ಕೆಲವು ವೇಳೆ ಭಾಷೆಗಳಲ್ಲಿ ಶಬ್ದಗಳು ವಾಕ್ಯಗಳಲ್ಲಿ ವಿಶೇಷ ಕ್ರಮವನ್ನು ಅನುಸರಿಸಿ ಬರುತ್ತವೆ. ಉದಾಹರಣೆಗೆ ರಾಮನು ಮಾವಿನ ಹಣ್ಣನ್ನು ತಿನ್ನುತ್ತಾನೆ ಎಂಬ ವಾಕ್ಯವನ್ನು ಈ ಕ್ರಮ ಇಂಗ್ಲಿಷಿನಲ್ಲಿ ರಾಮಾ ಈಟ್ಸ್ ಮ್ಯಾಂಗೊ ಎಂದು ಬದಲಾಗುತ್ತದೆ. ಹೀಗೆ ವಾಕ್ಯಗಳಲ್ಲಿ ಕರ್ತೃ, ಕರ್ಮ, ಕ್ರಿಯೆ ಎಂಬುದು ಒಂದು ಕ್ರಮವನ್ನು ಅನುಸರಿಸಬೇಕಾದದ್ದು ಅತ್ಯಾವಶ್ಯಕ.[೧೦]

**ವಾಕ್ಯರಚನಾ ನಿಯಮ**

ಕನ್ನಡ ಭಾಷೆಯಲ್ಲಿ ಶಬ್ದಗಳು ಪರಸ್ಪರ ಒಂದಕ್ಕೊಂದು ಕೂಡಿಕೊಂಡು ವಾಕ್ಯ ರಚನೆಯಾಗುವುದು ಸರ್ವೇಸಾಮಾನ್ಯ. ಈ ಬಗೆಯ ವಾಕ್ಯರಚನೆಯನ್ನೇ ಸಿನಾಕ್ಟಿಕ್ ಕನೆಸ್ಟ್ರಕ್ಷನ್ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಕರ್ತೃ ರಹಿತ ಪದ ಅಥವಾ ವಾಕ್ಯ ಇರುತ್ತದೆ. ಅಲ್ಲದೆ ಕರ್ಮ ಪದವಿಲ್ಲದ ವಾಕ್ಯಗಳು ಇರುತ್ತವೆ. ಒಂದು ವಾಕ್ಯದಲ್ಲಿ ವಿಷಯ ಮತ್ತು ಕ್ರಿಯೆ ಎಂಬ ಎರಡು ಅಂಶಗಳಿರಲೇಬೇಕು.[೧೧]

ಕನ್ನಡ ವಾಕ್ಯಗಳಲ್ಲಿ ಬಳಕೆಯಾಗುವ ಪದಗಳನ್ನು ಅವುಗಳ ಅರ್ಥದ ಆಧಾರದ ಮೇಲೆ ಮುಖ್ಯವಾಗಿ ಮೂರು ಗುಂಪುಗಳಲ್ಲಿ ವಿಂಗಡಿಸಲು ಸಾಧ್ಯ.

೧. **ನಾಮಪದಗಳು** : ರಾಜು, ಮನೆ, ಆನೆ, ಹುಡುಗಿ, ಲೇಖನಿ

೨. **ಕ್ರಿಯಾಪದಗಳು** : ತಿನ್ನು, ಓದು, ಬೀಳು, ಕೊಡು, ಮಾಡು

೩. **ಗುಣಪದಗಳು** : ದೊಡ್ಡ, ಚಿಕ್ಕ, ಕಪ್ಪು, ಒಳ್ಳೆ, ಬಹಳ

ಪದಗಳನ್ನು ವಿಂಗಡಿಸಲು ಈ ರೀತಿ ಅವುಗಳ ಅರ್ಥವನ್ನು ಮಾತ್ರವಲ್ಲದೆ ವಾಕ್ಯಗಳಲ್ಲಿ ಅವು ಎಂತಹ ಕೆಲಸಗಳನ್ನು ನಡೆಸುತ್ತವೆ ಎಂಬುದನ್ನು ತಿಳಿದುಕೊಳ್ಳಬೇಕಾಗುತ್ತದೆ.[೨]

ಕನ್ನಡದಲ್ಲಿ ನಾಮಪದ ಮತ್ತು ಕ್ರಿಯಾಪದಗಳು ಜೊತೆಗೆ ವಿಭಕ್ತಿ ಪ್ರತ್ಯಯಗಳು ವಾಕ್ಯದಲ್ಲಿ ಇರಲೇಬೇಕು. ಕನ್ನಡ ಕ್ರಿಯಾಪದದಲ್ಲಿ ಮೂರು ಪ್ರಕಾರಗಳಿವೆ. ಧಾತು, ಆಖ್ಯಾತ ಪ್ರತ್ಯಯ ಮತ್ತು ಕಾಲ. ಕ್ರಿಯಾಪದದಲ್ಲಿರುವ ಈ ಪ್ರತ್ಯಯಗಳು ಕರ್ತೃವಿನೊಂದಿಗೆ ಸಂಬಂಧ ಹೊಂದಿರುವುದರಿಂದ ಕನ್ನಡ ವಾಕ್ಯ ರಚನೆಯ ವಿಶೇಷವಾದ ಲಕ್ಷಣವನ್ನು ಹೊಂದಿರುವುದನ್ನು ಗಮನಿಸಬಹುದು. ಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಶಿಕ್ಷಕರು ವಾಕ್ಯರಚನಾ ನಿಯಮಗಳನ್ನು ಹೇಳಿಕೊಡಬೇಕು. ಆಂಗ್ಲ ಮಾಧ್ಯಮದಲ್ಲಿ ಪ್ರಥಮ ಭಾಷೆ ಇಂಗ್ಲಿಷನ್ನು ಕಲಿತ ವಿದ್ಯಾರ್ಥಿಗಳು ಕನ್ನಡದಲ್ಲಿ ವಾಕ್ಯರಚನೆ ಮಾಡುವಾಗ ಹಲವು ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಗಮನಿಸಬಹುದು.

ವಿದ್ಯಾರ್ಥಿಗಳು ವಾಕ್ಯಗಳನ್ನು ಓದುವಾಗ ಅಸ್ಪಷ್ಟವಾಗಿ ಓದುವುದು, ಬರೆಯುವ ಸಂದರ್ಭದಲ್ಲಿ ಅಲ್ಪಪ್ರಾಣ, ಮಹಾಪ್ರಾಣ, ಒತ್ತಕ್ಷರಗಳನ್ನು ಲೋಪಮಾಡಿ ಬರೆಯುವುದನ್ನು ಕಾಣಬಹುದು. ಕರ್ತೃ, ಕರ್ಮ, ಕ್ರಿಯಾ ಪದಗಳನ್ನು ಬಳಸುವಾಗಲೂ ಹಲವು ವ್ಯತ್ಯಾಸಗಳನ್ನು ಮಾಡುತ್ತಾರೆ. ಇಂತಹ ಸಮಸ್ಯೆಗಳನ್ನು ಗುರುತಿಸಿ ಶಿಕ್ಷಕರು ವಾಕ್ಯರಚನಾ ಕಲಿಕೆಗೆ ಹೆಚ್ಚಿನ ಗಮನಕೊಟ್ಟು ಕಲಿಸಬೇಕಾಗಿದೆ.

ಭಾಷಾ ಕಲಿಕಾ ಸಮಸ್ಯೆಗಳಲ್ಲಿ ಓದುಗಾರಿಕೆ ಮತ್ತು ಬರವಣಿಗೆಯ ಸಮಸ್ಯೆಗಳ ನಂತರ ಕಂಡು ಬರುವ ಸಮಸ್ಯೆಗಳಲ್ಲಿ ವಾಕ್ಯರಚನಾ ಸಮಸ್ಯೆಯು ಒಂದು. ಆಂಗ್ಲ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆಗಳಲ್ಲಿ ಮಕ್ಕಳು ವಾಕ್ಯರಚನೆ ಮಾಡುವ ಸಂದರ್ಭದಲ್ಲಿ ಹೇಗೆ ವ್ಯತ್ಯಾಸಗಳನ್ನು ಮಾಡುತ್ತಿದ್ದಾರೆ ಎನ್ನುವುದನ್ನು ಗಮನಿಸಲಾಗಿದೆ. ಆಂಗ್ಲ ಮಾಧ್ಯಮದಲ್ಲಿ ಕನ್ನಡ ಮನೆ ಮಾತು, ತೆಲುಗು ಮನೆ ಮಾತು, ಉರ್ದು ಮನೆ ಮಾತು ಮತ್ತು ತಮಿಳು ಮನೆ ಮಾತು ಇರುವ ಮಕ್ಕಳ ವಾಕ್ಯ ರಚನಾ ದೋಷಗಳನ್ನು ವಿಶ್ಲೇಷಣೆಗೆ

ಒಳಪಡಿಸಲಾಗಿದೆ. ಭಿನ್ನ ಭಾಷೆಯನ್ನಾಡುವ ವಿದ್ಯಾರ್ಥಿಗಳು ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯುವಾಗ ವಿವಿಧ ರೀತಿಯಲ್ಲಿ ದೋಷಗಳನ್ನು ಮಾಡಿರುವುದನ್ನು ಸ್ವತಃ ವಿದ್ಯಾರ್ಥಿಗಳೇ ಬರೆದ ಬರಹವನ್ನು ಯಥಾವತ್ತಾಗಿ ಇಲ್ಲಿ ಸ್ಕ್ಯಾನ್ ಮಾಡಿ ಮಾದರಿಯನ್ನು ಹಾಕಲಾಗಿದೆ.

## ಕನ್ನಡ ಮಾತೃಭಾಷಾ ವಿದ್ಯಾರ್ಥಿಗಳ ಮಾದರಿ ಬರಹ

ಮನೆಮಾತು – ಕನ್ನಡ. [illegible]

**ವ್ಯಾಕರಣಾಂಶಗಳ ಪರೀಕ್ಷೆ**

೧. ಈ ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬರೆಯಿರಿ

೧. ಸುಂದರ – [illegible]

೨. ಬುದ್ಧಿವಂತ – ನನ್ನ ತಂದೆ ಬುದ್ಧಿವಂತ

೩. ಪ್ರವಾಸ – [illegible]

೪. ಪ್ರಾರ್ಥನೆ – [illegible]

೫. ಆಶ್ಚರ್ಯ – [illegible]

೨. ಈ ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ

೧. ಮಾತನ್ನು – ಮಾ+ತನ್ನು

೨. ನೆನಪಿರಲಿ – ನೆನ+ಪಿರಲಿ

೩. ಸಿರಿಗನ್ನಡ – ಸಿರಿ+ಗನ್ನಡ

೪. ಮನೆಯನ್ನು – ಮನೆ+ಯನ್ನು

೫. ದೇವಾಲಯ – ದೇವಾ+ಲಯ ?

೩. ಈ ಕೆಳಗಿನವುಗಳಲ್ಲಿ ಲಿಂಗಗಳನ್ನು ಪಟ್ಟಿಮಾಡಿ

ರಾಮ. ಗೋದಾವರಿ. ವಿಮಾನ. ಹನುಮ. ಶಾಲೆ. ಪಾರ್ವತಿ. ವಿವೇಕಾನಂದ. ಭವಾನಿ. ಮನೆ.

[illegible]

ಸೀತೆ. ಕುದುರೆ. ವಾಣಿ. ರಾಜಶೇಖರ. ರೇಡಿಯೋ

೪. ಈ ಕೆಳಗಿನವುಗಳಲ್ಲಿ ಏಕವಚನ ಬಹುವಚನಗಳನ್ನು ಪಟ್ಟಿಮಾಡಿ.

ಗಿಡಗಳು. ಪುಸ್ತಕ. ಅಕ್ಕ. ಪ್ರಾಣಿಗಳು. ನಾಯಿ. ಗಡಿಯಾರ. ಕಲ್ಲುಗಳು. ಆನೆ. ಕಾಲುಗಳು

[illegible]

೫. ಈ ಕೆಳಗಿನ ಪದಗಳಲ್ಲಿನ ಕಾಲ ಪ್ರತ್ಯಯಗಳನ್ನು ತಿಳಿಸಿ

ಅ) ತಿಂದನು – ಭೂತಕಾಲ

ಆ) ಓದುತ್ತಾನೆ – ಭವಿಷ್ಯತ್ ಕಾಲ

ಇ) ಮಾಡುವನು – ವರ್ತಮಾನಕಾಲ

೬. ವಾಕ್ಯ ಸರಿಪಡಿಸಿ ಬರೆಯಿರಿ.

ಅ) ಭಾರತ ಜಯ ತನುಜಾತೆ ಜನನಿಯ

ಉತ್ತರ: ಜಯ ಭಾರತ ಜನನಿಯ ತನುಜಾತೆ

ಆ) ತಿಂದಿತು ಅಳಿಲು ಹಣ್ಣನ್ನು

ಉತ್ತರ: ಅಳಿಲು ಹಣ್ಣನ್ನು ತಿಂದಿತು

ಇ) ಮಾಡಬೇಕು ಎಂದರು ಸಹಾಯ ಇನ್ನೊಬ್ಬರಿಗೆ ಜಿಲ್ಲಾಧಿಕಾರಿಗಳು

ಉತ್ತರ: ಜಿಲ್ಲಾಧಿಕಾರಿಗಳು ಸಹಾಯ ಮಾಡಬೇಕು ಎಂದರು ಇನ್ನೊಬ್ಬರಿಗೆ

ಈ) ಪ್ರವಾಸದಿಲೀಪ ಮೈಸೂರಿಗೆ ಹೊರಟನು.

ಉತ್ತರ:- ಪ್ರವಾಸಕ್ಕೆ ದಿಲೀಪ ಮೈಸೂರಿಗೆ ಹೊರಟನು

೭. ನಿಮ್ಮ ಕುಟುಂಬದಲ್ಲಿರುವ ಸದಸ್ಯರ ಹೆಸರುಗಳನ್ನು ಬರೆಯಿರಿ.

ಪ್ರಶಾಂತ್, ಪ್ರಿಯಾ, ಅದಿತಿ, ಅನಿತ, ಹನುಮಂತಪ್ಪ

೮. ನಿಮ್ಮ ಶಾಲೆಯ ಕುರಿತು ಬರೆಯಿರಿ.

ನಮ್ಮ ಶಾಲೆಯಲ್ಲಿ ಚನ್ನಾಗಿ ಪಾಠ ಮಾಡುತ್ತಾರೆ. ನಮ್ಮ ಶಾಲೆಯಲ್ಲಿ ಆಟ ಆಡುತ್ತೇವೆ. ಶಾಲೆಯಲ್ಲಿ ಊಟ ಕೊಡುತ್ತಾರೆ.

೯. ರಾಷ್ಟ್ರಧ್ವಜವನ್ನು ಕುರಿತು ಬರೆಯಿರಿ

ವಿದ್ಯಾರ್ಥಿಗಳ ಈ ಸ್ಕ್ಯಾನ್ ಮಾದರಿ ಬರಹವನ್ನು ಗಮನಿಸಿದಾಗ 'ಕನ್ನಡ' ಮನೆ ಮಾತು ಇರುವ ವಿದ್ಯಾರ್ಥಿಗಳ ಬರವಣಿಗೆಯ ಕ್ರಮ ಹೀಗಿದೆ. ವಿದ್ಯಾರ್ಥಿಗಳಿಂದ ಅವರ ಶಾಲೆಯ ಬಗ್ಗೆ, ಕುಟುಂಬದ ಸದಸ್ಯರ ಬಗ್ಗೆ, ರಾಷ್ಟ್ರ ಧ್ವಜವನ್ನು ಕುರಿತು ಸ್ವಂತವಾಗಿ ಬರೆಯಿಸಲಾಗಿದೆ ಹಾಗೂ ಕೆಲವೊಂದು ಪದಗಳನ್ನು ಸ್ವಂತ ವಾಕ್ಯದಲ್ಲಿ ರಚಿಸಲು ಹೇಳಲಾಯಿತು. ವಿದ್ಯಾರ್ಥಿಗಳು ಬರೆದ ಪ್ರಶ್ನಾವಳಿಗಳ ಮಾದರಿಗಳಲ್ಲಿ ವಾಕ್ಯ ರಚನಾ ದೋಷಗಳು ಮತ್ತು ಪದ ರಚನಾ ದೋಷಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧. ಗುಲಬಿ ಹೂವು ಸಂದರವಗಿ ಇರುತದೆ

೨. ನನ್ನು ತಂದ ಬುಧ್ಧಿವತ

೩. ನಮ್ಮ ಶಾಲೆಯಲ ಪ್ರವಾಸಗೆ ಕರೆದುಕೊಂಡು ಹೊಗುತಿದರೆ

೪. ನನ್ನು ಶಾಲೆಯಲಿ ದಿನಲು ಪ್ರಾರ್ಥನೆ ಮಡುತೆವೆ

೫. ನಾನು ರಾಜೇ ಕಾಲ ದಲ್ಲಿ ಹಂಪಿ ಹೊಗುತ್ತೆನೇ

೬. ನಾನು ಸುಂದರವಾಗಿ ಕಾಣುತೆನೆ

೭. ನಮ್ಮ ಕರ್ನಾಟಕ ರಾಜ್ಯದಲ್ಲಿ ಗಿಡ್ಡಗಳು ಹುವುಗಳು ಹಾಣುಗಲೂ ಇದ್ದಿವೆ.

೮. ನಾನು ಬೆಂಗಳೂರನಲಿ ಆಶರ್ಯ ಎಂಬ ನೋಡುದ್ದೆನೆ

| ಮೂಲ ರೂಪ | ಬರವಣಿಗೆಯ ರೂಪ |
|---|---|
| ಗುಲಾಬಿ | ಗುಲಬಿ |
| ಇರುತ್ತದೆ | ಇರುತದೆ |
| ನನ್ನ | ನನ್ನು |
| ತುಂಬಾ | ತುಂಬ |
| ಹೋಗುತ್ತಾರೆ | ಹೊಗುತಿದರೆ |
| ದಿನಾಲು | ದಿನಲು |
| ಹೇಳಿ | ಏಲಿ |
| ಎಲ್ಲರೂ | ಎಲರೂ |

| | |
|---|---|
| ಚೆನ್ನಾಗಿ | ಚೆನಗಿ |
| ಗಿಡ್ಡಗಳು | ಗಿಡ್ಡಗಲು |
| ಗೌಡ | ಗೌಂಡ |
| ಹೋಗಿದ್ದಾರೆ | ಹೋಗಿದ್ದರೆ |
| ಹೆಸರು | ಹೇಸರು |
| ಚೆನ್ನಾಗಿದೆ | ಚಾನಾಗಿದೆ |

ಈ ಬರವಣಿಗೆ ಕ್ರಮದಲ್ಲಿ ಹೆಚ್ಚಾಗಿ ನಾನ್ನು, ಇರತದೆ. ನನ್ನು, ಹೋಗುತಿದರೆ, ಗಿಡ್ಡಗಳು, ಹುವುಗಳು ಆಶರ್ಯ ಎಂದು ಅಕ್ಷರ ದೋಷಗಳನ್ನು ಮಾಡಿರುವುದನ್ನು ಅವರ ಬರವಣಿಗೆಯ ಮೂಲಕ ಗಮನಿಸಲಾಗಿದೆ. ಈ ವಿದ್ಯಾರ್ಥಿಗಳ ಬರವಣಿಗೆ ಕ್ರಮವನ್ನು ಗಮನಿಸಿದಾಗ ಒತ್ತಕ್ಷರ ದೋಷಗಳಾಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಕರ್ತೃ, ಕರ್ಮ ಮತ್ತು ಕ್ರಿಯಾಪದ ಬಳಕೆಯಲ್ಲಿ ವ್ಯತ್ಯಾಸವಾಗಿರುವುದನ್ನು ಗಮನಿಸಬಹುದು. ಕನ್ನಡ ಮನೆ ಮಾತು ಹೊಂದಿರುವ ವಿದ್ಯಾರ್ಥಿಗಳೇ ಸ್ವಂತ ವಾಕ್ಯ ರಚಿಸಲು ಸಾಧ್ಯವಾಗದ ರೀತಿಯಲ್ಲಿ ಬರವಣಿಗೆಯ ದೋಷಗಳನ್ನು ಮಾಡಿರುವುದು ಕಂಡು ಬಂದಿದೆ. ಬರವಣಿಗೆಯ ಅಭ್ಯಾಸದ ಕೊರತೆ, ಪದಗಳ ಬಳಕೆಯ ಖಚಿತತೆ ಇಲ್ಲದಿರುವುದನ್ನು ಗುರುತಿಸಲಾಗಿದೆ. ಅಲ್ಪಪ್ರಾಣ ಮತ್ತು ಮಹಾಪ್ರಾಣದ ಉಚ್ಚಾರಣೆ ಹಾಗೂ ಬರವಣಿಗೆಯ ಕ್ರಮವನ್ನು ಗಮನಿಸದಿರುವುದು ತಿಳಿಯುತ್ತದೆ. ಕೆಲವು ವಿದ್ಯಾರ್ಥಿಗಳು ಸ್ವಂತ ವಾಕ್ಯಗಳನ್ನು ಬರೆಯದೆ ಖಾಲಿ ಹಾಳೆಯನ್ನು ನೀಡಿದ್ದಾರೆ. ಪ್ರಾಥಮಿಕ ಶಾಲಾ ಹಂತದಲ್ಲಿ ಕನ್ನಡ ವರ್ಣಮಾಲೆಯ ಸ್ಪಷ್ಟ ಪರಿಕಲ್ಪನೆ ಇಲ್ಲದಿರುವುದೇ ದೋಷಗಳಾಗಲು ಕಾರಣವಾಗಿದೆ. ವಾಕ್ಯಗಳನ್ನು ಸಂಪೂರ್ಣವಾಗಿ ರಚಿಸದೇ ಇರುವುದನ್ನು ಇಲ್ಲಿ ಗಮನಿಸಬಹುದು. ಸ್ವರಗಳು, ವ್ಯಂಜನಗಳು ಮತ್ತು ಒತ್ತಕ್ಷರಗಳಲ್ಲಿ ದೋಷಗಳಾಗಿವೆ. ವಾಕ್ಯರಚನಾ ನಿಯಮಗಳ ಜ್ಞಾನ ಇಲ್ಲದಿರುವುದು ಸ್ಪಷ್ಟವಾಗಿದೆ.

# ತೆಲುಗು ಮಾತೃ ಭಾಷಾ ವಿದ್ಯಾರ್ಥಿಗಳ ಮಾದರಿ ಬರಹ

ಕೆ. [illegible]
ಮಾತೃಭಾಷೆ – ತೆಲುಗು. ೭ನೇ ತರಗತಿ
ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ.

<u>ವ್ಯಾಕರಣಾಂಶಗಳ ಪರೀಕ್ಷೆ</u>

೧. ಈ ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬರೆಯಿರಿ

೧. ಸುಂದರ :- ನವಿಲು ಸುಂದರವಾಗಿರುತ್ತದೆ

೨. ಬುದ್ಧಿವಂತ :- ರಾಮು ತುಂಬಾ ಬುದ್ಧಿವಂತ

೩. ಪ್ರವಾಸ :- ಸೀತೆ ಪ್ರವಾಸಕ್ಕೆ ಹೊರಟಳು.

೪. ಪ್ರಾರ್ಥನೆ :- ನಾವು ದೇವರನ್ನು ಪ್ರಾರ್ಥನೆ ಮಾಡಬೇಕು

೫. ಆಶ್ಚರ್ಯ :- ನಾವು ಇದನ್ನು ನೋಡಿದಾಗ ಆಶ್ಚರ್ಯವಾಗುತ್ತದೆ

೨. ಈ ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ

೧. ಮಾತನ್ನು ಮಾತು + ಇನ್ನು –

೨. ನೆನಪಿರಲಿ ನೆನಪು + ಇರಲಿ –

೩. ಸಿರಿಗನ್ನಡ ಸಿರಿ + ಕನ್ನಡ –

೪. ಮನೆಯನ್ನು ಮನೆ + ಇನ್ನು –

೫. ದೇವಾಲಯ ದೇವ + ಆಲಯ –

೩. ಈ ಕೆಳಗಿನವುಗಳಲ್ಲ ಲಿಂಗಗಳನ್ನು ಪಟ್ಟಿಮಾಡಿ

ರಾಮ, ಗೋದಾವರಿ, ವಿಮಾನ, ಹನುಮ, ಶಾಲೆ, ಪಾರ್ವತಿ, ವಿವೇಕಾನಂದ, ಭವಾನಿ, ಮನೆ.
– ಪುಲ್ಲಿಂಗ, ಸ್ತ್ರೀ, ನಪುಂಸಕ, ಪುಲ್ಲಿಂಗ, ನಪುಂಸಕ, ಸ್ತ್ರೀ, ಪುಲ್ಲಿಂಗ, ಸ್ತ್ರೀ, ನಪುಂಸಕ

ಸೀತೆ, ಕುದುರೆ, ವಾಣಿ, ರಾಜಶೇಖರ, ರೇಡಿಯೋ
– ಸ್ತ್ರೀ, ನಪುಂಸಕ, ಸ್ತ್ರೀ, ಪುಲ್ಲಿಂಗ, ನಪುಂಸಕ

೪. ಈ ಕೆಳಗಿನವುಗಳಲ್ಲ ಏಕವಚನ ಬಹುವಚನಗಳನ್ನು ಪಟ್ಟಿಮಾಡಿ.

ಗಿಡಗಳು, ಪುಸ್ತಕ, ಅಕ್ಕ, ಪ್ರಾಣಿಗಳು, ನಾಯಿ, ಗಡಿಯಾರ, ಕಲ್ಲುಗಳು, ಆನೆ, ಕಾಲುಗಳು
ಬಹುವಚನ, ಏಕವಚನ, ಏಕವಚನ, ಬಹುವಚನ, ಏಕವಚನ, ಏಕವಚನ, ಬಹುವಚನ, ಏಕವಚನ, ಬಹುವಚನ

೫. ಈ ಕೆಳಗಿನ ಪದಗಳಲ್ಲಿನ ಕಾಲ ಪ್ರತ್ಯಯಗಳನ್ನು ತಿಳಿಸಿ

ಅ) ತಿಂದನು :- ಭೂತಕಾಲ

ಆ) ಓದುತ್ತಾನೆ :- ಭ[illegible]ಕಾಲ

ಇ) ಮಾಡುವನು :- ವರ್ತಮಾನಕಾಲ

೬. ವಾಕ್ಯ ಸರಿಪಡಿಸಿ ಬರೆಯಿರಿ.

ಅ) ಭಾರತ ಜಯ ತನುಜಾತೆ ಜನನಿಯ

ಉತ್ತರ: ಜಯ ಭಾರತ ಜನನಿಯ ತನುಜಾತೆ

ಆ) ತಿಂದಿತು ಅಳಿಲು ಹಣ್ಣನ್ನು

ಉತ್ತರ: ಅಳಿಲು ಹಣ್ಣನ್ನು ತಿಂದಿತು

ಇ) ಮಾಡಬೇಕು ಎಂದರು ಸಹಾಯ ಇನ್ನೊಬ್ಬರಿಗೆ ಜಿಲ್ಲಾಧಿಕಾರಿಗಳು

ಉತ್ತರ: ಜಿಲ್ಲಾಧಿಕಾರಿಗಳು ಇನ್ನೊಬ್ಬರಿಗೆ ಸಹಾಯ ಮಾಡಬೇಕು ಎಂದರು

ಈ) ಪ್ರವಾಸ ದಿಲೀಪ ಮೈಸೂರಿಗೆ ಹೊರಟನು.

ಉತ್ತರ:- ದಿಲೀಪ ಪ್ರವಾಸ ಮೈಸೂರಿಗೆ ಹೊರಟನು

೭. ನಿಮ್ಮ ಕುಟುಂಬದಲ್ಲಿರುವ ಸದಸ್ಯರ ಹೆಸರುಗಳನ್ನು ಬರೆಯಿರಿ.

ಕೆ. ಗೋವಿಂದ, ಕೆ. [illegible], ಕೆ. [illegible], ಕೆ. [illegible] . ಕೆ. [illegible]
ಕೆ. [illegible], ಕೆ. [illegible]

೮. ನಿಮ್ಮ ಶಾಲೆಯ ಕುರಿತು ಬರೆಯಿರಿ.

ನಮ್ಮ ಶಾಲೆಯಲ್ಲಿ ಹತ್ತು ಜನ ಹುಡುಗರು ನಮ್ಮ ಫ್ರೆಂಡ್ಸ್ ಮತ್ತು
ನಮ್ಮ ಟೀಚರ್ಸ್ ಕೂಡ ಇದ್ದಾರೆ ಮತ್ತೆ ನಾವು ನಮ್ಮ
ಶಾಲೆಯಲ್ಲಿ ಊಟವನ್ನು ಕೂಡ ಮಾಡುತ್ತೇವೆ ಮತ್ತೆ
ನಾವು [illegible] [illegible] [illegible] ನಲ್ಲಿ ಕೂಡ [illegible]
[illegible] ಮಾಡುತ್ತೇವೆ

೯. ರಾಷ್ಟ್ರಧ್ವಜವನ್ನು ಕುರಿತು ಬರೆಯಿರಿ

ನಮ್ಮ ರಾಷ್ಟ್ರಧ್ವಜದಲ್ಲಿ ಮೂರು ಬಣ್ಣಗಳು ಇರುತ್ತವೆ ಒಂದು
ಹಸಿರು, ಬಿಳಿ, ಕೇಸರಿ ಇವು ನಮ್ಮ ರಾಷ್ಟ್ರೀಯ ಮೂರು
ಬಣ್ಣಗಳು

ವಿದ್ಯಾರ್ಥಿಗಳ ಈ ಸ್ಕ್ಯಾನ್ ಮಾದರಿ ಬರಹವನ್ನು ಗಮನಿಸಿದಾಗ 'ತೆಲುಗು' ಮನೆ ಮಾತು ಇರುವ ವಿದ್ಯಾರ್ಥಿಯ ಬರವಣಿಗೆಯ ಕ್ರಮ ಹೀಗಿದೆ.

"ನಮ್ಮ ಶಾಲೆಯಲ್ಲಿ ಹತ್ತು ಜನ ಹುಡುಗರು ನಮ್ಮ ಫ್ರೆಂಡ್ಸ್ ಮತ್ತು ನಮ್ಮ ಟೀಕನ್ನರವರು ಕೂಡ ಇದ್ದಾಗೆ ಮತ್ತೆ ನಾವು ನಮ್ಮ ಶಾಲೆಯಲ್ಲಿ ಆಟವನ್ನು ಕೂಡ ಆಡುತ್ತೇವೆ ಮತ್ತು ಯಾವುದಾಹರು ಡ್ಯಾಸ್ಸ, ಸಾಂಗ್ ನಲ್ಲಿ ಕೂಡ ಪಾರ್ಟಿಸಿ ಪಂಟ್ ಮಾಡುತ್ತೀವಿ"

ವಿದ್ಯಾರ್ಥಿಯ ಈ ಬರವಣಿಗೆಯ ಕ್ರಮದಲ್ಲಿ ಅತಿ ಹೆಚ್ಚು ಇಂಗ್ಲೀಷ್ ಪದಗಳನ್ನು ಬಳಸಿರುವುದನ್ನು ಗಮನಿಸಬಹುದು. ಫ್ರೆಂಡ್ಸ್, ಡ್ಯಾನ್ಸ್, ಸಾಂಗ್, ಪಾರ್ಟಿಸಿಪಂಟ್ ಈ ಪದಗಳನ್ನು ಬರವಣಿಗೆ ಕ್ರಮದಲ್ಲಿ ಅಕ್ಷರ ದೋಷಗಳಿರುವುದನ್ನು ಕಾಣಬಹುದು ಹಾಗೂ ವಾಕ್ಯ ರಚನಾ ದೋಷಗಳನ್ನು ಮಾಡಿರುವುದು ಕಂಡು ಬಂದಿದೆ. 'ಲ್ಲಿ' ಒತ್ತಕ್ಷರ ಇಲ್ಲದೆ 'ಲಿ' ಎಂದು ಬರೆಯಲಾಗಿದೆ. 'ಫ್ರೆಂಡ್ಸ್' ಎನ್ನುವುದರ ಬದಲಾಗಿದೆ 'ಫ್ರೆಂಡ್ಸ್ ಎಂದು ಬರೆದಿರುವುದನ್ನು ಕಂಡು ಬರುತ್ತದೆ. 'ಟೀಚರ್' ಎನ್ನುವುದರ ಬದಲಾಗಿ 'ಟೀಕನ್' ಎಂದು ಅಕ್ಷರ ದೋಷ ಮಾಡಿರುವುದನ್ನು ನೋಡಬಹುದು. ಮನೆ ಮಾತು ತೆಲುಗು ಆಗಿದ್ದು, ತರಗತಿಯಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯುತ್ತಿರುವ ವಿದ್ಯಾರ್ಥಿಗಳ ಬರವಣಿಗೆಯಲ್ಲಿ ಆಂಗ್ಲ ಪದಗಳ ಬಳಕೆ ಹೆಚ್ಚಾಗಿದೆ. ಪರಿಸರದಲ್ಲಿ ಬಳಕೆಯಾಗುತ್ತಿರುವ ಭಾಷೆಯನ್ನೇ ಬಳಸಿದ್ದಾನೆ. ಮನೆಯಲ್ಲಿ ತೆಲುಗು ಮಾತನಾಡುವ ವಿದ್ಯಾರ್ಥಿಗಳು ಶಾಲಾ ಪರಿಸರದಲ್ಲಿ ಆಂಗ್ಲ ಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯುವ ಸಂದರ್ಭದಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯುವಾಗ ಸ್ವರಕ್ಕೆ ಬದಲಾಗಿ ವ್ಯಂಜನ, ವ್ಯಂಜನದ ಬದಲಾಗಿ ಸ್ವರಗಳನ್ನು ಬಳಸಿರುವುದು ಸ್ಪಷ್ಟವಾಗಿದೆ. 'ಅನ್ನಪೂರ್ಣ' ಎಂದು ಬರೆಯುವಾಗ 'ಅನಪುರನ' 'ರಾಘವೇಂದ್ರ > ರಾಗವೇದರ ಎಂದು ಕುಟುಂಬದ ಸದಸ್ಯರ ಹೆಸರುಗಳನ್ನು ಬರೆಯುವಾಗ ದೋಷಗಳನ್ನು ಮಾಡಿರುವುದನ್ನು ಗಮನಿಸಬಹುದು.

| **ಮೂಲ ರೂಪ** | **ಬರಹ ರೂಪ** |
|---|---|
| ಪ್ರವಾಸಕ್ಕೆ | ಪ್ರವಾಸಕೇ |
| ಆಶ್ಚರ್ಯ | ಆಶ್ವರ್ಯ |
| ಹೊರಟಳು | ಹೊರಟರು |
| ವಾಗುತ್ತೀರಿ | ವಾಗಿತ್ತಿರಿ |
| ಭವಿಷ್ಯತ್‌ಕಾಲ | ಭರಿಷ್ಯಕಾಲ |
| ತಂದಿತು | ತಂದಿತು. |

| | |
|---|---|
| ಸೌಮ್ಯ | ಸೌವ್ಯ |
| ಅನ್ನಪೂರ್ಣ | ಅನಪುರನ |
| ರಾಘವೇಂದ್ರ | ರಾಗವೇದರ |
| ಸ್ನೇಹಿತರು | ಫ್ರೆಂಡ್ಸ್ |
| ಶಿಕ್ಷಕರು | ಟೀಕರ್ಸ್ |
| ಇದ್ದಾರೆ | ಇದ್ದಾಗೆ. |
| ನೃತ್ಯ | ಡಾನ್ಸ್ |
| ಹಾಡು | ಸಾಂಗ್ |
| ಭಾಗವಹಿಸುತೇನೆ | ಪಾರಿಟಿಸಿಪಂಟ್ |

ಈ ರೀತಿಯಾಗಿ ಬರೆಯಲು ಕಾರಣ ವಿದ್ಯಾರ್ಥಿಗಳಿಗೆ ಸ್ವರ, ವ್ಯಂಜನ, ಒತ್ತಕ್ಷರಗಳ ನಡುವಿನ ವ್ಯತ್ಯಾಸ ಗಮನಿಸದಿರುವುದು.

- ವಿದ್ಯಾರ್ಥಿಗಳು ಆತುರದ ಬರವಣಿಗೆ, ಬೇಗ ಬರೆದು ಮುಗಿಸಬೇಕು ಎನ್ನುವುದು ಕಾರಣವಾಗಿದೆ.
- ಅನುನಾಸಿಕ 'ಣ'ಕಾರಕ್ಕೆ ಬದಲಾಗಿ 'ನ' ಬಳಕೆ, 'ೀ' ಅರ್ಕವತ್ತನ್ನು ನಿರ್ಲಕ್ಷಿಸಿರುವುದು.
- ಅನುನಾಸಿಕ 'ಣ' ಕಾರ ಮತ್ತು 'ನ' ಕಾರಗಳ ವ್ಯತ್ಯಾಸ ತಿಳಿಯದಿರುವುದು.
- ಬೋಧನಾ ಸಂದರ್ಭದಲ್ಲಿ ಗಮನವಿಟ್ಟು ಆಲಿಸದಿರುವುದು ಅವರ ಉಚ್ಚಾರಣಾ ವ್ಯತ್ಯಾಸ ಗ್ರಹಿಸಲು ಕಾರಣವಾಗಿದೆ.
- ಅಲ್ಪಪ್ರಾಣ ಮತ್ತು ಮಹಾಪ್ರಾಣದ ಉಚ್ಚಾರಣೆ ಹಾಗೂ ಬರವಣಿಗೆಯ ಕ್ರಮವನ್ನು ಗಮನಿಸದಿರುವುದು.

ಈ ಎಲ್ಲಾ ಸಮಸ್ಯೆಗಳನ್ನು ಎದುರಿಸುತ್ತಿರುವ ವಿದ್ಯಾರ್ಥಿಗಳ ಮನೆ ಮಾತು ತೆಲುಗು ಕಲಿಕಾ ಮಾಧ್ಯಮ ಇಂಗ್ಲಿಷ್ ಮತ್ತು ಕಲಿಯುತ್ತಿರುವ ಭಾಷೆ ಕನ್ನಡ. ಈ ಮೂರರ ಪ್ರಭಾವ ವಿದ್ಯಾರ್ಥಿಯ ಓದುವಿಕೆ ಮತ್ತು ಬರವಣಿಗೆಯ ಕ್ರಮದಲ್ಲಿ ಕಾಣಬಹುದಾಗಿದೆ. ಪರಿಸರದಲ್ಲಿ ಬಳಸುವ ಭಾಷೆಯನ್ನು ಬರವಣಿಗೆಯ ಸಂದರ್ಭದಲ್ಲಿ ಬಳಸಿರುವುದನ್ನು ಕಂಡು ಬರುತ್ತದೆ. ಪರಿಸರ ಹಾಗೂ ಶಾಲೆಯ ಭಾಷೆಯು ಪ್ರಭಾವ ಬೀರುತ್ತದೆ. ಹೀಗಾಗಿ ವಿದ್ಯಾರ್ಥಿಗಳು ಭಾಷಾ ಕಲಿಕೆಯಲ್ಲಿ ಹೆಚ್ಚಿನ ಸಮಸ್ಯೆಗಳನ್ನು ಎದುರಿಸುತ್ತಾರೆ. ಈ ಹಿನ್ನೆಲೆಯಲ್ಲಿ ಬೋಧಕರು ಕನ್ನಡ ವರ್ಣ ಮಾಲೆಯ ಸ್ಪಷ್ಟ

ಪರಿಕಲ್ಪನೆಯನ್ನು ಮೂಡಿಸಬೇಕು. ಅಕ್ಷರಗಳ ಉತ್ಪತ್ತಿ ಸ್ಥಾನಗಳ ಬಗ್ಗೆ ಮಾಹಿತಿಯನ್ನು ನೀಡಿ ಉಚ್ಚಾರಣಾ ಮಾದರಿಗಳನ್ನು ರೂಢಿ ಮಾಡಿಸಬೇಕು. ಕಾಪಿ ಪುಸ್ತಕದ ಬರವಣಿಗೆಯನ್ನು ಅಭ್ಯಾಸ ಮಾಡಿಸಬೇಕು. ಅಲ್ಪಪ್ರಾಣ ಮತ್ತು ಮಹಾಪ್ರಾಣ ಅಕ್ಷರಗಳ ಸ್ಪಷ್ಟವಾದ ಕಲ್ಪನೆಯನ್ನು ತಿಳಿಸಿ ಹೇಳಬೇಕು. ಅನುಸ್ವಾರ, ಅನುನಾಸಿಕ ಅಕ್ಷರಗಳ ದೋಷಗಳಿಗೆ ಉದಾಹರಣೆಗಳನ್ನು ಅರ್ಥ ವ್ಯತ್ಯಾಸವನ್ನು ತಿದ್ದಿ ಹೇಳಬೇಕು. ಪದ ಬಳಕೆ ಕುರಿತು ಸ್ಪಷ್ಟವಾಗಿ ವಿವರಿಸಬೇಕು. ಹೀಗೆ ಬೋಧಕರು ಆಸಕ್ತಿ ವಹಿಸಿ ಬೋಧಿಸಬೇಕಾಗಿದೆ.

## ಉರ್ದು ಮಾತೃ ಭಾಷಾ ವಿದ್ಯಾರ್ಥಿಗಳ ಮಾದರಿ ಬರಹ

ಮನೆಮಾತು - ಉರ್ದು ಹೆಸರು :- [illegible]
ತರಗತಿ :- ೩ನೇ ತರಗತಿ

**ವ್ಯಾಕರಣಾಂಶಗಳ ಪರೀಕ್ಷೆ**

೧. ಈ ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬರೆಯಿರಿ

೧. ಸುಂದರ :- ನವಿಲು ಬಹಳೆ ಸುಂದರವಾದ ಪಕ್ಷಿ.
೨. ಬುದ್ಧಿವಂತ :- ನಮ್ಮ ಶಾಲೆಯಲ್ಲಿ ಬುದ್ಧಿವಂತ ಮಕ್ಕಳು ಇದೆ.
೩. ಪ್ರವಾಸ :- ನಾನು ಆಟೋಯಲ್ಲಿ ಪ್ರವಾಸ ಮಾಡುತ್ತಾರೆ.
೪. ಪ್ರಾರ್ಥನೆ :- ನಾನು ನಮ್ಮ ಮನೆ ದೇವರನ್ನು ಪೂಜೆ ಮಾಡುತ್ತಾರೆ.
೫. ಆಶ್ಚರ್ಯ :- ನಾನು ಇನ್ನೊಬ್ಬರ ನೋಡಿ ಆಶ್ಚರಿಯ ಪಡುತ್ತೇನೆ.

೨. ಈ ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ

೧. ಮಾತನ್ನು = ಮಾತು + ಅನು = ಮಾತನ್ನು
೨. ನೆನಪಿರಲಿ = ನೆನ + ರಲಿ = ನೆನಪಿರಲಿ
೩. ಸಿರಿಗನ್ನಡ = ಸಿರಿ + ಕನ್ನಡ = ಸಿರಿಗನ್ನಡ
೪. ಮನೆಯನ್ನು = ಮನೆ + ಅನ್ನು = ಮನೆಯನ್ನು
೫. ದೇವಾಲಯ = ದೇವ + ಲಯಾ = ದೇವಲಯ

೩. ಈ ಕೆಳಗಿನವುಗಳಲ್ಲಿ ಲಿಂಗಗಳನ್ನು ಪಟ್ಟಿಮಾಡಿ

ರಾಮ, ಗೋದಾವರಿ, ವಿಮಾನ, ಹನುಮ, ಶಾಲೆ, ಪಾರ್ವತಿ, ವಿವೇಕಾನಂದ, ಭವಾನಿ, ಮನೆ,

ಪುಲ್ಲಿಂಗ = ರಾಮು, ವಿಮಾನ, ಹನುಮ, ವಿವೇಕಾನಂದ
ಸ್ತ್ರೀಲಿಂಗ = ಪಾರ್ವತಿ, ವಾಣಿ
ನಪುಂಸಕ ಲಿಂಗ = ರೇಡಿಯೋ

ಸೀತೆ, ಕುದುರೆ, ವಾಣಿ, ರಾಜಶೇಖರ, ರೇಡಿಯೋ

೪. ಈ ಕೆಳಗಿನವುಗಳಲ್ಲಿ ಏಕವಚನ ಬಹುವಚನಗಳನ್ನು ಪಟ್ಟಿಮಾಡಿ.

ಗಿಡಗಳು, ಪುಸ್ತಕ, ಅಕ್ಕ ಪ್ರಾಣಿಗಳು, ನಾಯಿ, ಗಡಿಯಾರ, ಕಲ್ಲುಗಳು, ಆನೆ, ಕಾಲುಗಳು

| ಏಕವಚನ | ಬಹುವಚನ |
|---|---|
| ೧) ಅಕ್ಕ | ೧) ಕಲ್ಲುಗಳು |
| ೨) ನಾಯಿ | ೨) ಪ್ರಾಣಿಗಳು |

೫. ಈ ಕೆಳಗಿನ ಪದಗಳಲ್ಲಿನ ಕಾಲ ಪ್ರತ್ಯಯಗಳನ್ನು ತಿಳಿಸಿ

ಅ) ತಿಂದನು

ಆ) ಓದುತ್ತಾನೆ

ಇ) ಮಾಡುವನು

೬. ವಾಕ್ಯ ಸರಿಪಡಿಸಿ ಬರೆಯಿರಿ.

ಅ) ಭಾರತ ಜಯ ತನುಜಾತೆ ಜನನಿಯ

ಉತ್ತರ: ಜಯ ಭಾರತ ಜನನಿಯ ತನುಜಾತೆ

ಆ) ತಿಂದಿತು ಅಳಲು ಹಣ್ಣನ್ನು

ಉತ್ತರ: ಅಳಲು ಹಣ್ಣನ್ನು ತಿಂದಿತು

ಇ) ಮಾಡಬೇಕು ಎಂದರು ಸಹಾಯ ಇನ್ನೊಬ್ಬರಿಗೆ ಜಿಲ್ಲಾಧಿಕಾರಿಗಳು

ಉತ್ತರ: ಜಿಲ್ಲಾಧಿಕಾರಿಗಳು ಇನ್ನೊಬ್ಬರಿಗೆ ಸಹಾಯ ಮಾಡಬೇಕು ಎಂದರು

ಈ) ಪ್ರವಾಸ ದಿಲೀಪ ಮೈಸೂರಿಗೆ ಹೊರಟನು.

ಉತ್ತರ:- ದಿಲೀಪ ಮೈಸೂರಿಗೆ ಪ್ರವಾಸ ಹೊರಟನು

೭. ನಿಮ್ಮ ಕುಟುಂಬದಲ್ಲಿರುವ ಸದಸ್ಯರ ಹೆಸರುಗಳನ್ನು ಬರೆಯಿರಿ.

ಎಂ. ನಿಸಾರ ಅಹಮದ್, ಕೌಸರ್ ಬೇಗಮ್, ಬಿ.ಬಿ ಆಯಿಶಾ. ತಾಹೇರ್, ಸಾಬೀರ್, ಬಿ.ಬಿ, ಇಶ್ರತ್, ಹಮೀದ್.

೮. ನಿಮ್ಮ ಶಾಲೆಯ ಕುರಿತು ಬರೆಯಿರಿ.

ನಮ್ಮ ಶಾಲೆಯಲ್ಲಿ ಬಹಳ ಶಿಕ್ಷಕರು ಇದರೆ. ನಮ್ಮ ಶಾಲೆ ಬಹಳ ಸುಂದರವಾಗಿದ್ದಾನೆ. ನಮ್ಮ ಶಾಲೆಯ ಹೆಚ್. ಎಮ್. ಹೆಸರು ಮಿಸ್ಸ್ ಜುಬೈದಾ ಜುಮಾತಾ ಬೇಗ್ಯವನ್ ಮತ್ತು ಸ್ಟಾಪ್ ಪುರಾತನ ಅಬ್ದುಲ್ ರಾಝಾಕ್.

೯. ರಾಷ್ಟ್ರಧ್ವಜವನ್ನು ಕುರಿತು ಬರೆಯಿರಿ

ರಾಷ್ಟ್ರ [illegible] ಧ್ವಜದಲ್ಲಿ ಮೂರು ರಂಗ ಇದೆ. ಕೇಸರಿಯ ಸಫೇದ್ ಹರಾ. ಕೇಸರಿಯಾ ರಂಗ ಬಲಿದಾನ ಮತ್ತು ವೀರತಾ ಪ್ರತೀಕ್ ಇದೆ. ಸಫೇದ್ ರಂಗ ಸ್ವಚ್ಛ ಮತ್ತು ಸಮಾಧಾನ ಪ್ರತೀಕ ಇದೆ. ~~ಹರ ರಂಗ~~ ರಾಷ್ಟ್ರ ಧ್ವಜದಲ್ಲಿ ಅಶೋಕ ಚಕ್ರ ಇದೆ.

ವಿದ್ಯಾರ್ಥಿಗಳ ಈ ಸ್ಕ್ಯಾನ್ ಮಾದರಿ ಬರಹವನ್ನು ಗಮನಿಸಿದಾಗ ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ 'ಉರ್ದು' ಭಾಷಿಕ ಮಕ್ಕಳ ಬರವಣಿಗೆ ಕ್ರಮ ಹೀಗಿದೆ.

ನಮ್ಮ ಶಾಲೆಯಲ್ಲಿ ಬಹಳ ಶಿಕ್ಷಕರ ಇದರೆ. ನಮ್ಮ ಶಾಲೆ ಬಹಳ ಸುಂದರವಾಗಿದ್ದಾನೆ. ನಮ್ಮ ಶಾಲೆಯ ಹೆಚ್.ಎಮ್. ಹೆಸರು . ಮಿಸಸ್ ಜೂಯ ಜುಮಾತಾ ಬ್ರಿಗ್ಯನಾಜಾ ಮತ್ತು ಸೈಯ್ಯದ್ ಹಝುರತ್ ಅಬ್ದುಲ್ ರಾಝೂಕ್." ಮತ್ತೊಂದು ಬರವಣಿಗೆಯ ಕ್ರಮ ಹೀಗಿದೆ. "ರಾಷ್ಟ್ರ ಧ್ವಜದಲ್ಲಿ ಮೂರು ರಂಗೆ ಇದೆ. ಕೆಸರಿಯ ಸಫೇದ್ ಹರಾ, ಕೆಸರಿಯಾ ರಂಗೆ ಬಲಿದಾನ ಮತ್ತು ವೀರತಾ ಪ್ರತೀಕ್ ಇದೆ. ಸಫೇದ್ ರಂಗೆ ಸ್ವಚ್ಛಮ ನಯಾಯ ಪ್ರತೀಕ ಇದೆ. ರಾಷ್ಟ್ರದಲ್ಲಿ ಆಶೋಕ ಚಕ್ರ ಇದೆ"

ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ಉರ್ದು ಭಾಷಿಕರ ವಿದ್ಯಾರ್ಥಿಗಳ ಬರವಣಿಗೆ ಕ್ರಮದಲ್ಲಿ ವಾಕ್ಯ ರಚನಾ ದೋಷಗಳು, ಒತ್ತಕ್ಷರ, ಗುಣಿತಾಕ್ಷರ, ಸ್ವರ, ವ್ಯಂಜನಗಳು, ಸ್ತ್ರೀಲಿಂಗ ಮತ್ತು ಪುಲ್ಲಿಂಗ ಹಾಗೂ ಏಕವಚನ, ಬಹುವಚನ ಇವುಗಳ ವ್ಯತ್ಯಾಸಗಳಾಗಿರುವುದನ್ನು ಗಮನಿಸಬಹುದು. ಇಲ್ಲಿ ಆಂಗ್ಲ ಮಾಧ್ಯಮದ ಪ್ರಭಾವದ ಜೊತೆಗೆ ಕನ್ನಡವನ್ನು ಉರ್ದುವಿನ ಮೂಲಕ ಕಲಿಯುತ್ತಿರುವುದು ಸ್ಪಷ್ಟವಾಗಿದೆ.

ಮನೆಮಾತು ಉರ್ದು, ಶಿಕ್ಷಣ ಮಾಧ್ಯಮದ ಭಾಷೆ ಇಂಗ್ಲಿಶ್ ಆಗಿದ್ದು, ತೃತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ಸಂದರ್ಭದಲ್ಲಿ ಬರವಣಿಗೆಯ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಉರ್ದು ಭಾಷಿಕರ ಕೆಲವು ಮಕ್ಕಳು ಕನ್ನಡ ಭಾಷೆಯನ್ನು ಅರ್ಥ ಮಾಡಿಕೊಳ್ಳುತ್ತಾರೆ. ಆದರೆ ಮಾತನಾಡಲು ಬರುವುದಿಲ್ಲ. ಕೆಲವರು ಅರ್ಥ ಮಾಡಿಕೊಂಡು ಮಾತನಾಡುತ್ತಾರೆ. ಆದರೆ ಓದಲು ಮತ್ತು ಬರೆಯಲು ಬರುವುದಿಲ್ಲ. ಕೆಲವರು ಓದುತ್ತಾರೆ. ಆದರೆ ಬರೆಯುವಲ್ಲಿ ಸಮಸ್ಯೆಗಳನ್ನು ಎದುರಿಸುತ್ತಾರೆ.

| **ಮೂಲ ರೂಪ** | **ಬರಹ ರೂಪ** |
|---|---|
| ಶಿಕ್ಷಕರು | ಶಿಕ್ಷಕರ |
| ಇದ್ದಾರೆ | ಇದರೆ |
| ಸುಂದರವಾಗಿದೆ | ಸುಂದರವಾಗಿದ್ದಾನೆ |
| ಶ್ರೀಮತಿ | ಮಿಸಸ್ |
| ಬಣ್ಣ | ರಂಗೆ |
| ಕೇಸರಿ | ಕೇಶರಿಯ |
| ಬಿಳಿ | ಸಫೇದ್ |
| ಹಸಿರು | ಹರಾ |
| ವೀರತ್ವ | ವೀರತಾ |

| | |
|---|---|
| ಪ್ರತೀಕವಾಗಿದೆ | ಪ್ರತೀಕ್ ಇದೆ |
| ನ್ಯಾಯ | ನಯಾಯ |
| ಅಶೋಕ | ಆಸೋಕ |
| ಪಾರ್ವತಿ | ಪಾರ್ವವತಿ |
| ಇದ್ದಾರೆ | ಇದೆ |
| ಆಟೋದಲ್ಲಿ | ಆಟೋಯಲ್ಲಿ |
| ಪಡುತ್ತೇನೆ | ಪಟ್ಟುತ್ತೇನೆ |
| ಮಾಡುತ್ತೆನ | ಮಾಡುತ್ತಾರೆ |

ಉರ್ದು ಭಾಷಿಕ ಮಕ್ಕಳು ಕನ್ನಡ ಬರವಣಿಗೆಯನ್ನು ಮಾಡುವಾಗ ವಿವಿಧ ಹಂತಗಳಲ್ಲಿ ವ್ಯತ್ಯಾಸ ಮಾಡುವರು.

- ಬರವಣಿಗೆಯ ಕ್ರಮದಲ್ಲಿನ ವ್ಯತ್ಯಾಸಗಳು
- ಒಂದು ಧ್ವನಿಗೆ ಮತ್ತೊಂದು ಧ್ವನಿಯನ್ನು ಬಳಕೆ ಮಾಡಿ ಬರೆಯುವುದು.
- ಆಡುಮಾತಿನ ರೂಪಗಳನ್ನು ಬರವಣಿಗೆಯಲ್ಲಿ ತರುವುದು
- ಗುಣಿತಾಕ್ಷರಗಳ ವ್ಯತ್ಯಾಸ ಮಾಡುವುದು
- ಒತ್ತಕ್ಷರಗಳಲ್ಲಿ ವ್ಯತ್ಯಾಸ ಮಾಡುವುದು.

ಹೀಗೆ ಪದಾದಿ, ಪದ ಮಧ್ಯ ಮತ್ತು ಪದಾಂತ್ಯದಲ್ಲಿ ಹ್ರಸ್ವ ಸ್ವರಕ್ಕೆ ದೀರ್ಘ ಸ್ವರವನ್ನು ಬಳಸಿರುವುದನ್ನು ಗಮನಿಸಬಹುದು. ಏಕ ವಚನಕ್ಕೆ ಬಹುವಚನ ಪ್ರತ್ಯಯಗಳನ್ನು ಬರೆದಿರುವುದು ಕಂಡು ಬಂದಿದೆ. ಬಣ್ಣಗಳ ಹೆಸರುಗಳಿಗೆ ಸಫೇದ್, ಹರಾ, ಕೇಸರಿ ಎಂದು ಉರ್ದು ಭಾಷೆಯ ಪದಗಳನ್ನು ಬಳಸಿರುತ್ತಾರೆ. ಇದಕ್ಕೆ ಕಾರಣಗಳೇಂದರೆ:

- ಅಕ್ಷರಗಳು ಹುಟ್ಟುವ ಸ್ಥಾನ ಮತ್ತು ವಿಧಾನ ಕುರಿತು ಸ್ಪಷ್ಟತೆ ಇಲ್ಲದೆ ಇರುವುದು.
- ಬವಣಿಗೆಯ ಅಭ್ಯಾಸದ ಕೊರತೆ
- ಹ್ರಸ್ವ ಸ್ವರ ಮತ್ತು ದೀರ್ಘ ಸ್ವರಗಳ ನಡುವಿನ ವ್ಯತ್ಯಾಸದ ಗ್ರಹಿಕೆ ಇಲ್ಲದಿರುವುದು.
- ಗುಣಿತಾಕ್ಷರಗಳ ಬರವಣಿಗೆ ಕ್ರಮದ ಪರಿಕಲ್ಪನೆ ತಿಳಿಯದಿರುವುದು.
- ಆಲಿಸುವಿಕೆಯಲ್ಲಿನ ದೋಷ

- ಆಂಗ್ಲ ಮಾಧ್ಯಮವಾದ್ದರಿಂದ ತೃತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವುದು ಒಂದು ಕಾರಣವಾಗಿದೆ.
- ಪದಗಳ ಬಳಕೆಯ ಖಚಿತತೆ ಇಲ್ಲದಿರುವುದು.

ಈ ಎಲ್ಲಾ ಸಮಸ್ಯೆಗಳನ್ನು ಬೋಧಕರು ಸೂಕ್ಷ್ಮವಾಗಿ ಗಮನಿಸಿ ಉರ್ದು ಭಾಷಿಕ ಮಕ್ಕಳ ಕನ್ನಡ ಕಲಿಕೆಯ ಸಮಯದಲ್ಲಿ ಹೆಚ್ಚಿನ ಗಮನವನ್ನು ನೀಡಬೇಕಾಗಿದೆ. ಸ್ವರ ಮತ್ತು ವ್ಯಂಜನಗಳ ಸ್ಪಷ್ಟ ಕಲ್ಪನೆಯನ್ನು ಮೂಡಿಸಬೇಕು. ಗುಣಿತಾಕ್ಷರಗಳ ಚಿಹ್ನೆಗಳ ಬರವಣಿಗೆಯ ಕ್ರಮವನ್ನು ಕಾಪಿ ಪುಸ್ತಕದಲ್ಲಿ ಬರೆಯಿಸಿ ಅಭ್ಯಾಸ ಮಾಡಿಸಬೇಕು. ಕನ್ನಡದ ಅಕ್ಷರಗಳು ಹುಟ್ಟುವ ಸ್ಥಾನ ಮತ್ತು ಕ್ರಮದ ಬಗೆಗೆ ಸ್ಪಷ್ಟತೆಯನ್ನು ನೀಡುವುದು. ಅಲ್ಪಪ್ರಾಣ ಮತ್ತು ಮಹಾಪ್ರಾಣ ಅಕ್ಷರಗಳ ನಡುವಿನ ವ್ಯತ್ಯಾಸವನ್ನು ತೋರಿಸಬೇಕು. ಮಾದರಿ ಬರಹವನ್ನು ಬರೆಯಿಸಬೇಕು. ಅನುನಾಸಿಕ, ಅನುಸ್ವರ ಲೋಪ ಮಾಡಿ ಓದುವುದನ್ನು ಗಮನಿಸಿ, ಅರ್ಥದಲ್ಲಾಗುವ ವ್ಯತ್ಯಾಸವನ್ನು ಸ್ಪಷ್ಟಪಡಿಸಿ ತಿದ್ದಿ ಹೇಳಬೇಕು. ಈ ರೀತಿಯಾಗಿ ಬೋಧಕರು ಉರ್ದು ಭಾಷಿಕ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳನ್ನು ಕಡಿಮೆ ಮಾಡಬೇಕು.

# ತಮಿಳು ಮಾತೃ ಭಾಷಾ ವಿದ್ಯಾರ್ಥಿಗಳ ಮಾದರಿ ಬರಹ

ಹೆಸರು : [illegible]
ತರಗತಿ : [illegible]
ಶಾಲೆ : [illegible]

[illegible]

**ವ್ಯಾಕರಣಾಂಶಗಳ ಪರೀಕ್ಷೆ**

**೧. ಈ ಕೆಳಗಿನ ಪದಗಳನ್ನು ಸ್ವಂತ ವಾಕ್ಯದಲ್ಲಿ ಬರೆಯಿರಿ**

೧. ಸುಂದರ : [illegible]

೨. ಬುದ್ಧಿವಂತ : ಅವನು ತುಂಬಾ ಬುದ್ಧಿವಂತ

೩. ಪ್ರವಾಸ : [illegible]

೪. ಪ್ರಾರ್ಥನೆ : [illegible]

೫. ಆಶ್ಚರ್ಯ : [illegible]

**೨. ಈ ಕೆಳಗಿನ ಪದಗಳನ್ನು ಬಿಡಿಸಿ ಬರೆಯಿರಿ**

೧. ಮಾತನ್ನು = ಮಾತೆ + ಅನ್ನು

೨. ನೆನಪಿರಲಿ = ನೆನಪಿ + ಇರಲಿ

೩. ಸಿರಿಗನ್ನಡ = ಸಿರಿ + ಕನ್ನಡ

೪. ಮನೆಯನ್ನು = ಮನೆ + ಅನ್ನು

೫. ದೇವಾಲಯ = ದೇವ + ಆಲಯ

**೩. ಈ ಕೆಳಗಿನವುಗಳಲ್ಲಿ ಲಿಂಗಗಳನ್ನು ಪಟ್ಟಿಮಾಡಿ**

ರಾಮ, ಗೋದಾವರಿ, ವಿಮಾನ, ಹನುಮ, ಶಾಲೆ, ಪಾರ್ವತಿ, ವಿವೇಕಾನಂದ, ಭವಾನಿ, ಮನೆ, ಸೀತೆ, ಕುದುರೆ, ವಾಣಿ, ರಾಜಶೇಖರ, ರೇಡಿಯೋ

| ಸ್ತ್ರೀಲಿಂಗ | ಪುಲ್ಲಿಂಗ | ನಪುಂಸಕಲಿಂಗ |
|---|---|---|
| ಪಾರ್ವತಿ | ರಾಮ | ಗೋದಾವರಿ |
| ಭವಾನಿ | ಹನುಮ | ವಿಮಾನ |
| ಸೀತೆ | ವಿವೇಕಾನಂದ | ಶಾಲೆ |
| ಕುದರೆ | ರಾಜಶೇಖರ | ಮನೆ |
| ವಾಣಿ | | ರೇಡಿಯೋ |

**೪. ಈ ಕೆಳಗಿನವುಗಳಲ್ಲಿ ಏಕವಚನ ಬಹುವಚನಗಳನ್ನು ಪಟ್ಟಿಮಾಡಿ.**

ಗಿಡಗಳು, ಪುಸ್ತಕ, ಅಕ್ಕ, ಪ್ರಾಣಿಗಳು, ನಾಯಿ, ಗಡಿಯಾರ, ಕಲ್ಲುಗಳು, ಆನೆ, ಕಾಲುಗಳು

| ಏಕವಚನ | ಬಹುವಚನಗಳು |
|---|---|
| ಪುಸ್ತಕ | ಗಿಡಗಳು |
| ಅಕ್ಕ | ಪ್ರಾಣಿಗಳು |
| ನಾಯಿ | ಕಲ್ಲುಗಳು |
| ಗಡಿಯಾರ | ಕಾಲುಗಳು |
| ಆನೆ | |

೫. ಈ ಕೆಳಗಿನ ಪದಗಳಲ್ಲಿನ ಕಾಲ ಪ್ರತ್ಯಯಗಳನ್ನು ತಿಳಿಸಿ

ಅ) ತಿಂದನು

ಆ) ಓದುತ್ತಾನೆ 9

ಇ) ಮಾಡುವನು

೬. ವಾಕ್ಯ ಸರಿಪಡಿಸಿ ಬರೆಯಿರಿ.

ಅ) ಭಾರತ ಜಯ ತನುಜಾತೆ ಜನನಿಯ

ಉತ್ತರ: ಭಾರತ ಜನನಿಯ ತನುಜಾತೆ ಜಯ

ಆ) ತಿಂದಿತು ಅಳಿಲು ಹಣ್ಣನ್ನು

ಉತ್ತರ: ಅಳಿಲು ಹಣ್ಣನ್ನು ತಿಂದಿತು.

ಇ) ಮಾಡಬೇಕು ಎಂದರು ಸಹಾಯ ಇನ್ನೊಬ್ಬರಿಗೆ ಜಿಲ್ಲಾಧಿಕಾರಿಗಳು

ಉತ್ತರ: ಜಿಲ್ಲಾಧಿಕಾರಿಗಳು ಇನ್ನೊಬ್ಬರಿಗೆ ಸಹಾಯ ಮಾಡಬೇಕು ಎಂದರು

ಈ) ಪ್ರವಾಸಕ್ಕೆ ದಿಲೀಪ ಮೈಸೂರಿಗೆ ಹೊರಟನು.

ಉತ್ತರ:- ದಿಲೀಪ್ ಪ್ರವಾಸಕ್ಕೆ ಮೈಸೂರಿಗೆ ಹೊರಟನು.

೭. ನಿಮ್ಮ ಕುಟುಂಬದಲ್ಲಿರುವ ಸದಸ್ಯರ ಹೆಸರುಗಳನ್ನು ಬರೆಯಿರಿ.

[illegible]

೮. ನಿಮ್ಮ ಶಾಲೆಯ ಕುರಿತು ಬರೆಯಿರಿ.

ನನಗೆ ನನ್ನ ಶಾಲೆ ಎಂದರೆ ತುಂಬಾ [illegible]

[illegible]

೯. ರಾಷ್ಟ್ರಧ್ವಜವನ್ನು ಕುರಿತು ಬರೆಯಿರಿ

[illegible] ಅಶೋಕ ಚಕ್ರವೆಂದು ಕರೆಯುತ್ತಾರೆ

ವಿದ್ಯಾರ್ಥಿಗಳ ಈ ಸ್ಕ್ಯಾನ್ ಮಾದರಿ ಬರಹವನ್ನು ಗಮನಿಸಿದಾಗ ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ 'ತಮಿಳು' ಭಾಷಿಕ ಮಕ್ಕಳ ಬರವಣಿಗೆಯ ಕ್ರಮ ಹೀಗಿದೆ.

"ನನ್ನಗೆ ಇಂದ್ರದಾನಸು ಬಾಹಳ ಸಂದರವಾಗಿ ವಿರುತ್ತದೆ. ಅವನು ತುಂಬಾ ಬುದ್ಧಿವಂತನ್ನು ನಾವು ನಮ್ಮ ಹೋಸ ಮನೆಯಲ್ಲಿ ಪ್ರವಾಸ ಮಾಡುತ್ತೇವೆ. ದೇವರಿಗೆ ಪ್ರಾರ್ಥನೆ ಮಾಡಿದರೆ ದೇವರು ನಮ್ಮಗೆ ಹೊಳ್ಳೆಯ ದಾರಿ ತೋರುಸುತಾನೆ. ನನ್ನಗೆ ನನ್ನ ಆಜ ಆಜಿ ಯನ್ನು ಕಂಡರು ತುಂಬಾ ಆಶ್ಚರ್ಯ." ಹೆಸರುಗಳನ್ನು ಬರೆಯುವಾಗ ವಿನ್ನಾಯ, ಅಂಬೀಕ, ವಾಸಂತ, ಮಣಂ, ಗಾಯತ್ರೀ ಎಂದು ಬರೆದಿರುವುದನ್ನು ಗಮನಿಸಬಹುದು. ಹೀಗೆ ತಮಿಳು ಮನೆ ಮಾತು ಇರುವ ವಿದ್ಯಾರ್ಥಿ ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ಕಲಿಯುವಾಗ ಬರವಣಿಗೆಯಲ್ಲಿ ಹಲವು ದೋಷಗಳನ್ನು ಎಸಗಿರುವುದನ್ನು ಕಾಣಬಹುದು.

| **ಮೂಲ ರೂಪ** | **ಬರಹ ರೂಪ** |
|---|---|
| ನನಗೆ | ನನ್ನಗೆ |
| ಇಂದ್ರಧನಸ್ಸು | ಇಂದ್ರದಾನಸು |
| ಹೊಸ | ಹೋಸ |
| ವಾಸಿಸುತ್ತೇವೆ | ಪ್ರವಾಸ ಮಡುತ್ತೇವೆ |
| ಬುದ್ಧಿವಂತನು | ಬುದ್ಧಿವಂತನ್ನು |
| ನಮಗೆ | ನಮ್ಮಗೆ |
| ಒಳ್ಳೆಯ | ಹೊಳ್ಳೆಯ |
| ಅಜ್ಜ | ಆಜ |
| ಅಜ್ಜಿ | ಆಜಿ |
| ಕಂಡರೆ | ಕಂಡರು |
| ವಿನಯ್ | ವಿನ್ನಾಯ |
| ಅಂಬಿಕ | ಅಂಬೀಕ |
| ವಸಂತ | ವಾಸಂತ |
| ಮಣಿ | ಮಣೀ |
| ಗಾಯಿತ್ರಿ | ಗಾಯತ್ರೀ |

ಎಂದು ದೋಷಯುಕ್ತವಾಗಿ ಬರೆದಿರುವುದನ್ನು ಸ್ವತಃ ಮಕ್ಕಳೇ ಬರೆದ ಮಾದರಿಯಲ್ಲಿ ಗಮನಿಸಲಾಗಿದೆ. ಈ ರೀತಿಯ ಸಮಸ್ಯೆಗಳಾಗಲು ಕಾರಣ ಮನೆ ಮಾತು ತಮಿಳು, ಶಿಕ್ಷಣ ಮಾಧ್ಯಮ ಇಂಗ್ಲಿಷ್ ಇವೆರಡರರ ಪ್ರಭಾವ ಕನ್ನಡ ಕಲಿಕೆಯ ಮೇಲೆ

ಬೀರಿರುವುದುನ್ನು ಗಮನಿಸಬಹುದು. ಮೂಲತಃ ತಮಿಳು ಮಾತನಾಡುವ ಮಗು ಶಾಲೆಯಲ್ಲಿ ತೃತೀಯ ಭಾಷೆಯಾಗಿ ಕನ್ನಡವನ್ನು ಕಲಿಯಬೇಕು. ಹೀಗೆ ಕನ್ನಡವನ್ನು ಕಲಿಯುವಾಗ ಮಾತೃ ಭಾಷೆ ಮತ್ತು ಮಾಧ್ಯಮದ ಭಾಷೆ ಅಡ್ಡಿಯನ್ನುಂಟು ಮಾಡುತ್ತದೆ.

ಸ್ವರ ಮತ್ತು ವ್ಯಂಜನಗಳ ಉಚ್ಚಾರಣಾ ದೋಷಗಳಿಂದ ಬರವಣಿಗೆಯಲ್ಲಿ ದೋಷಗಳಾಗಲು ಕಾರಣವಾಗಬಹುದು. 'ಇ' ಕಾರಕ್ಕೆ 'ವ'ಕಾರದ ಬಳಕೆ, ಹ್ರಸ್ವಸ್ವರಕ್ಕೆ ದೀರ್ಘ ಸ್ವರ, ಅಂಬೀಕ > ಅಂಬೀಕ, ಗುಣಿತಾಕ್ಷರ ದೋಷ ವಸಂತ >ವಾಸಂತ ಎಂದು ಬರೆದಿರುತ್ತಾರೆ. ಒಳ್ಳೆಯ > ಹೊಳ್ಳೆಯ, 'ಒ' ಸ್ವರ ಧ್ವನಿಗೆ ಬದಲಾಗಿ ಅವರ್ಗೀಯ ವ್ಯಂಜನ 'ಹೋ' ಕಾರವನ್ನು ಬಳಸಲಾಗಿದೆ. ಅಜ್ಜ–ಅಜ್ಜಿ, ಬದಲಾಗಿ ಆಜ>ಆಜಿ ಒತ್ತಕ್ಷರಗಳನ್ನು ಲೋಪ ಮಾಡಿ ಬರೆದಿರುವುದನ್ನು ಗಮನಿಸಬಹುದು. ಹ್ರಸ್ವ ಸ್ವರ 'ಅ' ಕ್ಕೆ ಬದಲಾಗಿ ಧೀರ್ಘ ಸ್ವರ 'ಆ' ಕಾರವನ್ನು ಬರೆದಿರುವುದು ಕಂಡು ಬರುತ್ತದೆ.

ಹೀಗೆ ತಮಿಳು ಮಾತೃ ಭಾಷೆ ವಿದ್ಯಾರ್ಥಿಗಳು ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವಾಗ ಹ್ರಸ್ವಸ್ವರ, ದೀರ್ಘಸ್ವರಗಳ ವ್ಯತ್ಯಾಸ ಗಮನಿಸದೆ ಹಾಗೂ ಒತ್ತಕ್ಷರಗಳನ್ನು ಲೋಪ ಮಾಡಿ ಬರೆದಿರುವುದನ್ನು ಕಾಣಬಹುದು. ಕಾರಣ ಪರಿಸರದಲ್ಲಿ ಬಳಸುವ ಭಾಷೆಯನ್ನು ಬರವಣಿಗೆಯ ಕ್ರಮದಲ್ಲಿ ಬಳಸುವುರು. 'ಇ' ಕಾರ ಮತ್ತು 'ವ' ಕಾರದ ವ್ಯತ್ಯಾಸ ತಿಳಿಯದಿರುವುದು. ಗುಣಿತಾಕ್ಷರಗಳನ್ನು ಬರೆಯುವ ಚಿಹ್ನೆಗಳ ಬಗ್ಗೆ ಸ್ಪಷ್ಟ ಕಲ್ಪನೆ ಇಲ್ಲದಿರುವುದು. ಆದ್ದರಿಂದ ಕನ್ನಡ ಭಾಷಾ ಬೋಧಕರು ಕನ್ನಡ ಕಲಿಸುವ ಸಮಯದಲ್ಲಿ ವರ್ಣಮಾಲೆ, ಗುಣಿತಾಕ್ಷರ, ಒತ್ತಕ್ಷರ ಇವುಗಳ ಕುರಿತ ಸ್ಪಷ್ಟ ಕಲ್ಪನೆಯನ್ನು ಮಾಡಿಸಬೇಕು. ಹೆಚ್ಚಿನ ಬರವಣಿಗೆಯ ಅಭ್ಯಾಸವನ್ನು ಮಾಡಿಸಬೇಕು. ಮಾದರಿ ಬರಹವನ್ನು ರೂಢಿ ಮಾಡಿಸಬೇಕು. ಪದಗಳ ರಚನೆ, ಬಳಕೆ ಕುರಿತು ವ್ಯತ್ಯಾಸಗಳನ್ನು ತಿದ್ದಿ ಹೇಳಬೇಕು. ಕನ್ನಡ ಕಲಿಯುವಂತೆ ಪ್ರೇರೇಪಿಸಬೇಕು. ಆಗ ಕನ್ನಡ ಕಲಿಯುವಲ್ಲಿ ಸಮಸ್ಯೆಗಳು ಕಡಿಮೆ ಆಗುತ್ತವೆ.

ಈ ರೀತಿಯಾಗಿ ಕನ್ನಡ ಮನೆ ಮಾತು, ತೆಲಗು ಮನೆ ಮಾತು, ಉರ್ದು ಮನೆ ಮಾತು ಮತ್ತು ತಮಿಳು ಮನೆ ಮಾತು ಇರುವ ವಿದ್ಯಾರ್ಥಿಗಳು ಆಂಗ್ಲ ಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುವಾಗ ಎದುರಿಸುತ್ತಿರುವ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ.

**೫.೩.೧ ನಾಮಪದ ಮತ್ತು ಕ್ರಿಯಾಪದಗಳಲ್ಲಿ ಮಾಡುವ ವ್ಯತ್ಯಾಸ**

| **ಬರಹ ರೂಪ** | **ಬರೆಯುವ ರೂಪ** |
|---|---|
| ದಿಲೀಪ ಮೈಸೂರಿಗೆ ಹೋದನು | ಮೈಸೂರಿಗೆ ದಿಲೀಪ ಹೋದ |
| ಗೀತಾ ಚಾಕುವಿನಿಂದ ಹಣ್ಣನ್ನು ಕತ್ತರಿಸಿದಳು | ಗೀತಾ ಹಣ್ಣು ಕತ್ತರಿಸಿತು. |
| ಅವರು ಪರೀಕ್ಷೆ ಬರೆದರು | ಅವರು ಪರೀಕ್ಷೆ ಬರೆದನು |
| ನಾವು ಪ್ರದಕ್ಷಿಣೆ ಮಾಡಿದೆವು | ನಾವು ಪ್ರದಕ್ಷಿಣೆ ಮಾಡಿದೆ. |

ವಿದ್ಯಾರ್ಥಿಗಳು ನಾಮಪದ ಮತ್ತು ಕ್ರಿಯಾ ಪದಗಳೆರಡರ ವ್ಯತ್ಯಾಸ ಒಂದೇ ಎಂದು ಗ್ರಹಿಸಿರುವುದನ್ನು ಗಮನಿಸಬಹುದು. ನಾಮಪದ ಮತ್ತು ಕ್ರಿಯಾಪದ ಪರಸ್ಪರ ಒಂದಕ್ಕೊಂದು ಸಂಬಂಧವನ್ನು ಹೊಂದಿರುತ್ತವೆ. ಆದರೆ ವಿದ್ಯಾರ್ಥಿಗಳು ನಾಮಪದಕ್ಕೆ ಸರಿಯಾದ ಕ್ರಿಯಾಪದವನ್ನು ಬಳಸದೇ ಇರುವುದನ್ನು ಕಾಣಬಹುದು. ಆಂಗ್ಲ ಭಾಷೆಯು ಅಡ್ಡಿಯನ್ನುಂಟು ಮಾಡುತ್ತದೆ. ಕ್ರಿಯಾಪದ ನಂತರ ನಾಮಪದ ಬಳಕೆಯನ್ನು ಕೆಲವೊಮ್ಮೆ ಆಂಗ್ಲ ವ್ಯಾಕರಣದಲ್ಲಿ ಮಾಡುತ್ತಾನೆ. ನಾಮಪದ ಮತ್ತು ಕ್ರಿಯಾಪದ ಸ್ಪಷ್ಟ ಪರಿಜ್ಞಾನ ಇಲ್ಲದಿರುವುದರಿಂದ ವಿದ್ಯಾರ್ಥಿಗಳು ವ್ಯತ್ಯಾಸ ಮಾಡಿ ಬರೆದಿರುವುದನ್ನು ಉದಾಹರಣೆಗಳ ಮೂಲಕ ಗಮನಿಸಬಹುದು.

**೫.೩.೨ ಕರ್ತೃ, ಕರ್ಮ, ಕ್ರಿಯಾಪದಗಳ ಸಮಸ್ಯೆ**

| **ಬರಹ ರೂಪ** | **ಬರೆಯುವ ರೂಪ** |
|---|---|
| ೧. ಮಹೇಶನು ಹಾಡನ್ನು ಹಾಡಿದನು | ಹಾಡನು ಹಾಡಿದ ಮಹೇಶ |
| ೨. ಅಳಿಲು ಹಣ್ಣನ್ನು ತಿಂದಿತು | ಹಣ್ಣನ್ನು ತಿಂದಿತು ಅಳಿಲು |
| ೩. ಜಿಲ್ಲಾಧಿಕಾರಿಗಳು ಇನ್ನೊಬ್ಬರಿಗೆ ಸಹಾಯ ಮಾಡಬೇಕೆಂದರು | ಜಿಲ್ಲಾಧಿಕಾರಿಗಳು ಸಹಾಯ ಮಾಡಬೇಕು ಎಂದರು ಇನ್ನೊಬ್ಬರಿಗೆ |
| ೪. ದಿಲೀಪನು ಮೈಸೂರಿಗೆ ಹೋದನು | ಹೋದ ದಿಲೀಪ ಮೈಸೂರಿಗೆ |

ಒಂದು ಉತ್ತಮವಾದ ವಾಕ್ಯವೆನಿಸಲು ಆ ವಾಕ್ಯದಲ್ಲಿ ಕರ್ತೃ, ಕರ್ಮ ಕ್ರಿಯಾಪದಗಳು ಸರಿಯಾದ ಕ್ರಮದಲ್ಲಿ ಬಳಕೆಯಾಗಿರಬೇಕು. ಆದರೆ ವಿದ್ಯಾರ್ಥಿಗಳು ಆಂಗ್ಲ ಮಾಧ್ಯಮದಲ್ಲಿ ಕನ್ನಡ ಭಾಷೆಯನ್ನು ಕಲಿಯುತ್ತಿರುವುದರಿಂದ ಕರ್ತೃ ಮತ್ತು ಕ್ರಿಯಾಪದಕ್ಕೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುತ್ತ ಕರ್ಮ ಪದವನ್ನು ನಂತರದಲ್ಲಿ ಬಳಸುವುದನ್ನು ಗಮನಿಸಬಹುದು. ಹಿರಿಯ ಪ್ರಾಥಮಿಕ ಶಾಲಾ ವಿದ್ಯಾರ್ಥಿಗಳು ಸರಿಯಾಗಿ ಗುರುತಿಸದೇ ಬರೆಯುತ್ತಾರೆ.

ಕರ್ತೃವಿನ ಸ್ಥಾನದಲ್ಲಿ ಕ್ರಿಯಾಪದ, ಕ್ರಿಯಾಪದದ ಸ್ಥಾನದಲ್ಲಿ ಕರ್ತೃ ಪದ, ಕರ್ಮಪದದ ಸ್ಥಾನದಲ್ಲಿ ಕ್ರಿಯಾಪದವನ್ನು ಬಳಸಿ ಬರೆದಿರುವುದು ಕಂಡು ಬರುತ್ತದೆ. ಇದಕ್ಕೆ ಕಾರಣ ವಿದ್ಯಾರ್ಥಿಗಳಿಗೆ ಪ್ರತ್ಯಯಗಳ ಗ್ರಹಿಕೆ ಇಲ್ಲದಿರುವುದು ಹಾಗೂ ಕರ್ತೃ ಕರ್ಮ, ಕ್ರಿಯಾಪದಗಳ ಬಗ್ಗೆ ಸ್ಪಷ್ಟವಾದ ಪರಿಕಲ್ಪನೆ ಇಲ್ಲದಿರುವುದಾಗಿದೆ.

೧. ಒಂದು ಪ್ರತ್ಯಯಕ್ಕೆ ಬೇರೊಂದು ಪ್ರತ್ಯಯದ ಬಳಕೆ ವಿದ್ಯಾರ್ಥಿಗಳು ವಾಕ್ಯರಚನೆ ಮಾಡುವಾಗ ಒಂದು ಪ್ರತ್ಯಯಕ್ಕೆ ಬೇರೊಂದು ಪ್ರತ್ಯಯ ಬಳಸಿ ವಾಕ್ಯ ರಚನೆ ಮಾಡುವುದನ್ನು ಗಮನಿಸಬಹುದು.

| ಬರಹ ರೂಪ | ಬರೆಯುವ ರೂಪ |
|---|---|
| ೧. ಮಲ್ಲಿಗೆ ಕನಕಾಂಬರ, ದಾಸವಾಳ ಬೆಳೆಯುತ್ತೇವೆ. | ಮಲ್ಲಿಗೆ, ಕನಕಾಂಬರ ದಾಳವಾಳ ಬೆಳೆದೆವು |
| ೨. ನಾನು ಸಂಜೆ ದೇವಾಲಯಕ್ಕೆ ಹೋಗುತ್ತೇನೆ. | ನಾವು ಸಂಜೆ ದೇವಾಲಯದಲ್ಲಿ ಹೋಗುತ್ತೇವೆ. |
| ೩. ಸೂರ್ಯ ಬೆಳಕನ್ನು ಕೊಡುತ್ತಾನೆ. | ಸೂರ್ಯ ಬೆಳಕು ಕೊಡುತ್ತದೆ. |
| ೪. ಮರದಿಂದ ಹಣ್ಣು ಬಿದ್ದಿತು | ಮರಕ್ಕೆ ಹಣ್ಣು ಬಿದ್ದಿತು. |
| ೫. ವಾಣಿ ಪಾಠವನ್ನು ಓದಿದಳು | ವಾಣಿ ಪಾಠ ಓದಿದನು |
| ೬. ರಾಮನು ಹಣ್ಣನ್ನು ತಿಂದನು | ರಾಮ ಹಣ್ಣು ತಿಂದ |

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ವಿದ್ಯಾರ್ಥಿಗಳಿಗೆ ಪ್ರತ್ಯಯಗಳ ಬಗ್ಗೆ ಸ್ಪಷ್ಟವಾದ ತಿಳುವಳಿಕೆ ಇಲ್ಲದಿರುವುದು ಕಂಡು ಬರುತ್ತದೆ. ಒಂದು ಪ್ರತ್ಯಯಕ್ಕೆ ಮತ್ತೊಂದು ಪ್ರತ್ಯಯವನ್ನು ಬಳಸಿರುವುದನ್ನು ಗಮನಿಸಬಹುದು. ಹೀಗೆ ಒಂದು ಪ್ರಯತ್ನಕ್ಕೆ ಬದಲಾಗಿ ಮತ್ತೊಂದು ಪ್ರತ್ಯಯವನ್ನು ಬಳಸಲು ಮಾಧ್ಯಮದ ಪ್ರಭಾವವಿದೆ. ವಿದ್ಯಾರ್ಥಿಗಳು ತರಗತಿಯಲ್ಲಿ ಮಾತನಾಡದಿರುವುದೇ ಕಾರಣ. ಕನ್ನಡ ಬೋಧನಾ ಅವಧಿಯಲ್ಲಿ ಮಾತ್ರ ಕನ್ನಡವನ್ನು ಮಾತನಾಡುವುದನ್ನು ಗಮನಿಸಲಾಗಿದೆ. ಆದ್ದರಿಂದ ಈ ರೀತಿಯ ವಾಕ್ಯ ರಚನಾ ದೋಷಗಳ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

**೫.೩.೩ ವಚನ, ಲಿಂಗ ಕಾಲ, ಪ್ರತ್ಯಯಗಳಲ್ಲಿ ವ್ಯತ್ಯಾಸ**

**ವಚನ :**

ಕನ್ನಡ ಭಾಷೆಯಲ್ಲಿ ವಚನ ಎಂದರೆ ಸಂಖ್ಯೆ, ವ್ಯಕ್ತಿ, ವಸ್ತು ಮತ್ತು ಪ್ರಾಣಿ ಮೊದಲಾದ ನಾಮಪದಗಳ ಸಂಖ್ಯೆಯನ್ನು ಸೂಚಿಸುವುದಕ್ಕೆ ವಚನ ಎನ್ನುವರು. ಅಂಥ

ಸಮಯದಲ್ಲಿ ವಸ್ತು ಅಥವಾ ವ್ಯಕ್ತಿ ಒಂದಾಗಿದ್ದರೆ ಅಂಥವನ್ನು ಏಕವಚನ, ಎರಡು ಅದಕ್ಕಿಂತ ಹೆಚ್ಚಾಗಿದ್ದರೆ ಬಹುವಚನ ಎನ್ನುತ್ತೇವೆ. ಆಂಗ್ಲ ಭಾಷೆಯ ಪ್ರಭಾವದಿಂದ ವಿದ್ಯಾರ್ಥಿಗಳು ಏಕವಚನವನ್ನು ಬಹುವಚನವಾಗಿ, ಬಹುವಚನವನ್ನು ಏಕವಚನ ಪದಗಳಾಗಿ ಬರೆಯುವ ವ್ಯತ್ಯಾಸಗಳನ್ನು ಇಲ್ಲಿ ಗಮನಿಸಬಹುದು.

| **ಬರಹ ರೂಪ** | **ಬರೆಯುವ ರೂಪ** |
|---|---|
| ರಮೇಶ ಹಣ್ಣನ್ನು ತಿಂದನು | ರಮೇಶ ಹಣ್ಣುಗಳನ್ನು ತಿಂದನು |
| ಇವರು ಊರಿಗೆ ಬಂದರು | ಇವರು ಊರಿಗೆ ಬಂದ |
| ನಾನು ಊಟ ಮಾಡಿದೆ | ನಾವು ಊಟ ಮಾಡಿದೆವು |

ವಿದ್ಯಾರ್ಥಿಗಳು ಏಕವಚನಕ್ಕೆ ಬಹುವಚನ, ಬಹುವಚನಕ್ಕೆ ಏಕವಚನ ಬಳಸಿರುವುದನ್ನು ಗಮನಿಸಬಹುದು. ಕಾರಣ ವಚನಗಳ ಪರಿಕಲ್ಪನೆಯ ಬಗ್ಗೆ ತಿಳುವಳಿಕೆ ಇಲ್ಲದಿರುವುದು. ಆಲಿಸುವಿಕೆಯಲ್ಲಿ ನಿರಾಸಕ್ತಿಯೂ ಒಂದು ಕಾರಣವಾಗಿದೆ. ಆಂಗ್ಲ ಭಾಷೆಯ ಸಿಂಗ್ಯೂಲರ್ ಮತ್ತು ಪ್ಲೂರಲ್‌ಗೆ 'ಎಸ್' ಅನ್ನು ಸೇರಿಸುತ್ತಾರೆ. ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ವಾಕ್ಯ ಓದುವಾಗ ಏಕವಚನ ಮತ್ತು ಬಹುವಚನದ ಸ್ಪಷ್ಟತೆ ಇಲ್ಲದಿರುವುದು ಕಂಡು ಬರುತ್ತದೆ. ಏಕವಚನ ಮತ್ತು ಬಹುವಚನಗಳ ವ್ಯತ್ಯಾಸವಿದೆ. ಹಣ್ಣು-ಹಣ್ಣುಗಳು, ಬಂದರು-ಬಂದ, ನಾನು-ನಾವು, ಮಾಡಿದೆ-ಮಾಡಿದೆವು ಎಂದು ಬಳಸಿರುವುದನ್ನು ಗಮನಿಸಬಹುದು.

**ಲಿಂಗ ವಿಚಾರ :**

ಬುದ್ಧಿಯುಕ್ತವಾದವುಗಳನ್ನು ಪುರುಷ, ಸ್ತ್ರೀ, ವಾಚಕಗಳಿಗನುಗುಣವಾಗಿ ಪುಲ್ಲಿಂಗ, ಸ್ತ್ರೀಲಿಂಗ ಮಾಡಿ ಬುದ್ಧಿರಹಿತವಾದ ಉಳಿದೆಲ್ಲವುಗಳನ್ನು ನಪುಂಸಕದಲ್ಲಿಯೇ ಸೇರಿಸಬೇಕೆಂಬುದು ವ್ಯಾಕರಣಕಾರರ ಮತವಾಗಿದೆ. ಆದ್ದರಿಂದ ಮನುಷ್ಯನಲ್ಲಿ ಗಂಡಸರನ್ನು ಸೂಚಿಸುವ ಪದಕ್ಕೆ ಪುಲ್ಲಿಂಗ, ಹೆಂಗಸರನ್ನು ಸೂಚಿಸುವ ಪದಕ್ಕೆ ಸ್ತ್ರೀಲಿಂಗ ಎಂದು ಮನುಷ್ಯರನ್ನು ಬಿಟ್ಟು ಉಳಿದ ನಿರ್ಜೀವ, ಸಜೀವ, ವಸ್ತುಗಳನ್ನು ನಪುಂಸ ಲಿಂಗ ಎಂದು ಕರೆಯುತ್ತೇವೆ.

| **ಬರಹ ರೂಪ** | **ಬರೆಯುವ ರೂಪ** |
|---|---|
| ಸುಮ ದೇವಾಲಯಕ್ಕೆ ಹೋಗುತ್ತಾಳೆ | ಸುಮ ದೇವಾಲಯಕ್ಕೆ ಹೋಗುತ್ತಾನೆ |
| ಶಿಕ್ಷಕರು ಪಾಠ ಮಾಡುತ್ತಾರೆ | ಶಿಕ್ಷಕರು ಪಾಟ ಮಾಡುತ್ತವೆ |
| ಗಿರೀಶನು ಓಟದಲ್ಲಿ ಗೆದ್ದನು | ಗಿರೀಶನು ಓಟದಲ್ಲಿ ಗೆದ್ದಳು |
| ಆದ್ಯ ಹಾಲನ್ನು ಕುಡಿದಳು | ಆದ್ಯ ಹಾಲು ಕುಡಿತು |

ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ತರಗತಿಯಲ್ಲಿ ವಿದ್ಯಾರ್ಥಿಗಳು ಹೆಚ್ಚಾಗಿ ಬಳಸುವ ಆಂಗ್ಲ ಭಾಷೆಯ ಪ್ರಭಾವವನ್ನು ವ್ಯಾಕರಚನಾ ಸಂದರ್ಭದಲ್ಲಿ ಗಮನಿಸಬಹುದು. ಸ್ತ್ರೀಲಿಂಗಕ್ಕೆ ಪುಲ್ಲಿಂಗ ಪದಗಳನ್ನು, ನಪುಂಸಕ ಲಿಂಗದ ಪದಗಳನ್ನು ಬಳಸಿರುವುದನ್ನು ಗಮನಿಸಬಹುದು. ವಿದ್ಯಾರ್ಥಿಗಳಿಗೆ ಲಿಂಗ ಪ್ರತ್ಯಯಗಳನ್ನು ಗುರುತಿಸುವ ತಿಳುವಳಿಕೆ ಇಲ್ಲದಿರುವುದು. ಈ ರೀತಿಯ ವ್ಯತ್ಯಾಸಗಳಾಗಲು ಕಾರಣವಾಗಿದೆ.

**ಕಾಲ ಪ್ರತ್ಯಯಗಳ ವಿಚಾರ :**

ವಿದ್ಯಾರ್ಥಿಗಳು ಕ್ರಿಯಾಪದಕ್ಕೆ ಹತ್ತುವ ಕಾಲ ಪ್ರತ್ಯಯಗಳಲ್ಲಿ ವ್ಯತ್ಯಾಸ ಮಾಡುವುದನ್ನು ಗಮನಿಸಬಹುದು. ಕಾಲ, ಪ್ರತ್ಯಯಗಳಾದ ಭೂತ, ಭವಿಷತ್, ವರ್ತಮಾನ ಕಾಲದ ಪ್ರತ್ಯಯಗಳಿಂದ 'ಉತ್ತ' ವರ್ತಮಾನ ಕಾಲ 'ದ' ಎಂಬುದು ಭೂತಕಾಲ, 'ವ' ಎಂಬುದು ಭವಿಷ್ಯತ್ ಕಾಲದ ಪ್ರತ್ಯಯಗಳಾಗಿವೆ. ಇವುಗಳ ಗ್ರಹಿಕೆ ಇಲ್ಲದಿರುವುದೇ ವಿದ್ಯಾರ್ಥಿಗಳು ವಾಕ್ಯರಚನೆಯಲ್ಲಿ ಸಮಸ್ಯೆಗಳನ್ನು ಎದುರಿಸಲು ಕಾರಣವಾಗಿದೆ.

| **ಬರಹ ರೂಪ** | **ಬರೆಯುವ ರೂಪ** |
|---|---|
| ರಾತ್ರಿ ತಂದೆ ಊಟವನ್ನು ಮಾಡಿದನು | ರಾತ್ರಿ ತಂದೆ ಊಟವನ್ನು ಮಾಡುತ್ತಾನೆ |
| ಹುಡುಗ ಪುಸ್ತಕವನ್ನು ಓದಿದನು | ಹುಡುಗ ಪುಸ್ತಕವನ್ನು ಓದುವುದು. |
| ಮಗು ಹಾಲನ್ನು ಕುಡಿಯುತ್ತಾನೆ. | ಮಗು ಹಾಲನ್ನು ಕುಡಿಯಿತು |
| ರಾಮ ಪೇಟೆಗೆ ಹೋಗುವನು | ರಾಮು ಪೇಟೆಗೆ ಹೋದನು |

ಮೇಲಿನ ಉದಾಹರಣೆಗಳನ್ನು ಗಮನಿಸಿದರೆ ವಿದ್ಯಾರ್ಥಿಗಳಿಗೆ ಭೂತ, ಭವಿಷ್ಯತ್ ಮತ್ತು ವರ್ತಮಾನದ ಪರಿಕಲ್ಪನೆಯ ತಿಳುವಳಿಕೆ ಅಸ್ಪಷ್ಟವಾಗಿರುವುದು ಕಂಡು ಬರುತ್ತದೆ. ಭೂತ ಕಾಲಕ್ಕೆ ವರ್ತಮಾನ ಕಾಲ, ವರ್ತಮಾನ ಕಾಲಕ್ಕೆ ಭವಿಷ್ಯತ್ ಕಾಲದ ಪ್ರತ್ಯಯಗಳನ್ನು ಬಳಸಿರುವುದನ್ನು ಗಮನಿಸಬಹುದು.

ಒಟ್ಟಾರೆಯಾಗಿ ಆಂಗ್ಲಮಾಧ್ಯಮ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳಿಗೆ ವಾಕ್ಯ ರಚನಾ ನಿಯಮಗಳ ತಿಳುವಳಿಕೆ ಪರಿಣಾಮಕಾರಿಯಾಗಿ ಇರುವುದಿಲ್ಲ ಎನ್ನುವುದನ್ನು ಗಮನಿಸಬಹುದು. ವಿದ್ಯಾರ್ಥಿಗಳು ವಾಕ್ಯರಚನೆಯಲ್ಲಿ ಸಂಪೂರ್ಣವಾಗಿ ವಾಕ್ಯವನ್ನು ಮಾಡದೇ ಅಪೂರ್ಣವಾಗಿ ವಾಕ್ಯ ರಚನೆ ಮಾಡಿರುವುದನ್ನು ಗಮನಿಸಬಹುದು. ನಾಮಪದ, ಕ್ರಿಯಾಪದ, ಕರ್ತೃ, ಕರ್ಮ, ಕ್ರಿಯಾಪದ, ವಚನ, ಲಿಂಗ, ಕಾಲ ಪ್ರತ್ಯಯಗಳ ಸ್ಪಷ್ಟವಾದ ತಿಳುವಳಿಕೆಯಿಲ್ಲದಿರುವುದನ್ನು ಅಧ್ಯಯನದಲ್ಲಿ ಗಮನಿಸಲಾಗಿದೆ. ಇದಕ್ಕೆ ಕಾರಣ ಮತ್ತು ಪರಿಹಾರಗಳನ್ನು ಸೂಚಿಸಲಾಗಿದೆ.

ವಿದ್ಯಾರ್ಥಿಗಳಿಗೆ ಬೋಧಿಸುವ ಸಂದರ್ಭದಲ್ಲಿ ಕನ್ನಡ ಭಾಷಾ ಶಿಕ್ಷಕರು ವ್ಯಾಕರಣಾಂಶಗಳ ಬಗ್ಗೆ ಸ್ಪಷ್ಟವಾದ ಮಾಹಿತಿಯನ್ನು ಹೊಂದಿದ್ದು, ವ್ಯಾಕರಣಾಂಶಗಳ ಪರಿಕಲ್ಪನೆಗಳನ್ನು ಬಿಡಿ ಬಿಡಿಯಾಗಿ ವಿವರಿಸಬೇಕು. ವಾಕ್ಯ ರಚನಾ ನಿಯಮಗಳನ್ನು ತಿಳಿಸಿ ಬರವಣಿಗೆಯ ಕೌಶಲವನ್ನು ಬೆಳೆಸಬೇಕು. ನೋಡಿ ಬರೆಯುವ ವಿಧಾನ, ಕಾಪಿ (ನಕಲು ಮಾಡುವ) ವಿಧಾನವನ್ನು ಅಳವಡಿಸಿ ಬರವಣಿಗೆಯನ್ನು ವೃದ್ಧಿಸಬೇಕು.

ವಾಕ್ಯರಚನಾ ಸಂದರ್ಭದಲ್ಲಿ ಸರಳವಾದ ವಾಕ್ಯಗಳನ್ನು ಓದಿಸಿ ಬರೆಯಿಸುವ ಸಾಮರ್ಥ್ಯವನ್ನು ಬೆಳೆಸಬೇಕು. ಶಿಕ್ಷಕರು ವಿದ್ಯಾರ್ಥಿಗಳು ಕಲಿತರೆ ಕಲಿಯಲಿ, ಬಿಟ್ಟರೆ ಬಿಡಲಿ ಎಂಬ ಮನೋಭಾವನೆಯಿಲ್ಲದೆ, ಎಲ್ಲ ವಿದ್ಯಾರ್ಥಿಗಳ ಬಗ್ಗೆ ವೈಯಕ್ತಿಕ ಆಸಕ್ತಿ ಗಮನ ತೋರಿಸಬೇಕು. ಶಿಕ್ಷಕರು ವಾಕ್ಯದಲ್ಲಿ ಬರುವ ನಾಮಪದ, ಕ್ರಿಯಾಪದಗಳ ಸ್ಪಷ್ಟ ತಿಳುವಳಿಕೆಯನ್ನು ಇಡಿಯಾಗಿ ಹೇಳಿ ಮತ್ತು ಬಿಡಿ ಬಿಡಿಯಾಗಿ ವಿವರಿಸಿ ಬರೆಯಿಸಬೇಕು.

- ವಚನ, ಲಿಂಗ, ವ್ಯತ್ಯಾಸಗಳನ್ನು ಮನವರಿಕೆ ಮಾಡಿಸಬೇಕು. ಹೆಚ್ಚು ಹೆಚ್ಚು ಉದಾಹರಣೆಗಳನ್ನು ನೀಡುವುದರ ಮೂಲಕ ಚಟುವಟಿಕೆಯಿಂದ ಬೋಧಿಸಬೇಕು.
- ವಾಕ್ಯ ರಚನೆಯಲ್ಲಿ ಬರುವ ಕರ್ತೃ, ಕರ್ಮ, ಕ್ರಿಯಾ ಪದಗಳ ಬಗ್ಗೆ ಪ್ಲಾಶ್‌ಕಾರ್ಡ್ಸ್‌ನ್ನು ಬಳಸಿ, ಇತರೆ ಬೋಧನೋಪಕರಣಗಳನ್ನು ಬಳಸಿ ಬೋಧಿಸಬೇಕು.
- ಯಾವ ಪ್ರತ್ಯಯಗಳನ್ನು ಎಲ್ಲಿ ಹೇಗೆ ಬಳಸಬೇಕು ಎನ್ನುವುದರ ಕುರಿತು ತಿಳಿಸಬೇಕು. ವಿದ್ಯಾರ್ಥಿಗಳನ್ನು ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವುದರ ಮೂಲಕ ಪರಿಕಲ್ಪನೆಗಳನ್ನು ಸ್ಪಷ್ಟಪಡಿಸಬೇಕು.
- ಭಾಷಾಭ್ಯಾಸದಲ್ಲಿ ಕೊಟ್ಟಿರುವ ಚಟುವಟಿಕೆಗಳನ್ನು ಮಾಡಿಸಬೇಕು. ಆಗಿಂದಾಗ್ಗೆ ಅವುಗಳನ್ನು ಮೌಲ್ಯಮಾಪನ ಮಾಡಿ ದೋಷಗಳನ್ನು ತಿದ್ದಿ ಹೇಳಬೇಕು.
- ಭಾಷಾ ಆಟಗಳನ್ನು ರಚಿಸಿ ವಿದ್ಯಾರ್ಥಿಗಳನ್ನು ವಿವಿಧ ಚಟುವಟಿಕೆಯಲ್ಲಿ ಪಾಲ್ಗೊಳ್ಳುವಂತೆ ಮಾಡಿ ವ್ಯಾಕರಣಾಂಶಗಳನ್ನು ಸ್ಪಷ್ಟೀಕರಿಸಬೇಕು.
- ಫ್ಲಾಶ್‌ಕಾರ್ಡ್, ಬೋಧನೋಪಕರಣಗಳು, ದೃಕ್-ಶ್ರವಣೋಪಕರಣಗಳನ್ನು ಬಳಸಿ ಕೊಂಡು ಆಸಕ್ತಿದಾಯಕವಾಗಿ ಕಲಿಸಿದಾಗ ಕಲಿಕೆ ಉತ್ತಮವಾಗುತ್ತದೆ.

ಈ ರೀತಿಯಾಗಿ ಕನ್ನಡ ಭಾಷಾ ಕಲಿಕೆಯಲ್ಲಿ ಆಂಗ್ಲಮಾಧ್ಯಮದ ಹಿರಿಯ ಪ್ರಾಥಮಿಕ ಶಾಲೆಗಳ ವಿದ್ಯಾರ್ಥಿಗಳಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಓದುವಾಗ, ಬರೆಯುವಾಗ ಮತ್ತು ವಾಕ್ಯರಚನೆ ಮಾಡುವಾಗ ಕನ್ನಡ ಭಾಷೆ ಕಲಿಯುತ್ತಿರುವ ಮಕ್ಕಳಿಗಿಂತ

ಹೆಚ್ಚಾಗಿರುವುದನ್ನು ಗಮನಿಸಲಾಗಿದೆ. ಪ್ರಥಮ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ಮಕ್ಕಳಿಗಿಂತ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಗಮನಿಸಬಹುದು. ಪ್ರಥಮ ಭಾಷೆಯಾಗಿ ಆಂಗ್ಲ ಭಾಷೆಯನ್ನು ಐದು ವಿಷಯಗಳಾಗಿ ಕಲಿಯುತ್ತಿರುವ ವಿದ್ಯಾರ್ಥಿಗಳು ಒಂದು ಅವಧಿಯಲ್ಲಿ ಒಂದು ವಿಷಯವನ್ನಾಗಿ ಕನ್ನಡವನ್ನು ಕಲಿಯುತ್ತಾರೆ. ಕನ್ನಡ ಕಲಿಸುವ ಶಿಕ್ಷಕರ ಧೋರಣೆ ಕನ್ನಡ ಕಲಿಯುವ ವಿದ್ಯಾರ್ಥಿಗಳ ಆಸಕ್ತಿ, ಆಂಗ್ಲ ಮಾಧ್ಯಮ ಶಿಕ್ಷಣ ಸಂಸ್ಥೆಗಳ ಧೋರಣೆ, ಪೋಷಕರ ನಿಲುವು, ಕನ್ನಡಪರವಾಗಿಲ್ಲ ಎಂಬುದನ್ನು ಗಮನಿಸಬಹುದು. ಒಂದು ವಿಷಯವಾಗಿ ಪರೀಕ್ಷೆಯಲ್ಲಿ ಅಂಕಗಳನ್ನು ಪಡೆದು ಉತ್ತೀರ್ಣರಾದರೆ ಸಾಕು ಎನ್ನುವ ಮನೋಭಾವನೆಯನ್ನು ಬದಲಾಯಿಸಬೇಕಾಗಿದೆ. ಕನ್ನಡ ಕಲಿಕೆಯ ಮೇಲೆ ಆಂಗ್ಲಮಾಧ್ಯಮದ ಪ್ರಭಾವವಿದೆ ಹಾಗೂ ಅನ್ಯ ಮಾತೃಭಾಷೆಗಳಾದ ತೆಲುಗು, ಉರ್ದು, ತಮಿಳು, ಮರಾಠಿ ಭಾಷೆಗಳು ಪ್ರಭಾವ ಬೀರುತ್ತಿವೆ ಎಂಬುದನ್ನು ಗಮನಿಸಲಾಗಿದೆ. ಕನ್ನಡವನ್ನು ಒಂದು ವಿಷಯವನ್ನಾಗಿ ಕಲಿಯುತ್ತಿರುವ ಪ್ರಸ್ತುತ ದಿನಮಾನಗಳಲ್ಲಿ ಕನ್ನಡ ಕಲಿಕೆಯ ಮೇಲೆ ಆಂಗ್ಲ ಮಾಧ್ಯಮದ ಪ್ರಭಾವವಿದೆ ಎಂಬುದನ್ನು ವಿದ್ಯಾರ್ಥಿಗಳ ಓದುಗಾರಿಕೆ, ಬರವಣಿಗೆ ಮತ್ತು ವಾಕ್ಯರಚನಾ ಸಮಸ್ಯೆಗಳ ಅಧ್ಯಯನದಿಂದ ವಿಶ್ಲೇಷಿಸಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಕೊಂಗವಾಡ ಎನ್.ಬಿ., ಭಾಷೆ ಮತ್ತು ಕನ್ನಡ ಬೋಧನೆ, ೨೦೦೫, ವಿದ್ಯಾನಿಧಿ ಪ್ರಕಾಶನ ಗದಗ, ಪು.೩೫.

೨. ಓಬಳೇಶಘಟ್ಟಿ ಆರ್., ಭಾಷೆ ಮತ್ತು ಕನ್ನಡ ಬೋಧನೆ, ೨೦೦೫, ವಿದ್ಯಾನಿಧಿ ಪ್ರಕಾಶನ, ಗದಗ, ಪು.೧೩.

೩. ಕೊಂಗವಾಡ ಎನ್.ಬಿ., ಭಾಷೆ ಮತ್ತು ಕನ್ನಡ ಬೋಧನೆ, ೨೦೦೫, ವಿದ್ಯಾನಿಧಿ ಪ್ರಕಾಶನ ಗದಗ, ಪು.೩೯.

೪. ನಾಗರಾಜ ಚಿಂತ್ರಪಳ್ಳಿ., ಕನ್ನಡ ಕಲಿಕೆಯ ಸಮಸ್ಯೆಗಳು ೨೦೧೦, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯೫.

೫. ಕೊಂಗವಾಡ ಎನ್.ಬಿ., ಭಾಷೆ ಮತ್ತು ಕನ್ನಡ ಬೋಧನೆ, ೨೦೦೫, ವಿದ್ಯಾನಿಧಿ ಪ್ರಕಾಶನ ಗದಗ, ಪು.೪೫.

೬. ಓಬಳೇಶಘಟ್ಟಿ ಆರ್., ಭಾಷೆ ಮತ್ತು ಕನ್ನಡ ಬೋಧನೆ, ೨೦೦೫, ವಿದ್ಯಾನಿಧಿ ಪ್ರಕಾಶನ, ಗದಗ, ಪು.೧೫೯.

೭. ಕೊಂಗವಾಡ ಎನ್.ಬಿ., ಭಾಷೆ ಮತ್ತು ಕನ್ನಡ ಬೋಧನೆ, ೨೦೦೫, ವಿದ್ಯಾನಿಧಿ ಪ್ರಕಾಶನ ಗದಗ, ಪು.೫೧.

೮. ಕೆಂಪೇಗೌಡ ಕೆ, ಸಾಮಾನ್ಯ ಭಾಷಾವಿಜ್ಞಾನ, ೧೯೯೬, ಪ್ರಸಾರಾಂಗ ಮಾನಸ ಗಂಗೋತ್ರಿ, ಪು.೯೦೯-೯೧೪.

೯. ಅದೇ. ಪು.೯೧೯.

೧೦. ಅದೇ ಪು.೯೨೪.

೧೧. ನಾಗರಾಜ ಚಿಂತ್ರಪಳ್ಳಿ, ಕನ್ನಡ ಕಲಿಕೆಯ ಸಮಸ್ಯೆಗಳು ೨೦೧೦, ಪಿಎಚ್.ಡಿ ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯೫.

೧೨. ಶಂಕರಭಟ್ಟ, ಡಿ.ಎನ್, ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ, ೨೦೦೬, ಪು.೪೯-೫೧.

ಅಧ್ಯಾಯ : ಆರು

# ಭಾಷಾ ಬೋಧನೆ ಮತ್ತು ಕಲಿಕೆಗೆ ಪೂರಕವಾದ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆ

೬.೧. ಪಠ್ಯಪುಸ್ತಕಗಳ ಹಿನ್ನೆಲೆ

೬.೨. ಪಠ್ಯಪುಸ್ತಕಗಳ ಮಹತ್ವ

೬.೩. ಪ್ರಸ್ತುತ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆ

ಅಧ್ಯಾಯ : ಆರು

# ಭಾಷಾ ಬೋಧನೆ ಮತ್ತು ಕಲಿಕೆಗೆ ಪೂರಕವಾದ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆ

## ೬.೧ ಪಠ್ಯಪುಸ್ತಕಗಳ ಹಿನ್ನೆಲೆ

ಒಂದು ಕಾಲಕ್ಕೆ ಭಾರತ ದೇಶದಲ್ಲಿ ವಿದ್ಯಾಭ್ಯಾಸ ಕ್ರಮವು ಬಹುತೇಕ ಮೌಖಿಕವಾಗಿತ್ತು. ವಿದ್ಯಾರ್ಥಿಯು ಗುರುಮುಖದಿಂದ ಪಾಠಗಳನ್ನು ಆಲಿಸಿ ಸ್ಮರಿಸಿಕೊಳ್ಳಬೇಕಾಗಿತ್ತು. ಆದರೆ ಮುದ್ರಣ ಸೌಲಭ್ಯದ ದೆಸೆಯಿಂದ ಇಂದು ಶಿಕ್ಷಣವು ಬಹುತೇಕ ಪಠ್ಯಪುಸ್ತಕದ ಆಧಾರಿತವಾಗಿದೆ. ಪಠ್ಯಪುಸ್ತಕಗಳು ನಮ್ಮ ಶಿಕ್ಷಣದ ಅನಿವಾರ್ಯ ಅಂಗಗಳಾಗಿವೆ.

ಪಠ್ಯಪುಸ್ತಕವೆಂದರೆ ತರಗತಿ ಕೋಣೆಯಲ್ಲಿ ಪಾಠ ಕಲಿಸಲು ಮತ್ತು ಬಿಡುವಿನ ವೇಳೆಯಲ್ಲಿ ಮಕ್ಕಳು ಸ್ವತಂತ್ರವಾಗಿ ಅಧ್ಯಯನ ಮಾಡಲು ಪರಿಣಿತರು ಜಾಗರೂಕತೆಯಿಂದ ಸಿದ್ಧಪಡಿಸಿದ ಬೋಧನೆ ಕಲಿಕೆಗೆ ಅಗತ್ಯವಾದ ಸಾಮಗ್ರಿಗಳನ್ನು ಒಳಗೊಂಡ ಪುಸ್ತಕ, ಪಠ್ಯಪುಸ್ತಕದ ಮೂಲಕ ಭಾಷೆ ಕಲಿಯುವುದು ಅತ್ಯಂತ ಅವೈಜ್ಞಾನಿಕ ಎಂಬ ಮಾತಿದೆಯಾದರೂ ಶಿಕ್ಷಕರಿಗೆ ಮಾರ್ಗದರ್ಶಿಯಾಗಿ ಭಾಷಾ ಪಠ್ಯಪುಸ್ತಕಗಳು ತೀರಾ ಅನಿವಾರ್ಯ ಭಾಷಾ ಬೋಧನೆಯಲ್ಲಿ ಪಠ್ಯಪುಸ್ತಕವು ಶಿಕ್ಷಕರಿಗೆ ದಾರಿ ತೋರುತ್ತದೆ. ಮಕ್ಕಳಿಗೆ ಅದು ಕಲಿಕೆಯ ಸಾಧನ ಅವರ ಭಾಷಾ ಸಾಮರ್ಥ್ಯವನ್ನು ಬೆಳೆಸುವ ಒಂದು ಸಲಕರಣೆ ಓದುಗಾರಿಕೆಯನ್ನು ನಿರ್ದೇಶಿಸುವ ದಿಕ್ಸೂಚಿಯಾಗಿದೆ.

ಪಠ್ಯಪುಸ್ತಕಗಳು ಓದಿನ ಒಂದು ಕೊಂಡಿ. ಪಾಠ ಹೇಳುವವರರು ಪಾಠ ಹೇಳುವ ಬಗೆ. ಕಲಿಯುವವರು ಮತ್ತು ಕಲಿತದ್ದನ್ನು ಅಳೆಯುವ ಮಾಪುಗೋಲುಗಳು. ಕಲಿಕೆಯು ಎಲ್ಲರೂ ಒಟ್ಟಾಗಿ ನಡೆಸುವ ಕೆಲಸವಾದ್ದರಿಂದ ಎಲ್ಲರೂ ಕಲಿಯಬೇಕಾದ ಪಠ್ಯವನ್ನು ನಿಗದಿಪಡಿಸಿ ಕೊಳ್ಳಬೇಕಾದುದು ಅಗತ್ಯವಾಗಿದೆ.

ಶಿಕ್ಷಣ ಪ್ರಕ್ರಿಯೆಗೆ ಚಾಲನಾತ್ಮಕ ಶಕ್ತಿ ನೀಡುವುದೇ ಪಠ್ಯಕ್ರಮ. ಇದು ಶೈಕ್ಷಣಿಕವಾಗಿ ಏನನ್ನು ಕಲಿಸಬೇಕು ಎಂದು ನಿರ್ಧರಿಸುವುದು. ಅಲ್ಲದೆ ಬೋಧನಾ ಉದ್ದೇಶಗಳನ್ನು ಅರ್ಥಮಾಡಿಸುವ ಒಂದು ಮಾಧ್ಯಮವಾಗಿಯೂ ಸಹ ಕಾರ್ಯನಿರ್ವಹಿಸುತ್ತದೆ. ಸಾಮಾನ್ಯವಾಗಿ ವಿದ್ಯಾರ್ಥಿಗಳಿಗೆ ವಾಸ್ತವ ಜ್ಞಾನ, ನೈಜ ಜ್ಞಾನ ಮತ್ತು ಅನುಭವಗಳನ್ನು

ಒದಗಿಸಿಕೊಡುವುದು ಶಿಕ್ಷಣ. ಇದನ್ನು ಪಠ್ಯಕ್ರಮದ ಮೂಲಕ ನಿರ್ವಹಿಸಬಹುದಾಗಿದೆ. ಆದ್ದರಿಂದ ಪಠ್ಯಕ್ರಮವನ್ನು ಮಗುವಿನ ಸರ್ವಾಂಗೀಣ ವಿಕಾಸದ ಸಾಧನ ಎಂದು ಹೇಳುವರು.

ಪಠ್ಯಕ್ರಮದ ಆಧುನಿಕ ಪರಿಕಲ್ಪನೆಯ ಪ್ರಕಾರ, ಪಠ್ಯಕ್ರಮವು ಕೇವಲ ಬೋಧನಾ ವಿಷಯಗಳಷ್ಟೇ ಆಗಿರದೆ, ಶಾಲೆಯಲ್ಲಿ ಅಧ್ಯಾಪಕರಿಂದ ಪುಸ್ತಕ ಭಂಡಾರ, ಕ್ರೀಡಾಂಗಣ ಮತ್ತು ಪ್ರಯೋಗಾಲಯಗಳಿಂದ ಔಪಚಾರಿಕ ಮತ್ತು ಅನೌಪಚಾರಿಕ ಮಾರ್ಗಗಳಿಂದ ಪಡೆಯಬಹುದಾದ ಎಲ್ಲಾ ರೀತಿಯ ಅನುಭವಗಳ ಒಟ್ಟು ಮೊತ್ತವಾಗಿದೆ. ಪಠ್ಯಕ್ರಮ ಎಂದರೆ ಕೇವಲ ಬೋಧನೆಗೆ ಮಾತ್ರ ಸೀಮಿತವಾಗಿರದೆ ತರಗತಿಯ ಒಳಗೆ ಮತ್ತು ಹೊರಗೆ ಶೈಕ್ಷಣಿಕ ಉದ್ದೇಶಗಳನ್ನು ಅರ್ಥೈಸಿಕೊಳ್ಳುವಂತೆ ಮಾಡುವುದಾಗಿದೆ.

ಮಕ್ಕಳ ಶಿಕ್ಷಣದಲ್ಲಿ ಬೇರೆಲ್ಲಾ ವಿಷಯಗಳಿಗಿಂತ ಭಾಷಾ ಬೋಧನೆ ವಿಶಿಷ್ಟವಾಗಿದೆ. ಆಯಾ ಹಂತಗಳಿಗೆ ಅನುಗುಣವಾಗಿ ಭಾಷಾ ಬೋಧನೆಗೆ ನಿರ್ದಿಷ್ಟವಾಗಿ ರಚಿಸಿಲ್ಪಟ್ಟಿರುವ ಪುಸ್ತಕಗಳೇ ಭಾಷಾ ಪಠ್ಯಪುಸ್ತಕಗಳು. ಪಠ್ಯಪುಸ್ತಕ ಎಂದಾಕ್ಷಣ ನಾವು ನೋಡುವ ಎಲ್ಲ ಪಠ್ಯಪುಸ್ತಕಗಳು ಪಠ್ಯಪುಸ್ತಕಗಳಾಗುವುದಿಲ್ಲ. ಸಮಾಜದ ಅನುಭವಗಳನ್ನು ಒಳಗೊಂಡ ಸಾಹಿತ್ಯ ಕೃತಿಗಳೆಲ್ಲವೂ ಪಠ್ಯಪುಸ್ತಕಗಳಾಗಿರುವುದಿಲ್ಲ. ತರಗತಿಯಲ್ಲಿ ಉಪಯೋಗಿಸುವುದಕ್ಕಾಗಿ ಪರಿಣಿತರು ಎಚ್ಚರಿಕೆಯಿಂದ ಸಿದ್ಧಪಡಿಸಿದ ಮತ್ತು ಬೋಧನೆಗೆ ಅವಶ್ಯಕವಾದ ಸಹಾಯಕ ಸಾಮಗ್ರಿ. ಶಿಕ್ಷಣದ ಧ್ಯೇಯ ಉದ್ದೇಶಗಳಿಗನುಗುಣವಾಗಿ ಒಂದು ನಿರ್ದಿಷ್ಟ ತರಗತಿಗೆ ನಿರ್ದಿಷ್ಟ ವಿಷಯಗಳನ್ನು ಪರಿಣಿತರು ವ್ಯವಸ್ಥಿತವಾಗಿ ಕ್ರಮಬದ್ಧವಾಗಿ ಸಂಗ್ರಹಿಸಿ ಸಿದ್ಧಪಡಿಸಿರುವ ಹೊತ್ತಿಗೆಯೇ ಪಠ್ಯಪುಸ್ತಕ.

**ಪಠ್ಯದ ಅರ್ಥ**

ಶಿಕ್ಷಣದ ಗುರಿಯನ್ನು ಅನುಸರಿಸುವ ಅಭ್ಯಾಸಕ್ರಮಕ್ಕೆ ಪಠ್ಯಕ್ರಮವೆಂದು ಕರೆಯುವರು. ಪಠ್ಯಕ್ರಮವನ್ನು ಆಂಗ್ಲ ಭಾಷೆಯಲ್ಲಿ Curriculum ಎಂದು ಕರೆಯುತ್ತೇವೆ. ಕರಿಕ್ಯುಲಮ್ ಎಂಬ ಪದವು ಲ್ಯಾಟಿನ್ ಭಾಷೆಯ currere ಎನ್ನುವ ಪದದಿಂದ ಬಂದಿದೆ. ಅಂದರೆ ವಿದ್ಯಾರ್ಥಿಯು ಗುರಿಯನ್ನು ತಲುಪಲು ಅನುಸರಿಸುವ ಪದ ಅಥವಾ ಮಾರ್ಗ ಎಂದಾಗುತ್ತದೆ.

**೬.೨ ಪಠ್ಯಪುಸ್ತಕಗಳ ಮಹತ್ವ**

ಪುಸ್ತಕವಿಲ್ಲದೆ ಶಿಕ್ಷಣ ನಡೆಯುತ್ತಿದ್ದ ಕಾಲವೊಂದಿತ್ತು. ಇಂದಿನ ಶಿಕ್ಷಣದಲ್ಲಿ ಪ್ರಾಥಮಿಕ ಹಂತದಿಂದ ಪದವಿ ಹಂತದವರೆಗೂ ಪಠ್ಯಪುಸ್ತಕಗಳೇ ಶಿಕ್ಷಣದ ಕೇಂದ್ರಬಿಂದುವಾಗಿರುವುದನ್ನು

ಕಾಣಬಹುದು. ಶಿಕ್ಷಣ ನಿರ್ದಿಷ್ಟವಾಗಿ ಉದ್ದೇಶಪೂರ್ವಕವಾಗಿ ನಡೆಯಬೇಕಾದರೆ, ಉತ್ತಮ ಪಠ್ಯಪುಸ್ತಕಗಳು ಅಗತ್ಯ. ಶಿಕ್ಷಣ ಕ್ಷೇತ್ರದಲ್ಲಿ ಪಠ್ಯಪುಸ್ತಕಗಳು ಶಿಕ್ಷಕರಿಗೆ, ವಿದ್ಯಾರ್ಥಿಗಳಿಗೆ ಮೌಲ್ಯಮಾಪಕರಿಗೆ ಆಡಳಿತ ವರ್ಗಕ್ಕೆ ಪೋಷಕರಿಗೆ ಅಗತ್ಯವೆನಿಸಿವೆ.

ಶಿಕ್ಷಣದಲ್ಲಿ ಪಠ್ಯಪುಸ್ತಕವು ಉಪಾಧ್ಯಾಯರಿಗೆ ಮಾರ್ಗದರ್ಶಿಯಾಗಿದೆ. ತಾನು ಯಾವ ತರಗತಿಗೆ ಏನನ್ನು ಬೋಧಿಸಬೇಕು? ಎಷ್ಟನ್ನು ಬೋಧಿಸಬೇಕು? ಹೇಗೆ ಬೋಧಿಸಬೇಕು? ಯಾವ ಯಾವ ವಿಷಯಗಳಿಗೆ ಎಷ್ಟೆಷ್ಟು ಆದ್ಯತೆ ನೀಡಬೇಕು? ಬೋಧನೆಯನ್ನು ಹೇಗೆ ನಿರ್ದಿಷ್ಟವಾಗಿ ಸಾಧಿಸಬೇಕು. ಬೋಧಿಸಿದ ವಿಷಯಗಳನ್ನು ಹೇಗೆ ಮೌಲ್ಯಮಾಪನ ಮಾಡಬೇಕು? ತಾನು ಹೇಗೆ ವಿಷಯಗಳನ್ನು ಸಂಗ್ರಹಿಸಿಕೊಳ್ಳಬೇಕು? ಭಾಷೆ ಮತ್ತು ವ್ಯಾಕರಣಗಳ ಬಗ್ಗೆ ಎಷ್ಟು ಗಮನಹರಿಸಬೇಕು ಎಂಬ ಮುಂತಾದ ವಿಷಯಗಳ ಬಗ್ಗೆ ಪಠ್ಯಪುಸ್ತಕವು ಮಾರ್ಗದರ್ಶನವನ್ನು ನೀಡುತ್ತದೆ.

ಶಿಕ್ಷಕನಿಗೆ ಗೆಳೆಯ ಎನಿಸಿರುವ ಪಠ್ಯಪುಸ್ತಕವು ವಿದ್ಯಾರ್ಥಿಗಳ ಕಾಮಧೇನು ಎಂದು ಹೇಳಬಹುದು. ಬೋಧನೆ ಯಶಸ್ವಿಯಾಗಿ ಸಾಗಬೇಕಾದರೆ ಪಠ್ಯಪುಸ್ತಕ ಇರಲೇಬೇಕು. ವಿದ್ಯಾರ್ಥಿಗೆ ಪ್ರಾಥಮಿಕ ಹಂತದಲ್ಲಿ ಪ್ರಥಮವಾಗಿ ಭಾಷಾ ಪಠ್ಯಪುಸ್ತಕ ಪರಿಚಯವಾಗುತ್ತದೆ. ಮಕ್ಕಳ ಶಿಕ್ಷಣಕ್ಕೆ ಉತ್ತಮ ತಳಹದಿ ಹಾಕಲು ಭಾಷಾ ಪುಸ್ತಕವು ಅಗತ್ಯವಾಗಿ ಬೇಕು. ಮಕ್ಕಳು ಭಾಷೆಯ ವಿವಿಧ ಕೌಶಲಗಳಲ್ಲಿ ತರಬೇತಿ ಹೊಂದಿ ಸಾಮರ್ಥ್ಯಗಳಿಸಲು ಪಠ್ಯಪುಸ್ತಕಗಳು ಬೇಕು.

ಪಠ್ಯಪುಸ್ತಕವು ವಿದ್ಯಾರ್ಥಿಗಳು ಮತ್ತು ಉಪಾಧ್ಯಾಯರಿಗಷ್ಟೆ ಅಲ್ಲದೆ ಮೌಲ್ಯಮಾಪಕರು, ಪೋಷಕರು ಮತ್ತು ಹವ್ಯಾಸಿ ಓದುಗರಿಗೆ ಉಪಯುಕ್ತವಾಗಿದೆ. ಮೌಲ್ಯಮಾಪಕರಿಗೆ ಪಶ್ನೆಪತ್ರಿಕೆ ತಯಾರಿಸಲು, ಮೌಲ್ಯಮಾಪನವನ್ನು ಉದ್ದೇಶ ಆಧಾರಿತವಾಗಿ ರೂಪಿಸಲು ಮೌಲ್ಯಮಾಪನದಲ್ಲಿ ವ್ಯಾಪಕತೆಯನ್ನು ಕಾಯ್ದುಕೊಳ್ಳಲು ಅವಶ್ಯಕ. ಪೋಷಕರಿಗೆ ಮಕ್ಕಳ ಶೈಕ್ಷಣಿಕ ಪ್ರಗತಿಯನ್ನು ಗಮನಿಸಲು, ಅವರಿಗೆ ಪೂರಕ ಪಾಠ ಹೇಳಿಕೊಡಲು ಪಠ್ಯಪುಸ್ತಕಗಳು ಬೇಕು. ಶಿಕ್ಷಕರ ಬೋಧನೆಯನ್ನು ಮೇಲ್ವಿಚಾರಣೆ ಮಾಡಿ ಉತ್ತಮ ಬೋಧನೆ ಮತ್ತು ಕಲಿಕೆಗಾಗಿ ಸರಿಯಾದ ಮಾರ್ಗದರ್ಶನ ನೀಡಲು ಪರಿವೀಕ್ಷಕರಿಗೆ ಪಠ್ಯಪುಸ್ತಕಗಳು ನೆರವಾಗುತ್ತವೆ.

**ಕನ್ನಡ ಭಾಷಾ ಪಠ್ಯಪುಸ್ತಕದ ಲಕ್ಷಣಗಳು**

ಮಕ್ಕಳ ಶಿಕ್ಷಣದಲ್ಲಿ ಭಾಷಾ ಪಠ್ಯಪುಸ್ತಕ ಮಹತ್ವದ ಪರಿಣಾಮ ಬೀರುತ್ತಿದೆ. ಪಠ್ಯಪುಸ್ತಕ ಉತ್ತಮ ಗುಣಮಟ್ಟದ್ದಾಗಿದ್ದರೆ ಮಕ್ಕಳ ಕಲಿಕೆ ಉತ್ತಮವಾಗುತ್ತದೆ. ಕಲಿಕೆಯ

ಕಡೆ ಅವರ ಆಸಕ್ತಿ ಹೆಚ್ಚುತ್ತದೆ. ಪಠ್ಯಪುಸ್ತಕವನ್ನು ಪರಿಣಿತರ ಪರಿಶ್ರಮದಿಂದ ಭಾಷೆ, ಸಂವಹನ ಮತ್ತು ಸಾಹಿತ್ಯ ದೃಷ್ಟಿಯಿಂದ ರಚಿಸಬೇಕಾಗುತ್ತದೆ.

**ಪಠ್ಯಪುಸ್ತಕದ ಆಂತರಿಕ ಲಕ್ಷಣಗಳು**

ಕನ್ನಡ ಭಾಷಾ ಬೋಧನೆಯ ಗುರಿ ಮತ್ತು ಉದ್ದೇಶಗಳು ಸಾಧನೆಯಾಗಲು ನೆರವಾಗುವಂತೆ ಪಠ್ಯಪುಸ್ತಕದ ವಿಷಯಗಳು ಮತ್ತು ಭಾಷೆ ರೂಪಿಸಲ್ಪಟ್ಟಿರಬೇಕು. ಪಠ್ಯಪುಸ್ತಕದಲ್ಲಿ ಬಳಸಿರುವ ಭಾಷೆ ಮತ್ತು ವಿಷಯಗಳು ಮಕ್ಕಳ ಮಟ್ಟಕ್ಕೆ ಅನುಗುಣವಾಗಿರಬೇಕು. ಪುಸ್ತಕವು ವೈವಿಧ್ಯತೆಯಿಂದ ಕೂಡಿರಬೇಕು. ಭಾಷಾ ಕಲಿಕೆಯ ಮನೋವೈಜ್ಞಾನಿಕ ನಿಯಮಗಳಿಗೆ ಅನುಗುಣವಾಗಿ ಪಠ್ಯಗಳನ್ನು ಬೋಧಿಸಿರಬೇಕು. ಪಾಠಗಳ ನಡುವೆ ಸಂಪರ್ಕ, ನಿರಂತರತೆ ಇರಬೇಕು. ಪ್ರತಿಪಠ್ಯಕ್ಕೆ ಬೋಧಕರಿಗೆ ಅವಶ್ಯಕ ಸೂಚನೆಗಳಿರಬೇಕು. ಪಾಠಕ್ಕೆ ಸರಿಹೊಂದುವ ಶೀರ್ಷಿಕೆ ಇರಬೇಕು. ಅಗತ್ಯವಿದ್ದರೆ ಉಪಶೀರ್ಷಿಕೆಗಳಿರಬೇಕು. ಪ್ರತಿಯೊಂದು ಪಾಠವು ಮಕ್ಕಳ ಮಟ್ಟಕ್ಕೆ ಅನುಗುಣವಾದ ಪದಗಳು, ನುಡಿಗಟ್ಟುಗಳು, ಹೇಳಿಕೆಗಳಿಂದ ಒಳಗೊಂಡಿರಬೇಕು. ಗದ್ಯ ಮತ್ತು ಪದ್ಯಗಳಲ್ಲಿ ಬರುವ ಹೊಸ ಪದಗಳು, ವಿಶಿಷ್ಟ ಪದಗಳು, ಹೇಳಿಕೆಗಳು ಗಾದೆಗಳು, ನುಡಿಗಟ್ಟುಗಳಿಗೆ ಸೂಕ್ತ ವಿವರ ನೀಡಬೇಕು. ವಿಶೇಷ ಅರ್ಥಗಳಿರುವ ಪದಗಳಿಗೆ ಅಗತ್ಯ ವಿವರಣೆ ಕೂಡಬೇಕು. ಭಾಷಾ ಪಠ್ಯಪುಸ್ತಕದಲ್ಲಿ ಮೌಲ್ಯಮಾಪನದ ಅಭ್ಯಾಸಗಳಿದ್ದು, ಮಕ್ಕಳ ಭಾಷೆ ಮತ್ತು ವಿಷಯವನ್ನು ಹಂತ ಹಂತವಾಗಿ ಮೌಲ್ಯಮಾಪನ ಮಾಡಲು ಚಟುವಟಿಕೆಗಳಿರಬೇಕು. ಮೌಲ್ಯಮಾಪನ ಅಭ್ಯಾಸಗಳು, ಮಕ್ಕಳ ಭಾಷಾ ಸಾಮರ್ಥ್ಯವನ್ನು ಬೆಳೆಸಲು ನೆರವಾಗಬೇಕು. ಮಕ್ಕಳಲ್ಲಿ ಸ್ವಯಂ ಅಭಿವ್ಯಕ್ತಿ ಸಾಮರ್ಥ್ಯ ಬೆಳಸುವಂತಹ ಅಭ್ಯಾಸಗಳು ಇರಬೇಕು. ಪಠ್ಯಪುಸ್ತಕಗಳಲ್ಲಿ ಬೋಧಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಅವಶ್ಯಕ ಸೂಚನೆಗಳಿರಬೇಕು. ಪ್ರತಿ ಪಠ್ಯಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಅಧ್ಯಯನಕ್ಕಾಗಿ ಆಧಾರ ಗ್ರಂಥಗಳನ್ನು ಸೂಚಿಸಿರಬೇಕು.[೨]

ಪಠ್ಯಪುಸ್ತಕವು ಏನೆಲ್ಲ ಉತ್ತಮ ಗುಣಲಕ್ಷಣಗಳಿಂದ ಕೂಡಿದ್ದರೂ ಸಹ ಅದನ್ನು ಸಮರ್ಥವಾಗಿ, ಪರಿಣಾಕಾರಿಯಾಗಿ, ಉಪಯೋಗಿಸಲಿಲ್ಲವೆಂದರೆ ಪ್ರಯೋಜನವಿಲ್ಲ.

ಶಿಕ್ಷಣದಲ್ಲಿ ಪಠ್ಯಪುಸ್ತಕವು ಒಂದು ಸಾಧನವೇ ಹೊರತು ಅದೇ ಸರ್ವಸ್ವವಲ್ಲ. ಸಮರ್ಥ ಶಿಕ್ಷಕರು ಪಠ್ಯಪುಸ್ತಕದಿಂದ ಆಚೆ ತನ್ನ ಯೋಚನೆಯನ್ನು ಬೆಳೆಸಿಕೊಳ್ಳಬೇಕು. ಪಠ್ಯಪುಸ್ತಕವನ್ನು ವಿದ್ಯಾರ್ಥಿಗಳು ಹೇಗೆ ಬಳಸಬೇಕು, ಹೇಗೆ ಸಂರಕ್ಷಿಸಿಕೊಳ್ಳಬೇಕು. ಎಂಬ ಬಗ್ಗೆ ಸೂಕ್ತ ಮಾರ್ಗದರ್ಶನ ಸಲಹೆಗಳನ್ನು ನೀಡಿ ಅವರಲ್ಲಿ ವೈಜ್ಞಾನಿಕವಾಗಿ

ಓದುವ ಹವ್ಯಾಸಗಳನ್ನು ಬೆಳೆಸಬೇಕು. ನೀರಸವಾದ ಪಾಠ ಭಾಗಗಳಿರಕೂಡದು. ವಿವಿಧ ಬುದ್ಧಿಮತ್ತೆ ವಿದ್ಯಾರ್ಥಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಪಾಠಗಳನ್ನು ಆಯ್ಕೆ ಮಾಡಿರಬೇಕು. ಬಳಸಿದ ಭಾಷೆ ತಿಳಿಯಾಗಿರಬೇಕು, ಸರಳವಾಗಿರಬೇಕು. ಓದಿದೊಡನೆ ಅರ್ಥವಾಗುವಂತಿರಬೇಕು. ಚಿಕ್ಕ ತರಗತಿಗಳಲ್ಲಿ ಆದಷ್ಟು ಮಟ್ಟಿಗೆ ಕಥೆ, ಸಂಭಾಷಣೆ ರೂಪದ ಪಾಠಗಳಿದ್ದರೆ ಉತ್ತಮ. ಪದಗಳನ್ನು ಆಯ್ಕೆ ಮಾಡುವಾಗ ಮಕ್ಕಳ ಶಬ್ದಭಂಡಾರವನ್ನು ಬೆಳೆಸುವ ದೃಷ್ಟಿಯಿರಬೇಕು. ಆಯಾ ತರಗತಿಗೆ ಎಷ್ಟು ಶಬ್ದಗಳನ್ನು ಪರಿಚಯಿಸಬೇಕೆಂದು ಪಠ್ಯಕ್ರಮದಲ್ಲಿ ಸೂಚಿಸಿದೆಯೋ ಅಷ್ಟನ್ನು ಕುರಿತು ಪರಿಚಯಿಸಬೇಕು. ಹಿಂದಿನ ತರಗತಿಗಳಲ್ಲಿ ಬಂದ ಪಾಠಗಳನ್ನು ಮತ್ತೆ ಕೂಡಿರುವುದು ಅರ್ಥಹೀನ. ಪಾಠಗಳನ್ನು ಶ್ರೇಣಿಕರಿಸಿ 'ಸುಲಭದಿಂದ ಕಷ್ಟದ ಕಡೆಗೆ" ಎಂಬ ತತ್ವವನ್ನು ಆಧರಿಸಿ ಕ್ರಮಾನುಗತವಾಗಿ ಕೊಟ್ಟಿರಬೇಕು. ಮಕ್ಕಳ ಭಾವನೆ ವಿಚಾರ ಹಾಗೂ ಭಾಷೆಯನ್ನು ಬೆಳೆಸುವ ರೀತಿಯಲ್ಲಿ ಪಾಠಗಳ ರಚನೆಯಾಗಿರಬೇಕು. ಪಠ್ಯಕ್ರಮದಲ್ಲಿ ಸೂಚಿತವಾದ ಅವಧಿಯೊಳಗೆ ಬೋಧನೆ ಮಾಡಿ ಮುಗಿಸುವ ಹಾಗಿರಬೇಕು.

ಪಾಠಗಳ ಕೊನೆಯಲ್ಲಿ ಕಲಿಕೆಯ ದೃಢೀಕರಣ ಹಾಗೂ ವಿಸ್ತರಣೆ ದೃಷ್ಟಿಯಿಂದ ಅಭ್ಯಾಸಗಳನ್ನು ಕೊಟ್ಟಿರಬೇಕು. ಭಾಷಾಭ್ಯಾಸದಲ್ಲಿ ಕೆಳಗಿನ ತರಗತಿಯಲ್ಲಿ ಅಕ್ಷರ ಗುರುತಿಸುವಿಕೆ ಸಂಯೋಜನೆ, ಪದಚರನೆ, ಸಣ್ಣ ವಾಕ್ಯಗಳ ರಚನೆ, ನುಡಿಬರಹ ಮುಂತಾದ ಪ್ರಶ್ನೆಗಳ ಅಭ್ಯಾಸವಿರಬೇಕು. ಇವಲ್ಲದೆ, ಮಕ್ಕಳ ಕಲಿಕೆಯನ್ನು ವಿಸ್ತರಿಸಲು ಕಲಿತ ವಿಚಾರಗಳನ್ನು ಹೊಸ ಸನ್ನಿವೇಶಗಳಿಗೆ ಅನ್ವಯಿಸಲು ಕೆಲವೊಂದು ಚಟುವಟಿಕೆಗಳನ್ನು ಕೂಡ ಸೂಚಿಸಬಹುದು. ಇವು ಪ್ರಾಯೋಗಿಕವಾಗಿರಬೇಕು. ಅಗತ್ಯವಾದ ಕಡೆಗಳಲ್ಲಿ ಶಿಕ್ಷಕರಿಗೆ ಸೂಚನೆಗಳನ್ನು ಕೊಡಬೇಕು. ಲೇಖಕರ ಪರಿಚಯ, ಪೂರ್ವಕಥೆ, ಪದಗಳ ಅರ್ಥ, ವ್ಯಾಕರಣಾಂಶಗಳು ಇತ್ಯಾದಿಗಳನ್ನು ಅಭ್ಯಾಸವು ಒಳಗೊಂಡಿರಬೇಕು.

**ಪಠ್ಯಪುಸ್ತಕಗಳ ಬಾಹ್ಯಲಕ್ಷಣಗಳು**

ಪ್ರಾಥಮಿಕ ಶಾಲಾ ಪಠ್ಯಪುಸ್ತಕಗಳು, ಅಗಲವಾಗಿದ್ದು, ದಪ್ಪವಾಗಿರಬೇಕು. ಆದಷ್ಟು ಮಟ್ಟಿಗೆ ಹಾಲು ಬಿಳಿ ಕಾಗದವನ್ನು ಬಳಸಿರಬೇಕು. ಬಣ್ಣದ ಚಿತ್ರಗಳಿದ್ದು, ಅವುಗಳ ಗಾತ್ರ ದೊಡ್ಡದಾಗಿರಬೇಕು. ಅಕ್ಷರಗಳ ಗಾತ್ರ ಕೂಡ ದೊಡ್ಡದಾಗಿರಬೇಕು. ಪುಸ್ತಕಗಳು ಅಧಿಕ ಬಾಳಿಕೆ ಬರುವ ಗುಣ ಹೊಂದಿರಬೇಕು. ರಕ್ಷಾಪುಟ ದಪ್ಪವಾಗಿದ್ದು, ಆಕರ್ಷಕವಾಗಿರಬೇಕು. ಅತಿ ಮುಖ್ಯವಾದ ವಿಚಾರವೆಂದರೆ ಶಾಲಾ ಪಠ್ಯಪುಸ್ತಕಗಳು ಮುದ್ರಣ ದೋಷಗಳಿಂದ ಮುಕ್ತವಾಗಿರಬೇಕು. ಪುಸ್ತಕವೇ ಸರ್ವಸ್ವ ಅಲ್ಲ, ಅದೊಂದು

ಸಾಧನ, ಸಲಕರಣೆ ಮಾತ್ರ. ಪಠ್ಯಪುಸ್ತಕಗಳನ್ನು ಅರ್ಥಪೂರ್ಣವಾಗಿ ಬಳಸಿಕೊಳ್ಳುವುದು ಅಧ್ಯಾಪಕರ ಕೈಯಲ್ಲಿದೆ. ಪಠ್ಯಪುಸ್ತಕದಲ್ಲಿರಬಹುದಾದ ತಪ್ಪುಗಳನ್ನು ತಿದ್ದಿ ಹೇಳುವುದು, ಸಮಗ್ರ ಮಾಹಿತಿಯನ್ನು ಪೂರ್ಣಗೊಳಿಸುವುದು ಶಿಕ್ಷಕರ ಹೊಣೆ. ಶಿಕ್ಷಕರು ಎಂದೂ ಪಠ್ಯಪುಸ್ತಕದ ದಾಸರಾಗಕೂಡದು. ಪಠ್ಯಪುಸ್ತಕವನ್ನು ಮೀರಿದ ಕಲಿಕೆಯನ್ನು ಪ್ರೋತ್ಸಾಹಿಸಬೇಕು.

ಒಟ್ಟಾರೆಯಾಗಿ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆಯ ದೃಷ್ಟಿಯಿಂದ ಗುಣಮಟ್ಟವನ್ನು ಕಾಯ್ದುಕೊಂಡು ರಾಷ್ಟ್ರೀಯ ಮೌಲ್ಯಗಳನ್ನು ಬೆಳೆಸಲು ನಮ್ಮ ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿ ಬೆಳೆಸಲು ರಾಷ್ಟ್ರೀಯ ಧ್ಯೇಯ ಧೋರಣೆಗಳನ್ನು ಮಕ್ಕಳಿಗೆ ಪರಿಚಯಿಸಲು ರಾಷ್ಟ್ರೀಯ ಭಾವೈಕ್ಯತೆಯನ್ನು ಬೆಳೆಸಲು ಸಮಕಾಲೀನ ವಿದ್ಯಮಾನಗಳ ಬಗೆಗೆ ಜವಾಬ್ದಾರಿಯುತ ಮನೋಭಾವನೆ ಬೆಳೆಸಲು ಪಠ್ಯಪುಸ್ತಕಗಳು ಉತ್ತಮ ಸಾಧನಗಳಾಗಿವೆ. ಪ್ರಸ್ತುತ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ ಎಂಬ ಅಧ್ಯಯನಕ್ಕೆ ಸಂಬಂಧಿಸಿದಂತೆ ಬಳ್ಳಾರಿ ನಗರದ ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳು ಕನ್ನಡ ಭಾಷೆಯನ್ನು ದ್ವಿತೀಯ ಭಾಷೆಯಾಗಿ ಅಭ್ಯಾಸ ಮಾಡುತ್ತಿರುವ ೫, ೬ ಮತ್ತು ೭ನೇ ತರಗತಿಗಳ ಕನ್ನಡ ಪಠ್ಯಪುಸ್ತಕಗಳನ್ನು ಅವಲೋಕಿಸಲಾಗಿದೆ.

**೬.೫ ಪ್ರಸ್ತುತ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆ**

೨೦೦೫ನೇ ರಾಷ್ಟ್ರೀಯ ಪಠ್ಯಪುಸ್ತಕದ ಆಧಾರದ ಮೇಲೆ ರಚಿತವಾದ ಕರ್ನಾಟಕ ರಾಜ್ಯ ಪಠ್ಯವಸ್ತುವಿನ ಆಧಾರದ ಮೇಲೆ ಪಠ್ಯಪುಸ್ತಕ ಸಂಘವು ೨೦೧೦ನೇ ಸಾಲಿನಿಂದ ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗಿನ ಪಠ್ಯಪುಸ್ತಕಗಳ ರಚನಾಕಾರ್ಯದಲ್ಲಿ ತೊಡಗಿದೆ. ಒಟ್ಟು ೧೨ ಭಾಷೆಗಳಲ್ಲಿ ಭಾಷಾ ಪಠ್ಯಗಳನ್ನು ರಚನೆ ಮಾಡಲಾಗುತ್ತದೆ. ಪಠ್ಯಪುಸ್ತಕಗಳು ೨೦೦೫ರ ರಾಷ್ಟ್ರೀಯ ಪಠ್ಯಕ್ರಮದ ವೈಶಿಷ್ಟ್ಯಗಳನ್ನು ಹೊಂದಿದೆ. ಕಲಿಕೆಯನ್ನು ಜೀವನದ ಅವಶ್ಯಕತೆಗಳೊಂದಿಗೆ ಜೋಡಿಸಿರುವುದು.

- ಕಂಠಪಾಠ ವಿಧಾನದಿಂದ ಕಲಿಕೆಯನ್ನು ಮುಕ್ತಗೊಳಿಸುವುದು.
- ಪಠ್ಯಪುಸ್ತಕಗಳ ಹೊರತಾಗಿ ಪಠ್ಯಕ್ರಮವನ್ನು ಶ್ರೀಮಂತಗೊಳಿಸುವುದು.
- ಜ್ಞಾನದ ಅಭಿವೃದ್ಧಿಗೆ ಕಲಿಕಾ ಅನುಭವಗಳನ್ನು ಬಳಸುವುದು.
- ಭಾರತದ ಪ್ರಜಾಸತ್ತಾತ್ಮಕ ನೀತಿಯನ್ವಯ ಮಕ್ಕಳ ಅವಶ್ಯಕತೆಗಳಿಗೆ ತಕ್ಕಂತೆ ಸ್ಪಂದಿಸುವುದು.

- ಶಿಕ್ಷಣವನ್ನು ಇಂದಿನ ಹಾಗೂ ಭವಿಷ್ಯದ ಜೀವನಾವಶ್ಯಕತೆಗಳಿಗೆ ಹೊಂದುವಂತೆ ಮಾಡುವುದು.
- ವಿಷಯಗಳ ಮೇರೆಗಳನ್ನು ಮೀರಿ ಅವುಗಳಿಗೆ ಸಮಗ್ರ ದೃಷ್ಟಿಯ ಬೋಧನೆಯನ್ನು ಅಳವಡಿಸುವುದು.
- ಶಾಲೆಯ ಹೊರಗಿನ ಬದುಕಿಗೆ ಜ್ಞಾನವನ್ನು ಸಂಯೋಜಿಸುವುದು.
- ಮಕ್ಕಳಿಂದಲೇ ಜ್ಞಾನವನ್ನು ಅಭಿವೃದ್ಧಿಪಡಿಸುವುದು. ಪಠ್ಯಪುಸ್ತಕದ ರಚನೆಯ ಉದ್ದೇಶವಾಗಿದೆ.

ಈ ನೂತನ ಪಠ್ಯಪುಸ್ತಕಗಳಲ್ಲಿ ನೂತನ ವಿಧಾನಗಳಾದ ಅಂತರ್ಗತ ವಿಧಾನ, ರಚನಾತ್ಮಕ ವಿಧಾನ ಹಾಗೂ ಸುರುಳಿಯಾಕಾರದ ವಿಧಾನಗಳನ್ನು ಅಳವಡಿಸಲಾಗಿದೆ.

ಪಠ್ಯಪುಸ್ತಕಗಳ ವಿಷಯ ಹಾಗೂ ಅಭ್ಯಾಸಗಳು ವಿದ್ಯಾರ್ಥಿಗಳನ್ನು ಯೋಚನೆ ಮಾಡುವಂತೆ ಮಾಡಿ ಚಟುವಟಿಕೆಗಳ ಮೂಲಕ ಜ್ಞಾನ ಹಾಗೂ ಸಾಮರ್ಥ್ಯಗಳನ್ನು ಪಡೆಯುವಂತೆ ಮಾಡುವ ಪ್ರಯತ್ನ ಮಾಡಲಾಗಿದೆ. ಪಠ್ಯವಸ್ತುಗಳೊಂದಿಗೆ ಅತ್ಯಂತ ಅವಶ್ಯಕ ಜೀವನ ಮೌಲ್ಯಗಳನ್ನು ಅಂತರ್ಗತವಾಗಿ ಬಳಸಲಾಗಿದೆ. ಈ ನೂತನ ಪಠ್ಯಪುಸ್ತಕಗಳು ಪರೀಕ್ಷಾ ದೃಷ್ಟಿಯಿಂದ ರಚಿತವಾಗಿಲ್ಲ. ಬದಲಾಗಿ ಅವುಗಳು ವಿದ್ಯಾರ್ಥಿಗಳ ಸರ್ವಾಂಗೀಣ ವ್ಯಕ್ತಿತ್ವ ವಿಕಸನಕ್ಕೆ ಪೂರಕವಾಗಿವೆ. ತನ್ಮೂಲಕ ಅವರನ್ನು ಸ್ವತಂತ್ರ್ಯ ಭಾರತದ ಸ್ವಸ್ಥ ಸಮಾಜದ ಉತ್ತಮ ಪ್ರಜೆಗಳನ್ನಾಗಿ ಮಾಡುವ ಪ್ರಯತ್ನ ನಡೆದಿದೆ.

ಭಾಷಾ ಕಲಿಕೆಯಲ್ಲಿ ಅತ್ಯಂತ ಮುಖ್ಯ ಗುರಿಗಳಾದ ಆಲಿಸುವುದು, ಮಾತನಾಡುವುದು, ಓದುವುದು, ಬರೆಯುವುದು ಹಾಗೂ ಆಕರ ಗ್ರಂಥಗಳಿಂದ ವಿಷಯ ಸಂಗ್ರಹಣೆಯಂತಹ ಕ್ಷೇತ್ರವಾರು ಸಾಮರ್ಥ್ಯಗಳಿಗೆ ಒತ್ತು ನೀಡಲಾಗಿದೆ. ಈ ಕೌಶಲಗಳೊಂದಿಗೆ ಕ್ರಿಯಾತ್ಮಕ ವ್ಯಾಕರಣ, ಸೌಂದರ್ಯಪ್ರಜ್ಞೆ, ಪ್ರಶಂಸಾ ಮನೋಭಾವನಾ ಮೌಲ್ಯಗಳ ಸಂವರ್ಧನೆಗೆ ಅನುವು ಮಾಡಿಕೊಡಬೇಕು. ಈ ಸಾಮರ್ಥ್ಯ ಮಕ್ಕಳಲ್ಲಿ ಬಂದಾಗ ಅವರು ಪರೀಕ್ಷೆಗಳಿಗಾಗಿ ಕಂಠಪಾಠಕ್ಕೆ ಶರಣು ಹೋಗಬೇಕಾಗಿಲ್ಲ. ಪಠ್ಯಪುಸ್ತಕವು ಭಾಷಾ ಕೌಶಲಗಳ ಸಂವರ್ಧನೆಗೆ ಒಂದು ಪೂರಕ ವಸ್ತುವೆಂದು ಪರಿಗಣಿಸಲು ಮಕ್ಕಳ ಮನೋವೈಶಾಲ್ಯವನ್ನು ಬೆಳೆಸಲು ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಚಟುವಟಿಕೆಗಳನ್ನು ಪಠ್ಯಪುಸ್ತಕದಲ್ಲಿ ಒದಗಿಸಲಾಗಿದೆ.

ಶೈಕ್ಷಣಿಕ ಜೀವನದಲ್ಲಿ ಕಲಿಕಾರ್ಥಿಗಳ ತಾಯ್ನುಡಿಯ ಕಲಿಕೆ ಹಾಗೂ ಬಳಕೆ ಮಹತ್ವದ್ದು. ಅದಕ್ಕೆ ಪೂರಕವಾಗಿ ಶಿಕ್ಷಣ ಇಲಾಖೆ ನಿಗದಿಪಡಿಸುವ ಬೋಧನಾ ಪಠ್ಯ

ಅತ್ಯಗತ್ಯ ಹಾಗೂ ಅನಿವಾರ್ಯ. ಸಾಮಾನ್ಯವಾಗಿ ಮಕ್ಕಳ ಪರಿಸರದ ಮಾತು ನಿತ್ಯದ ಪರಿಸರ ಸಂವಹನ ಸಂಪರ್ಕಕ್ಕಷ್ಟೇ ಸೀಮಿತವಾಗಿರದೆ ಜ್ಞಾನಾರ್ಜನೆಯ ಉದ್ದೇಶವೂ ಅದರ ಗುರಿಯಾಗಿದೆ. ಮಕ್ಕಳು ತಮ್ಮ ನುಡಿಯಲ್ಲೇ ಶಾಲಾಮಟ್ಟದ ಸಂವಹನ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾ ಶೈಕ್ಷಣಿಕ ಸಾರ್ಥಕತೆಗೆ ತಮ್ಮನ್ನು ತೆರೆದುಕೊಳ್ಳುವ ಆಶಯದ ಔಪಚಾರಿಕ ನೆಲೆಯಲ್ಲಿ ಸಿದ್ಧಪಡಿಸಿ ನಿಯೋಜಿಸಿರುವ ಕಲಿಕಾ ಹಾಗೂ ಬೋಧನಾ ಪಠ್ಯವಾಗಿದ್ದು, ಕಲಿಕೆಯ ಮೂಲಭೂತ ಕೌಶಲಗಳ ವೈಜ್ಞಾನಿಕ ದೃಢತ್ವವೇ ಅವುಗಳ ಆಂತರ್ಯದ ದನಿ. ಅದೇ ಒಟ್ಟಾರೆ ಇಂಗಿತ.

ಕಲಿಕೆ ಮತ್ತು ಬೋಧನಾಂಶಗಳನ್ನು ಪಠ್ಯಪುಸ್ತಕದಲ್ಲಿ ಸಮತೋಲನವಾಗಿ ಪರಿಗಣಿಸಿ ಯುಕ್ತ ಹಾಗೂ ಸಹಜ ಕಲಿಕಾ ಪ್ರಾಯೋಗಿಕತೆಯ ಮೂಲಕ ಸಮನ್ವಯಗೊಳಿಸಲಾಗಿದೆ. ಭಾಷಾ ಕಲಿಕೆ ಮತ್ತು ಜ್ಞಾನ ಸಂವರ್ಧನೆಗೆ ಅವಕಾಶ ಕಲ್ಪಿಸಿಕೊಡಬೇಕು. ಈ ನಿಟ್ಟಿನಲ್ಲಿ ತಿಳಿ ಕನ್ನಡ ಎಂಬ ಐದು, ಆರು ಮತ್ತು ಏಳನೇ ತರಗತಿಯ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆಯನ್ನು ವಿಶ್ಲೇಷಿಸಲಾಗಿದೆ.

ಐದನೇ ತರಗತಿ, ತಿಳಿ ಕನ್ನಡ ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕ (ಪರಿಷ್ಕೃತ) ವನ್ನು ಆಂಗ್ಲ ಮಾಧ್ಯಮ ಶಾಲೆಗಳ ವಿದ್ಯಾರ್ಥಿಗಳಿಗೆ ಪಠ್ಯವಾಗಿ ನಿಗದಿಪಡಿಸಲಾಗಿದೆ. ಪಠ್ಯಪುಸ್ತಕದ ಪರಿವಿಡಿಯಲ್ಲಿ ಮೂರು ಭಾಗಗಳು ಇವೆ. ಅದರಲ್ಲಿ ಮೊದನೆಯ ಭಾಗವು ಪೂರ್ವಸಿದ್ಧತಾ ಪಾಠಗಳು. ಅದರಲ್ಲಿ ಚುಕ್ಕಿ ಸೇರಿಸು, ಅಪಾಯದಿಂದ ಪಾರಾದ ಪಾರಿವಾಳಗಳು, ಗುರುವಾದ ಜೇಡರಹುಳು, ಆಸೆ, ಗಾಳಿ ಪಟ ಎಂಬ ಸಿದ್ಧತಾ ಪಾಠಗಳನ್ನು ಸೇರಿಸಲಾಗಿದೆ. ಎರಡನೆಯ ಭಾಗದಲ್ಲಿ ಗದ್ಯ ಮತ್ತು ಪದ್ಯದ ಪಾಠಗಳು ಇವೆ. ನಮ್ಮ ದೇಶ ನನ್ನ ಜನ(ಗದ್ಯ), ಕನ್ನಡನುಡಿ, (ಪದ್ಯ), ನವಿಲು(ಗದ್ಯ), ಗೂಡಿನಿಂದ ಬಾನಿನೆಡೆಗೆ(ಪದ್ಯ), ಹಸ್ತರೇಖೆ ಬದಲಿಸಿದ ಬಾಲಕ(ಗದ್ಯ), ಹಬ್ಬಗಳು(ಗದ್ಯ), ಸಾರುತಿದೆ ಸೃಷ್ಟಿ(ಪದ್ಯ), ಸಾಹಸಿ ಮಹಿಳೆಯರು(ಗದ್ಯ), ಅಮ್ಮ(ಪದ್ಯ), ದೀರಬಾಲಕ ನರೇಂದ್ರ(ಗದ್ಯ), ಉದಯರಾಗ (ಪದ್ಯ), ನರಿ–ದ್ರಾಕ್ಷಿ–ಟಮೋಟೊ (ಗದ್ಯ), ಮಗು–ಚಂದ–ಹರಕೆ (ಪದ್ಯ), ಗಾಂಧೀಜಿ ಜೀವನದ ನೈಜ ಸಂಗತಿಗಳು(ಗದ್ಯ), ಶ್ರವಣಕುಮಾರ (ಗದ್ಯ), ಬಕಾಸುರರ ವಧೆ(ಗದ್ಯ), ಭಾಗ ಮೂರರಲ್ಲಿ ಪೂರಕ ಓದು ಪತ್ರಲೇಖನ, ಭಾಷಾ ಚಟುವಟಿಕೆಗಳು, ೧,೨,೩,೪ ಮತ್ತು ೫ ನುಡಿಗಟ್ಟುಗಳು, ಗಾದೆ ಮಾತುಗಳು ಇವೆ. ಪ್ರತಿ ಪಾಠಕ್ಕೂ ಮತ್ತು ಪದ್ಯಗಳಿಗೂ ಭಾಷಾಭ್ಯಾಸ ಚಟುವಟಿಕೆಗಳಿವೆ.

ತಿಳಿಕನ್ನಡ ದ್ವಿತೀಯ ಭಾಷಾ ಕನ್ನಡ ಪುಠ್ಯಪುಸ್ತಕ ಆರನೆಯ ತರಗತಿಯದ್ದಾಗಿದ್ದು, ಇದನ್ನು ಕರ್ನಾಟಕ ಪಠ್ಯಪುಸ್ತಕ ಸಂಘದವರು ಸಿದ್ಧಪಡಿಸಿದ್ದಾರೆ. ಇದರಲ್ಲಿ ಪರಿವಿಡಿ ಇದ್ದು, ಭಾಗ-೧ರಲ್ಲಿ ಪೂರ್ವಸಿದ್ಧತಾ ಪಾಠಗಳು, ಚಿತ್ರನೋಡಿ ಭಾವ ಸಂಬಂಧ ತಿಳಿ, ಚಿತ್ರನೋಡಿ ವಿವರ ಹೇಳು, ಚಿತ್ರನೋಡಿ ಕಥೆ ಹೇಳು, ಚಿತ್ರನೋಡಿ ಘೋಷಣೆಗಳನ್ನು ಪೂರ್ಣಮಾಡು ಎಂಬ ಪಾಠಗಳು ಇವೆ.

ಭಾಗ-೨ರಲ್ಲಿ ಗದ್ಯ ಮತ್ತು ಪದ್ಯ ಪಾಠಗಳಿವೆ. ಗದ್ಯದಲ್ಲಿ ತೋಳ ಬಂತು ತೋಳ, ಕೂಗತಿದೆ ಪಕ್ಷಿ, ಪಂಚತಂತ್ರ, ಎದೆಗುಂದದ ಧೀರರು, ಸಾಹಸಿ ಮೊನಾಲಿಸಾ, ಮಲ್ಲಕಂಬ, ದೇಶಪ್ರೇಮಿ ಕವಿ ಇಕ್ಬಾಲ್, ನಿನ್ನಲ್ಲೂ ಅದ್ಭುತ ಶಕ್ತಿಯಿದೆ ಎಂಬ ಪಾಠಗಳಿವೆ. ಪದ್ಯಗಳಲ್ಲಿ ಬಾ ಬೇಗ ಸೂರ್ಯ, ನಮ್ಮೂರ ಕೆರೆ, ಕನ್ನಡಮ್ಮ , ಐಕ್ಯಗಾನ, ಸುಂಟರಗಾಳಿ, ಚುಟುಕುಗಳು ಎಂಬ ಪದ್ಯಗಳಿವೆ. ಕೊಡಿ ನನ್ನ ಬಾಲ್ಯವ, ವೀರರಾಣಿ ಕೆಳದಿ ಚೆನ್ನಮ್ಮ ಎಂಬ ಎರಡು ನಾಟಕಗಳಿವೆ.[೨]

ಭಾಗ ೩ ರಲ್ಲಿ ಪೂರಕ ಓದಿಗಾಗಿ ಪತ್ರಲೇಖನ, ಪುಣ್ಯಕೋಟಿ, ಜೀವನೋತ್ಸಾಹ, ತಾಯಿಯ ನೆನಪು-ಆಕಾಶಬುಟ್ಟಿ ಎಂಬ ಪಾಠಗಳಿವೆ. ಈ ಪಠ್ಯಗಳಲ್ಲಿರುವ ಎಲ್ಲಾ ಪಠ್ಯಗಳು ಚಿತ್ರಸಹಿತವೇ ಇವೆ. ಚಿತ್ರಗಳಿಂದ ವಿದ್ಯಾರ್ಥಿಗಳಿಗೆ ಮನಮುಟ್ಟವಂತೆ ಇದ್ದರೂ ಸಹ ವಿದ್ಯಾರ್ಥಿಗಳು ಹೇಗೆ ಓದು ಮತ್ತು ಬರಹದಲ್ಲಿ ವ್ಯತ್ಯಾಸಗಳನ್ನು ಮಾಡುತ್ತಾರೆ ಎಂಬುದನ್ನು ಗಮನಿಸಲಾಗಿದೆ.

ಏಳನೇ ತರಗತಿ ಭಾಗ-೧ರಲ್ಲಿ ಪೂರ್ವ ಸಿದ್ಧತಾ ಪಾಠಗಳನ್ನು ನೀಡಲಾಗಿದ್ದು, ಅದರಲ್ಲಿ ಚಿತ್ರನೋಡಿ ಉತ್ತರಿಸಿ, ಚಿತ್ರ ಸರಣಿ ನೋಡಿ ಕಥೆ ಹೇಳು, ಕಥೆ ಓದಿ ಪ್ರಶ್ನೆಗಳಿಗೆ ಉತ್ತರಿಸಿ ಎಂಬ ಅಂಶಗಳು ಮಕ್ಕಳ ಮಾನಸಿಕ ಬೌದ್ಧಿಕತೆಯನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಭಾಗ-೨ರಲ್ಲಿ ಗದ್ಯ ಮತ್ತು ಪದ್ಯದ ಪಾಠಗಳಿದ್ದು, ನಿತ್ಯೋತ್ಸವ, (ಪದ್ಯ), ಅನ್ನದಾನ(ಗದ್ಯ), ಭರತ ಭೂಮಿ ನನ್ನತಾಯಿ (ಪದ್ಯ), ಕೈ ಬರೆಹ(ಗದ್ಯ), ಅನ್ನದಾತ (ಪದ್ಯ), ಮಿತ್ರರ ಸಮಾಗಮ (ಗದ್ಯ), ಶ್ರಾವಣ ಬಂತು ಕಾಡಿಗೆ(ಪದ್ಯ), ಕೊಳಲ ಜೋಗಿ (ಗದ್ಯ), ದಾನಚಿಂತಾಮಣಿ ಅತ್ತಿಮಬ್ಬೆ (ಗದ್ಯ), ಈ ನೆಲೆ ಈ ಜಲ (ಪದ್ಯ), ಜಾತ್ರೆಯಲ್ಲಿ ಒಂದು ಸುತ್ತು(ಗದ್ಯ), ಅಂತಿಮ ವಿದಾಯ (ಗದ್ಯ), ಜಾಣ ಆಮೆ(ಪದ್ಯ), ತರಕಾರಿಗಳ ಮೇಳ(ಗದ್ಯ), ಬಂಡೆದ್ದ ಮುಂಡರಗಿ ಭೀಮರಾಯ(ಗದ್ಯ), ಸರ್ವಜ್ಞನ ವಚನಗಳು (ಪದ್ಯ) ಹಾಗೆಯೇ ಭಾಗ-೩ರಲ್ಲಿ ಪೂರಕವಾದ ಓದಿಗಾಗಿ ಗೆಳತಿಗೊಂದು

ಪತ್ರ, ಶಿಕ್ಷಕನಿಗೊಂದು ಗುಡಿ ಎಂಬ ಲೇಖನವನ್ನು ಬರೆಯಲು ವಿದ್ಯಾರ್ಥಿಗಳಿಗೆ ತಿಳಿಸಲಾಗಿದೆ. ಈ ರೀತಿಯಾಗಿ ೭ನೇ ತರಗತಿಯಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡ ಭಾಷೆಯನ್ನು ಅಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಪಠ್ಯಕ್ರಮವನ್ನು ಅಳವಡಿಸಲಾಗಿದೆ.

**ವಿಶ್ಲೇಷಣೆ**

ಈ ರೀತಿಯಾಗಿ ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳಿಗೆ ದ್ವಿತೀಯ ಭಾಷೆಯಾಗಿ ತಿಳಿ ಕನ್ನಡ ಎನ್ನುವ ಶೀರ್ಷಿಕೆಯಲ್ಲಿ ಪಠ್ಯಪುಸ್ತಕವನ್ನು ರಚನೆ ಮಾಡಲಾಗಿದೆ. ಐದನೇ ತರಗತಿಯಲ್ಲಿ ಒಟ್ಟು ಹದಿನಾರು ಪಾಠಗಳಿವೆ. ಹತ್ತು ಗದ್ಯ ಮತ್ತು ಐದು ಪದ್ಯಗಳಿವೆ. ಪೂರ್ವಸಿದ್ಧತಾ ಪಾಠಗಳು ಐದು ಮತ್ತು ಪೂರಕ ಓದು ನಾಲ್ಕು. ಒಟ್ಟಾರೆಯಾಗಿ ಇಪ್ಪತ್ತುನಾಲ್ಕು ಪಾಠ್ಯಂಶಗಳನ್ನೊಳಗೊಂಡಿದೆ. ಮುಂದುವರೆದು ಆರನೇ ತರಗತಿಯಲ್ಲಿ ನಾಲ್ಕು ಪೂರ್ವಸಿದ್ಧತಾ ಪಾಠಗಳು, ಎಂಟು ಗದ್ಯ ಪಾಠಗಳು, ಏಳು ಪದ್ಯಗಳು ಮತ್ತು ಎರಡು ನಾಟಕಗಳು ಹಾಗೂ ನಾಲ್ಕು ಪೂರಕ ಓದು ಅಂಶಗಳನ್ನು ಗಮನಿಸಬಹುದು. ಒಟ್ಟಾರೆಯಾಗಿ ೨೫ ಪಠ್ಯಾಂಶಗಳನ್ನೊಳಗೊಂಡಿದೆ. ಹಾಗೆಯೇ ಏಳನೇ ತರಗತಿಯಲ್ಲಿ ಮೂರು ಪೂರ್ವಸಿದ್ಧತಾ ಪಾಠಗಳು, ಹನ್ನೊಂದು ಗದ್ಯ ಪಾಠಗಳು, ಏಳು ಪದ್ಯಗಳು ಮತ್ತು ಎರಡು ಪೂರಕ ಓದು ಅಂಶಗಳನ್ನು ಒಳಗೊಂಡಂತೆ ಒಟ್ಟು ೨೩ ಪಠ್ಯಾಂಶಗಳನ್ನು ಒಳಗೊಂಡಿದೆ.

ಮೊದಲನೆಯದಾಗಿ ಎಲ್ಲಾ ತರಗತಿಗಳಿಗೂ ಪೂರ್ವಸಿದ್ಧತಾ ಪಾಠಗಳನ್ನು ಐದು, ನಾಲ್ಕು ಮತ್ತು ಮೂರರಂತೆ ಇಳಿಕಾ ಕ್ರಮದಲ್ಲಿ ಒಂದೊಂದು ಪಾಠವನ್ನು ಕಡಿಮೆ ಮಾಡುತ್ತಾ ರಚಿಸಿರುವುದನ್ನು ಗಮನಿಸಬಹುದು. ವಿದ್ಯಾರ್ಥಿಗಳ ಗಮನವನ್ನು ತರಗತಿ ವಾತಾವರಣಕ್ಕೆ ಆಸಕ್ತಿಯಿಂದ ಸೆಳೆಯಲು ಪೂರ್ವಸಿದ್ಧತಾ ಪಾಠಗಳು ಸಹಕಾರಿಯಾಗುತ್ತವೆ. ಇವುಗಳಲ್ಲಿ ಚುಕ್ಕಿ ಸೇರಿಸು, ಚಿತ್ರನೋಡಿ ಕಥೆ ಹೇಳುವುದು, ಒಂದು ಘಟನೆಯನ್ನು ಹೇಳುವುದು ಸಾಮಾನ್ಯ ಅಂಶವಾಗಿದೆ. ವಿದ್ಯಾರ್ಥಿಗಳ ಆಸಕ್ತಿಯನ್ನು ಕೇಂದ್ರೀಕರಿಸುವ ನಿಟ್ಟಿನಲ್ಲಿ ಇವುಗಳನ್ನು ರಚಿಸಿರುವುದನ್ನು ಗಮನಿಸಬಹುದು. ಸೃಜನಶೀಲತೆ, ತಾರ್ಕಿಕ ಚಿಂತನೆ, ವೈಜ್ಞಾನಿಕ ಮನೋಭಾವನೆ ಬೆಳೆಸುವುದು ಪೂರ್ವಸಿದ್ಧತಾ ಪಾಠಗಳ ಮುಖ್ಯ ಉದ್ದೇಶವಾಗಿದೆ.

ಎರಡನೆಯದಾಗಿ ವ್ಯಾಕರಣದ ಕಲಿಕೆಯಿಂದ ಭಾಷಾ ಬೋಧನಾ ವಿಧಾನವನ್ನು ಅಳವಡಿಸಿಕೊಂಡಿರುವುದನ್ನು ಗಮನಿಸಬಹುದು. ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ವಿದ್ಯಾರ್ಥಿಗಳಿಗೆ ಕನ್ನಡ ಕಲಿಕೆಯನ್ನು ಸುಲಭೀಕರಿಸಲು "ಸೈದ್ಧಾಂತಿಕ

ವ್ಯಾಕರಣ" ಎಂಬ ಪರಿಕಲ್ಪನೆಯಲ್ಲಿ ಕನ್ನಡ ಕಲಿಕೆಯನ್ನು ಬೋಧಿಸುತ್ತಿರುವುದನ್ನು ಗಮನಿಸಬಹುದು.

- **ವ್ಯಾಕರಣಾಂಶಗಳ ಅವಲೋಕನ**

ಐದನೇ ತರಗತಿಯಲ್ಲಿ ಸೈದ್ಧಾಂತಿಕ ವ್ಯಾಕರಣದಲ್ಲಿ ಕನ್ನಡ ಭಾಷೆಯ ಮೂಲ ಅಕ್ಷರಗಳನ್ನು ವರ್ಣಮಾಲೆಯನ್ನು ಪರಿಚಯಿಸಿದ್ದಾರೆ. ಪ್ರಾಥಮಿಕ ಹಂತ ಮುಗಿಸಿ ಹಿರಿಯ ಪ್ರಾಥಮಿಕ ಹಂತಕ್ಕೆ ಬಂದ ವಿದ್ಯಾರ್ಥಿಗಳಿಗೆ ವರ್ಣಮಾಲೆಯನ್ನು ಮತ್ತು ಗುಣಿತಾಕ್ಷರಗಳನ್ನು ಪುನರಾವರ್ತಿಸಿ ಅಧ್ಯಯನ ಮಾಡುವಂತೆ ರಚನೆ ಮಾಡಲಾಗಿದೆ. ಐದನೇ ತರಗತಿಯ ಪಠ್ಯಾಂಶಗಳನ್ನು ಗಮನಿಸಿದಾಗ ಕನ್ನಡ ಕಲಿಕೆಯಲ್ಲಿ ವ್ಯಾಕರಣದ ಪಾತ್ರ ತಟಸ್ಥವಾಗಿರುವುದು ಕಂಡು ಬರುತ್ತದೆ. ವರ್ಣಮಾಲೆ ಮತ್ತು ಗುಣಿತಾಕ್ಷರಗಳೇ ಪ್ರಧಾನ ವ್ಯಾಕರಣಾಂಶಗಳಾಗಿವೆ.

ಆರನೇ ತರಗತಿಯ ತಿಳಿ ಕನ್ನಡ ದ್ವಿತೀಯ ಭಾಷಾ ಪಠ್ಯವನ್ನು ಗಮನಿಸಿದಾಗ ವ್ಯಾಕರಣಾಂಶಗಳ ಬಳಕೆ ಅಧಿಕವಾಗಿ ಕಂಡು ಬರುತ್ತದೆ. ನಾವು ಮಾತನಾಡುವ ಕನ್ನಡ ಭಾಷೆಯ ಅಕ್ಷರಗಳನ್ನು ತಿಳಿಯೋಣ ಎನ್ನುವ ಶೀರ್ಷಿಕೆಯ ಅಡಿಯಲ್ಲಿ ವರ್ಣಮಾಲೆ ಮತ್ತು ಗುಣಿತಾಕ್ಷರಗಳನ್ನು ಪುನರಾವಲೋಕನ ಮಾಡಿರುವುದನ್ನು ಗಮನಿಸಬಹುದು. ಮುಂದುವರೆದಂತೆ ಐದನೇ ಪಾಠದಲ್ಲಿ 'ಪದ' ಮತ್ತು 'ವಾಕ್ಯದ' ಪ್ರಕಾರಗಳನ್ನು ಪರಿಚಯಿಸಿದ್ದಾರೆ. ಪ್ರಶ್ನಾರ್ಥಕ, ಸಾಮಾನ್ಯ, ಭಾವಸೂಚಕ, ಆಜ್ಞಾರ್ಥಕ ವಾಕ್ಯಗಳು.

**ಉದಾಹರಣೆ**

- ಶ್ರೀಮತಿ ಸಾವಿತ್ರಿ ಯಾವ ಜಿಲ್ಲೆಯ ಅಧಿಕಾರಿಯಾಗಿದ್ದಾರೆ? (ಪ್ರಶ್ನಾರ್ಥಕ ವಾಕ್ಯ)
- ಶ್ರೀಮತಿ ಸಾವಿತ್ರಿ ರಾಯಚೂರು ಜಿಲ್ಲೆಯ ಜಿಲ್ಲಾಧಿಕಾರಿ. (ಸಾದಾ/ ಸಾಮಾನ್ಯ ವಾಕ್ಯ)
- ಓಹೋ! ಅವರು ಜಿಲ್ಲಾಧಿಕಾರಿ (ಭಾವ ಸೂಚಕ ವಾಕ್ಯ)
- ನೀನು ಮನೆಗೆ ಹೋಗು. (ಆಜ್ಞಾರ್ಥಕ ವಾಕ್ಯ)

ಈ ರೀತಿಯಾಗಿ ವಿವರಣೆ ನೀಡಲಾಗಿದೆ. ಕೇವಲ ಈ ನಾಲ್ಕು ವಾಕ್ಯಗಳನ್ನು ನೀಡಿ ವಾಕ್ಯಗಳ ವಿಧಗಳನ್ನು ಪರಿಚಯಿಸಲಾಗಿದೆ. ದ್ವಿತೀಯ ಭಾಷೆಯಾಗಿ ಕನ್ನಡ ಕಲಿಯುವ ವಿದ್ಯಾರ್ಥಿಗಳಿಗೆ ಈ ರೀತಿಯ ವಿವರಣೆಯಿಂದ ವಾಕ್ಯದ ಪ್ರಕಾರಗಳ ಪರಿಕಲ್ಪನೆ ಮೂಡುವುದೇ? ಎಂಬ ಸಂಶಯ ಮೂಡುತ್ತದೆ.

ವಾಕ್ಯ ಪ್ರಕಾರಗಳ ನಂತರ ವಚನಗಳು, ಏಕವಚನ, ಬಹುವಚನ ಪದಗಳ ಉದಾಹರಣೆಗಳನ್ನು ವಾಕ್ಯರೂಪದಲ್ಲಿ ನೀಡಿದ್ದಾರೆ. ಲಿಂಗಗಳ ಪರಿಕಲ್ಪನೆಯನ್ನು ಮೂಡಿಸಿದ್ದಾರೆ. ವಿರುದ್ಧಾರ್ಥಕ ವಾಕ್ಯಗಳನ್ನು ಪರಿಚಯಿಸಿದ್ದಾರೆ.

ಉದಾಹರಣೆ : ಪ್ರಕಾಶ ಇತ್ತ ಕಡೆ ಬಾ (ಆದೇಶ)

ನೀನು ಸ್ವಲ್ಪ ನೀರು ಕೊಡುವೆಯಾ? (ಬೇಡಿಕೆ/ ಕೋರಿಕೆ)

ಈ ರೀತಿಯಾಗಿ ಉದಾಹರಣೆಗಳನ್ನು ನೀಡಿರುವುದನ್ನು ಗಮನಿಸಬಹುದಾಗಿದೆ.

ಸಂಧಿಗಳ ಪರಿಚಯ ಮಾಡದೆಯೇ ನೇರವಾಗಿ 'ಆಗಮ ಸಂಧಿ'ಗೆ ಉದಾಹರಣೆಗಳನ್ನು ನೀಡಿ 'ಯ' ಮತ್ತು 'ವ' ಆಗಮಸಂಧಿ ಎಂದು ವಿವರಿಸಿದ್ದಾರೆ. ಪೂರ್ಣವಾದ ಮಾಹಿತಿಯನ್ನು ನೀಡದೆ ಇರುವುದನ್ನು ಗಮನಿಸಬಹುದಾಗಿದೆ.

ಕೈ+ಆಡಿಸು =ಕೈಯಾಡಿಸುವ

ಮೈ+ಅನ್ನು = ಮೈಯನ್ನು

ಹೊಲ+ಅನ್ನು= ಹೊಲವನ್ನು

ಮನೆ+ ಅನ್ನ= ಮನವನ್ನು

ವಾಕ್ಯರಚನಾ ಸಂದರ್ಭದಲ್ಲಿ ಬಳಸುವ ಲೇಖನ ಚಿಹ್ನೆಗಳಾದ ಪೂರ್ಣವಿರಾಮ(.), ಅರ್ಧವಿರಾಮ(;), ಅಲ್ಪವಿರಾಮ(,), ಪ್ರಶ್ನಾರ್ಥಕ(?) ಮತ್ತು ಭಾವಸೂಚಕ(!) ಚಿಹ್ನೆಗೆ ವಾಕ್ಯಗಳನ್ನು ನೀಡಿ ಉದಾಹರಿಸಿದ್ದಾರೆ. ಕೊನೆಯದಾಗಿ ನಾಮಪದ, ನಾಮಪದದ ವಿಧಗಳಾದ ರೂಢನಾಮ, ಅಂಕಿತನಾಮ ಮತ್ತು ಅನ್ವರ್ಥಕನಾಮಕ್ಕೆ ಉದಾಹರಣೆಗಳನ್ನು ನೀಡಿ ಸಂಕ್ಷಿಪ್ತವಾಗಿ ವಿವರಿಸಿದ್ದಾರೆ.

ಈ ರೀತಿಯಾಗಿ ಆರನೇ ತರಗತಿಯಲ್ಲಿ ಸೈದ್ಧಾಂತಿಕ ವ್ಯಾಕರಣದ ಶೀರ್ಷಿಕೆಯಲ್ಲಿ ವ್ಯಾಕರಣಾಂಶಗಳ ಸಂಕ್ಷಿಪ್ತ ಪರಿಚಯ ನೀಡಿರುವುದನ್ನು ಗಮನಿಸಬಹುದು. ಒಂದು ವರ್ಷದಲ್ಲಿ ಕಾರ್ಯನಿರ್ವಹಿಸುವ ಶಾಲಾ ದಿನಗಳು ಸರಿಸುಮಾರು ೨೨೫ ರಿಂದ ೨೩೫ ದಿನಗಳು. ಈ ದಿನಗಳಲ್ಲಿ ಪ್ರತಿದಿನ ಬೋಧನೆಗೆ ಸಿಗುವ ಅವಧಿ ೪೫ ನಿಮಿಷಗಳು ಮಾತ್ರ. ಬೋಧನೆಗೆ ಸಿಗುವ ಅವಧಿಗಳು ಪೂರ್ಣವಾಗಿ ನಿರ್ವಹಣೆ ಮಾಡಿಕೊಂಡರೂ ರಚಿಸಿರುವ ಪಠ್ಯಾಂಶಗಳನ್ನು ಸಂಪೂರ್ಣ ಬೋಧಿಸಲು ಸಾಧ್ಯವಿದೆಯೇ? ಎಂಬ ಅಂಶವನ್ನು ಪಠ್ಯಪುಸ್ತಕ ರಚನಾ ಸಮಿತಿ ಗಮನಿಸಬೇಕಾಗಿದೆ. ತರಗತಿ ಅವಧಿಯಲ್ಲಿ ಬೋಧನೆ, ಚಟುವಟಿಕೆ, ಭಾಷಾಭ್ಯಾಸ ಮತ್ತು ವ್ಯಾಕರಣ ಬೋಧನೆಗೆ ಸಮಯದ

ಅಭಾವವಿದೆ ಎನ್ನುವ ಮಾಹಿತಿಯನ್ನು ಸ್ವತಃ ಶಿಕ್ಷಕರು ನೀಡಿದ್ದಾರೆ. ಕಾರಣ ಪಠ್ಯ ಪುಸ್ತಕದ ಸ್ವರೂಪದಲ್ಲಿ ಬದಲಾವಣೆಗಳನ್ನು ಮಾಡಿ ಪಠ್ಯಾಂಶಗಳ ಹೊರೆಯನ್ನು ಕಡಿಮೆ ಮಾಡಬೇಕಾಗಿದೆ.

ಐದನೇ ತರಗತಿಯಲ್ಲಿ ವರ್ಣಮಾಲೆ ಮತ್ತು ಗುಣಿತಾಕ್ಷರಗಳನ್ನು ಮಾತ್ರ ವ್ಯಾಕರಣಾಂಶ ಬೋಧನೆಯಲ್ಲಿ ನೀಡಿರುವುದನ್ನು ಗಮನಿಸಲಾಗಿದೆ. ಮುಂದುವರೆದು ಆರನೇ ತರಗತಿಯಲ್ಲಿ ಅಧಿಕ ಪ್ರಮಾಣದ ವ್ಯಾಕರಣಾಂಶಗಳನ್ನು ರಚಿಸಿ ಅಳವಡಿಸಿರುವುದನ್ನು ಕಾಣಬಹುದಾಗಿದೆ. ಆರನೇ ತರಗತಿಯಲ್ಲಿ ಹಲವು ವ್ಯಾಕರಣಾಂಶಗಳನ್ನು ಕಲಿಯುತ್ತಾರೆ. ಆದರೆ ಏಳನೇ ತರಗತಿಯಲ್ಲಿ ಆರನೇ ಪಾಠದಲ್ಲಿ ಲೇಖನ ಚಿಹ್ನೆಗಳ ವಿವರಣೆಯನ್ನು ಅಭ್ಯಾಸ ಮಾಡುತ್ತಾರೆ. ಮುಂದುವರೆಸಿ ಹದಿನಾರನೇ ಪಾಠದಲ್ಲಿ ಕೊನೆಯ ಭಾಗದಲ್ಲಿ ಕ್ರಿಯಾಪದದ ಪರಿಕಲ್ಪನೆಯನ್ನು ನೀಡಿದ್ದಾರೆ. ವ್ಯಾಕರಣಾಂಶಗಳಿಗೆ ನೀಡಬೇಕಾದ ಮಹತ್ವವನ್ನು ನೀಡದೇ ಇರುವುದು ಕಂಡು ಬರುತ್ತದೆ. ತರಗತಿವಾರು ಕ್ರಮಾನುಸಾರ ವಿಂಗಡಣೆ ಮಾಡದೆ ಐದು ಮತ್ತು ಏಳನೇ ತರಗತಿಯಲ್ಲಿ ವ್ಯಾಕರಣಾಂಶಗಳನ್ನು ಕಡೆಗಣಿಸಿರುವುದನ್ನು ಸ್ಪಷ್ಟವಾಗಿ ಗಮನಿಸಲಾಗಿದೆ.

**ಉದಾಹರಣೆ :** ಹಸು ಹಾಲು ಕೊಡುತ್ತದೆ.

ರಾಹುಲ್ ಶುದ್ಧವಾಗಿ ಬರೆಯುತ್ತಾನೆ.

ಅಡ್ಡಗೆರೆ ಹಾಕಿದ ಪದಗಳೆ ಕ್ರಿಯಾ ಪದಗಳು ಎಂದು ಸಂಕ್ಷಿಪ್ತ ವಿವರಣೆಯನ್ನು ನೀಡಿರುವುದನ್ನು ಗಮನಿಸಬಹುದು. ಕೊನೆಯದಾಗಿ ವಿಭಕ್ತಿ ಪ್ರತ್ಯಯಗಳ ವಿವರಣೆಯನ್ನು ಉದಾಹರಣೆಗಳ ಮೂಲಕ ಚರ್ಚಿಸಿರುವುದನ್ನು ಗಮನಿಸಬಹುದು. ಈ ರೀತಿಯಾಗಿ ಐದು, ಆರು ಮತ್ತು ಏಳನೇ ತರಗತಿಯ ತಿಳಿಕನ್ನಡ ಪಠ್ಯದಲ್ಲಿ ವ್ಯಾಕರಣಾಂಶಗಳನ್ನು ರಚಿಸಿರುವುದನ್ನು ಗಮನಿಸಬಹುದಾಗಿದೆ.

- **ಭಾಷಾಭ್ಯಾಸ ಚಟುವಟಿಕೆಗಳು**

ಐದು, ಆರು ಮತ್ತು ಏಳನೆಯ ತರಗತಿಯ ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕಗಳನ್ನು ಗಮನಿಸಿದಾಗ ಮೂರು ತರಗತಿಗಳ ಭಾಷಾಭ್ಯಾಸದ ಚಟುವಟಿಕೆಗಳ ರಚನೆಯಲ್ಲಿ ಒಂದೇ ಕ್ರಮವನ್ನು ಅನುಸರಿಸಿರುವುದನ್ನು ಅವಲೋಕಿಸಲಾಗಿದೆ.

**ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಿರಿ :**

ಚಿತ್ತ, ಭಿನ್ನವಿಸು, ಪರಿಪರಿಯಾಗಿ, ಕಣಜ, ಪರಿಚಯ, ಕಲರವ, ತಂಬೆಲರು, ಧಾವಂತ, ಅಪೂರ್ವ, ಕಣ್ಮಣಿ, ಮುಕ್ತಿ.

ಈ ಮೇಲಿನ ಉದಾಹರಣೆಗಳನ್ನು ಗಮನಿಸಿದಾಗ ಇಲ್ಲಿ ನೀಡಿರುವ ಪದಗಳಿಗೆ ಸ್ವಂತ ವಾಕ್ಯಗಳನ್ನು ರಚಿಸುವಾಗ ವಿದ್ಯಾರ್ಥಿಗಳು ಸಮಸ್ಯೆಗಳನ್ನು ಎದುರಿಸುತ್ತಾರೆ. ಆ ಸಂದರ್ಭದಲ್ಲಿ ಬೋಧಕರು ಪಠ್ಯವನ್ನು ಬೋಧಿಸುವಾಗ ಒಂದು ವಾಕ್ಯಕ್ಕೆ ಹಲವು ಉದಾಹರಣೆಗಳನ್ನು ವಿವರಿಸಿದಾಗ ವಿದ್ಯಾರ್ಥಿಗಳು ಅರ್ಥೈಸಿಕೊಂಡು ಬರೆಯುವ ಪ್ರಯತ್ನ ಮಾಡುತ್ತಾರೆ.

- **ಸಮನಾರ್ಥಕ ಪದಗಳು**

| **ಮೂಲರೂಪ** | **ಉಚ್ಚರಿಸುವ ರೂಪ** |
|---|---|
| ಪಠ್ಯದ ಪದಗಳು | ಶಿಕ್ಷಕರು ಬಳಸುವ ಪದಗಳು |
| ನೂರಾರು | ಹಂಡ್ರೆಸ್ಟ್‌ಆಫ್ |
| ಎಳೆಯವ | ಚಿಕ್ಕಮಗು/ ಚೋಟಾ ಬಚ್ಚೆ/ ಸ್ಕೂಲ್ ಬಾಯ್ |
| ಮೂಡಣ | ಸೂರ್ಯ ಹುಟ್ಟುವ ದಿಕ್ಕು / ಈಸ್ಟ್ |
| ಕೆಸರಾಯ್ತು | ಗಲೀಜಾಯ್ತು |
| ಭಗಿನಿ | ಅಕ್ಕ ಅಥವಾ ತಂಗಿ |
| ಮೂದಲಿಸು | ಬಯ್ಯುವುದು |
| ಹರ್ಷೋದ್ಗಾರ | ಖುಷಿ ಕೊಡುವುದು |
| ಪೂರ್ವಿಕರು | ಹಿಂದಿನ ಜನ, ಹಿಂದಿನ ಕಾಲದವರು |
| ತತ್ರಾಣಿ | ಮಣ್ಣಿನ ಪ್ಲೇಟು |
| ದವಾಖಾನೆ | ಆಸ್ಪತ್ರೆ, ಹಾಸ್ಪಿಟಲ್ |
| ಕೊಡುಗೆ | ಗಿಫ್ಟ್ |
| ತಿಂಡಿ | ನವೆ, ಉಪಾಹಾರ |

ಈ ರೀತಿಯಾಗಿ ಪಠ್ಯ ಪುಸ್ತಕದಲ್ಲಿ ನೀಡಿರುವ ಪದಗಳಿಗೆ ಬದಲಾಗಿ ಸಮಾನವಾಗಿ ಅರ್ಥ ನೀಡುವ ಮತ್ತೊಂದು ಪದವನ್ನು ಹೇಳಿ ವಿವರಿಸಿದಾಗ ವಿದ್ಯಾರ್ಥಿಗಳು ಅರ್ಥಮಾಡಿಕೊಳ್ಳುತ್ತಾರೆ. ಕಾರಣ ಪ್ರದೇಶದಿಂದ ಪ್ರದೇಶಕ್ಕೆ ಕನ್ನಡ ಭಾಷೆಗೂ ಅನ್ಯ ಭಾಷೆಗಳಿಗೆ ವ್ಯತ್ಯಾಸವಾಗುವುದು. ಭಾಷಾ ವಿಭಿನ್ನತೆ ಇರುವುದನ್ನು ಪದಗಳ ಮೂಲಕ ಗಮನಿಸಬಹುದು. ದಿಕ್ಕುಗಳಿಗೆ ಸಂಸ್ಕೃತ ಪದಗಳನ್ನು ಬಳಸದೆ ಮೂಡಣ ಪೂರ್ವ, ಪಡುವಣ – ಪಶ್ಚಿಮ ಎಂದು ಕನ್ನಡೀಕರಿಸಿ ಸೌತ್, ವೆಸ್ಟ್, ಈಸ್ಟ್ ಎಂದು ಇಂಗ್ಲಿಷಿನಲ್ಲಿ ಅನುವಾದಿಸಿ ಹೇಳುವುದರಿಂದ ಪದಗಳು ಸ್ಪಷ್ಟತೆಯನ್ನು ಅರ್ಥೈಸಿಕೊಳ್ಳುತ್ತಾರೆ ಎಂಬುದು ಬೋಧಕರ ಅಭಿಪ್ರಾಯವಾಗಿದೆ.

**ಕನ್ನಡ ಪದಗಳಿಗೆ ಬೋಧಕರು ಬಳಸುವ ಆಂಗ್ಲ ಪದಗಳು**

| **ಮೂಲರೂಪ** | **ಉಚ್ಚರಿಸುವ ರೂಪ** |
|---|---|
| ಸಾಕು | ಇಟ್ಸ್ ಇನ್‌ಅಫ್ |
| ಹರಸು | ಬ್ಲೆಸ್ |
| ಉಪವಾಸ | ಫಾಸ್ಟಿಂಗ್ |
| ಘಂಟೆ | ಬೆಲ್ |
| ಸಮಯ | ಟೈಂ |
| ಶುಭೋದಯ | ಗುಡ್‌ಮಾರ್ನಿಂಗ್ |
| ಸರ್ಕಾರ | ಗವರ್ನ್‌ಮೆಂಟ್ |
| ಕುರ್ಚಿ | ಚೇರ್ |
| ಗಮನಿಸು | ಲಿಸನ್ |
| ಮಾತೆ /ಅಮ್ಮ | ಮದರ್/ ಮಮ್ಮಿ |
| ಮೇಜು | ಟೇಬಲ್ |
| ಸಿದ್ಧನಾಗು | ರೆಡಿಯಾಗು |
| ಪರೀಕ್ಷೆ | ಎಕ್ಸಾಮ್ |
| ಯೋಜನೆ | ಪ್ಲಾನ್ |
| ಆಕಾಶ | ಸ್ಕೈ |
| ವಿರಾಮ | ಲೀಸರ್ |
| ಕೊಡುಗೆ | ಗಿಫ್ಟ್ |
| ಪರಿಸರ | ಎನ್ವಿರಾನ್ಮೆಂಟ್ |
| ಜನಸಂಖ್ಯೆ | ಪಾಪ್ಯುಲೇಷನ್ |
| ದುಃಖ | ಸ್ಯಾಡ್ |

ಈ ರೀತಿಯಾಗಿ ಪದಗಳನ್ನು ಕನ್ನಡ ಭಾಷಾ ಶಿಕ್ಷಕರು ಕನ್ನಡ ಬೋಧನೆಯ ಸಂದರ್ಭದಲ್ಲಿ ಬಳಸುತ್ತಾರೆ. ಪ್ರಥಮ ಭಾಷೆ ಕನ್ನಡವನ್ನು ಬೋಧಿಸುವ ಸಂದರ್ಭದಲ್ಲಿ ಸಾಮಾನ್ಯವಾಗಿ ಆಂಗ್ಲ ಪದಗಳನ್ನು ವಿವರಣಾ ಸಂದರ್ಭದಲ್ಲಿ ಬಳಕೆ ಮಾಡುವುದನ್ನು ಗಮನಿಸಬಹುದು. ಪ್ರಸ್ತುತ ಪರಿಸರದಲ್ಲಿ ಆಂಗ್ಲ ಭಾಷೆಯ ಪ್ರಭಾವ ಹೆಚ್ಚುತ್ತಿರುವುದರಿಂದ ಕನ್ನಡ ಕಲಿಕೆಯಲ್ಲಿ ಆಂಗ್ಲ ಭಾಷಾ ಪದಗಳನ್ನು ಬೋಧಕರು ಬಳಸುತ್ತಿರುವುದು

ಅನಿವಾರ್ಯವಾಗಿದೆ. ಆಂಗ್ಲ ಮಾಧ್ಯಮವಾಗಿರುವುದರಿಂದ ಕೆಲವೊಮ್ಮೆ ವಿದ್ಯಾರ್ಥಿಗಳಿಗೆ ಕನ್ನಡದ ಪದಗಳನ್ನು ಬೇಗ ಅರ್ಥೈಸಿಕೊಳ್ಳುವುದಕ್ಕೆ ಕಾರಣವಾಗುತ್ತದೆ. ಕನ್ನಡದಲ್ಲಿ ವಿವರಿಸಿದಾಗ ಅರ್ಥವಾಗದೇ ಇರುವ ಶಬ್ದಗಳು ಆಂಗ್ಲ ಭಾಷೆಯಲ್ಲಿ ಅನುವಾದಿಸಿ ಹೇಳಿದಾಗ ವೇಗವಾಗಿ ಅರ್ಥೈಸಿಕೊಳ್ಳುತ್ತಾರೆ ಎನ್ನುವ ಅಭಿಪ್ರಾಯವನ್ನು ಬೋಧಕ ವರ್ಗದವರು ನೀಡಿರುವ ಮಾಹಿತಿಯಲ್ಲಿ ಗಮನಿಸಲಾಗಿದೆ.

**ಕನ್ನಡ ಭಾಷಾ ಪಠ್ಯಗಳ ಭಾಷಾ ಶೈಲಿಯ ಅವಲೋಕನ**

ಭಾಷೆ ಪ್ರದೇಶದಿಂದ ಪ್ರದೇಶಕ್ಕೆ ಕಾಲದಿಂದ ಕಾಲಕ್ಕೆ ಸ್ವಲ್ಪ ಪ್ರಮಾಣದಲ್ಲಿ ಬದಲಾವಣೆಯು ಆಗುತ್ತಿರುತ್ತದೆ. ಭಾಷೆ ನಿರಂತರವಾಗಿ ಬದಲಾವಣೆಗೊಳಪಡುತ್ತದೆ. ಪ್ರಾದೇಶಿಕ ಭಿನ್ನತೆಯನ್ನೊಳಗೊಂಡ ಭಾಷೆಯನ್ನು ಆಧಾರವಾಗಿಟ್ಟುಕೊಂಡು ಕಾಲಾನುಕ್ರಮದಲ್ಲಿ ಪಠ್ಯಪುಸ್ತಕಗಳ ರಚನೆ ಮತ್ತು ಸ್ವರೂಪವನ್ನು ಭಿನ್ನವಾಗಿ ಮಾರ್ಪಡಿಸಲಾಗುತ್ತಿದೆ. ಪ್ರಸ್ತುತ ಕನ್ನಡ ಭಾಷಾ ಪಠ್ಯಗಳ ಭಾಷಾ ಶೈಲಿಯನ್ನು ಪ್ರಮುಖವಾಗಿ ಜನಪದೀಯ ಹಿನ್ನೆಲೆಯಿಂದ ಬಳಕೆಗೆ ತರಲಾಗಿದೆ. ಪಠ್ಯರಚನೆಯಲ್ಲಿ ಗದ್ಯ, ಪದ್ಯ ಮತ್ತು ನಾಟಕ ಶೈಲಿಯನ್ನು ಅಳವಡಿಸಲಾಗಿದೆ.

**ಪಠ್ಯಗಳಲ್ಲಿನ ಗದ್ಯ ಭಾಷಾ ಶೈಲಿ**

ಗದ್ಯದಲ್ಲಿ ಒಂದು ನಿರ್ದಿಷ್ಟವಾದ ವಿಚಾರವು ವಿಶಿಷ್ಟವಾದ ಭಾಷೆಯಲ್ಲಿ ರೂಪಿಸಲ್ಪಟ್ಟಿದ್ದು, ಇದರಲ್ಲಿ ಭಾಷೆಯ ಶಿಷ್ಟತೆ ಮತ್ತು ವಿಷಯದ ತರ್ಕಬದ್ಧತೆಗಳೆರಡನ್ನು ಕಾಣಬಹುದಾಗಿದೆ. ಕನ್ನಡ ಭಾಷಾ ಬೋಧನೆಯಲ್ಲಿ ಮಾತುಗಾರಿಕೆಯ ನಂತರ ಗದ್ಯ ಬೋಧನೆಯನ್ನು ಪ್ರಾರಂಭಿಸಲಾಗುತ್ತದೆ. ಗದ್ಯ ಮತ್ತು ಮಾತುಗಾರಿಕೆ ಎರಡರಲ್ಲೂ ಪರಸ್ಪರ ಸಾಮ್ಯತೆಯಿದೆ. ವಿಷಯ ಜ್ಞಾನ, ತಿಳುವಳಿಕೆ ಮತ್ತು ಅವುಗಳನ್ನು ಸೂಚಿಸುವ ವಿಧಾನಗಳು ಪ್ರಧಾನವಾಗಿರುತ್ತವೆ. ಗದ್ಯವು ಪ್ರಬಂಧ, ಜೀವನಚರಿತ್ರೆ, ಆತ್ಮಕಥನ, ವರದಿ, ದಿನಚರಿ, ವಿಮರ್ಶೆ, ಪ್ರಹಸನ, ಕಥೆ, ಹರಟೆ ಮೊದಲಾದ ಸಾಹಿತ್ಯ ಅಂಶಗಳ ಪ್ರಕಾರಗಳನ್ನು ಒಳಗೊಂಡಿರುವುತ್ತದೆ.[೨] ಐದು ಆರು ಮತ್ತು ಏಳನೇ ತರಗತಿಯಲ್ಲಿ ಪ್ರತಿಶತ ಗದ್ಯ ಭಾಗದ ಸಾಹಿತ್ಯ ಪ್ರಕಾರವನ್ನು ಹೆಚ್ಚು ಬಳಸಿರುವುದನ್ನು ಕಾಣಬಹುದು.

**ಉದಾಹರಣೆಗೆ**

ಸಾಹಸಿ ಮಹಿಳೆಯರು (ಗದ್ಯಪಾಠ: ಐದನೇ ತರಗತಿ) ಇದರಲ್ಲಿ ಆರ್.ಕಲ್ಯಾಣಮ್ಮ ಮತ್ತು ಸ್ವಾತಂತ್ರ್ಯ ಹೋರಾಟಗಾರ್ತಿ ಬಡಿಗೇರ ಸೀತಮ್ಮ ಇವರ ಜೀವನ ಚರಿತ್ರೆಯನ್ನು ಗಮನಿಸಬಹುದು. ಅಬಲೆಯರ ದೀನತೆ ಮತ್ತು ಮಕ್ಕಳ ಶೋಷಣೆಯ ಬಗೆಗೆ ಚಿಂತಿಸಿದರು.

ಅಂತವರ ನೋವು ಸಂಕಟಗಳನ್ನು ಪರಿಹರಿಸುವ ದಾರಿಯನ್ನು ಆರಿಸಿಕೊಂಡರು. ಹಣಕಾಸಿನ ಸಬಲತೆ ತಂದುಕೊಡಲು ದುಡಿದರು. ಈ ರೀತಿಯಾಗಿ ಗದ್ಯ ಭಾಷಾ ಶೈಲಿಯಲ್ಲಿ ಬರುವಂತಹ ನಾಮಪದ, ಕ್ರಿಯಾಪದ, ವಿಶೇಷಣ ಇತ್ಯಾದಿ ಅಂಶಗಳನ್ನು ಗಮನಿಸಿದರೆ ಭಾಷಾ ವಿಶೇಷತೆಯನ್ನು ತಿಳಿಯಬಹುದು. ಜೀವನದಲ್ಲಿ ಮೌಲ್ಯ ಬೆಳೆಸಿಕೊಳ್ಳುವ ನೀತಿಯನ್ನೊಳಗೊಂಡ ಗದ್ಯಪಾಠವನ್ನು ಅಳವಡಿಸಿರುವುದಕ್ಕೆ ಗಮನಿಸಬಹುದಾಗಿದೆ.

**ಉದಾಹರಣೆ :** ಮಲ್ಲಕಂಬ

(ಆರನೇ ತರಗತಿ ಗದ್ಯ ಪಾಠ–೧೩)

ಜನಪದೀಯ ಶೈಲಿಯಲ್ಲಿ ಜನಪದರ ಭಾಷೆಯನ್ನು ಬಳಸಿಕೊಂಡು ರಚಿಸಿದ ಒಂದು ಗದ್ಯ. ಸಾಂಪ್ರದಾಯ ಆಟಗಳು ಮಾಯವಾಗುತ್ತಿರುವ ಹಿನ್ನೆಲೆಯಲ್ಲಿ ಜನಪದ ಸಂಸ್ಕೃತಿಗೆ ಕನ್ನಡಿ ಹಿಡಿದಂತೆ ಈ ಗದ್ಯ ಭಾಗವನ್ನು ರಚಿಸಿದ್ದಾರೆ.

**ಉದಾಹರಣೆ :** *ದೇಖೋ ಭೈಯ್ಯಾ ಅವಾ ಹ್ಯಾಂಗ*

*ಹತ್ಯಾನ ನೋಡು, ಅಬಬ್ಬ ಕಂಬ*

*ತುದಿ ಮುಟ್ಟತಾನಂದ್ರ ಪಸಕ್ಕನೆ*

*ಜಾರಿ ಬಿಟ್ಟ, ಬಿದ್ದ.... ಬಿದ್ದ.... ನೋಡು*

ಇಲ್ಲಿ ಪ್ರಾದೇಶಿಕವಾಗಿ ಬೆಳಗಾವಿ, ಬಳ್ಳಾರಿ, ಕೊಪ್ಪಳ, ವಿಜಾಪುರ ಜಿಲ್ಲೆಗಳಲ್ಲಿ ಬಳಸುವ ಭಾಷೆಯ ಸೊಗಡು ವಿಶೇಷವಾಗಿದೆ.

*ದೇಖೋ... ನೋಡು, ಭಯ್ಯಾ, ಅಣ್ಣಾ/ ತಮ್ಮ*

*ಹ್ಯಾಂಗಲ ಹೇಗೆ . ಹತ್ಯಾನ – ಹತ್ತಿದ್ದಾನೆ*

ಈ ರೀತಿಯಾಗಿ ಭಾಷಾ ವೈವಿಧ್ಯತೆಯನ್ನು ಗಮನಿಸಬಹುದು.

**ಪಠ್ಯಗಳಲ್ಲಿನ ಪದ್ಯಗಳ ಭಾಷಾ ಶೈಲಿ**

ಕನ್ನಡ ಗದ್ಯ ಸಾಹಿತ್ಯದಷ್ಟೆ ಪದ್ಯ ಸಾಹಿತ್ಯವು ಬೆಳೆದಿದೆ. ಪದ್ಯ ಮನಸ್ಸಿಗೆ ಮುದವನ್ನು ನೀಡುವುದು. ಆನಂದವನ್ನು ಅನುಭವಿಸುವಂತೆ ಮಾಡುತ್ತದೆ. ಪದ್ಯವು ಅನುಭವದ ತಳಹದಿಯ ಮೇಲೆ ಬೆಳೆದು ಅಭಿವ್ಯಕ್ತಗೊಳ್ಳುತ್ತದೆ. ಕವಿಯು ಬಾಹ್ಯ ಜಗತ್ತಿನ ಸಂಗತಿಗಳು ರಾಗಗಳು ಮತ್ತು ಕ್ರಿಯೆಗಳೊಂದಿಗೆ ಬರೆತು ಪದ್ಯವನ್ನು ರಚಿಸುವನು. ಪದ್ಯವು ಛಂದೋನಿಯಮಗಳು, ವಿಧಿ ವಿಧಾನಗಳಿಗೆ ಮತ್ತು ಕ್ರಮಬದ್ಧತೆಗೆ ಒಳಗೊಳ್ಳುತ್ತದೆ.

ಒಂದು ವಿಷಯ, ವಸ್ತು ಸಂಗತಿ, ಆಲೋಚನೆ, ಚಿಂತನೆ, ಭಾವನೆ, ಅನುಭವ, ಮೊದಲಾದವುಗಳ ಬಗೆಗೆ ಆಕರ್ಷಕ ಶೈಲಿಯಲ್ಲಿ ಕಲಾತ್ಮಕವಾಗಿ ರಚನೆಯಾಗುವುದೇ ಪದ್ಯ.[೪]

ಪ್ರಮುಖ ಕವಿಗಳಾದ ಕುವೆಂಪು, ದ.ರಾ.ಬೇಂದ್ರೆ, ಶಿವರುದ್ರಪ್ಪ, ದಿನಕರ ದೇಸಾಯಿ, ಎಂ.ಗೋಪಾಕೃಷ್ಣ ಅಡಿಗರು, ಚನ್ನವೀರಕಣವಿ ಮುಂತಾದವರ ಕವನಗಳನ್ನು ಪಠ್ಯದಲ್ಲಿ ಅಳವಡಿಸಲಾಗಿದೆ. ಆಧುನಿಕ ಕವಿಗಳಾದ ಭಾಸ್ಕರನೆಲ್ಯಾಡಿ, ಎಚ್.ಡುಂಡಿರಾಜ್, ಸತ್ಯಾರ್ಥಿ, ಜಂಬಣ್ಣ ಅಮರಚಿಂತ, ಎ.ಕೆ.ರಾಮೇಶ್ವರ ಇವರ ಕವಿತೆಗಳನ್ನು ಪದ್ಯಭಾಗದಲ್ಲಿ ಅಳವಡಿಸಿರುವುದನ್ನು ಗಮನಿಸಬಹುದು.

ಗದ್ಯದಿಂದ ಪ್ರಭಾವ ಬೀರದ ನಗು ಒಂದು ಪದ್ಯದಿಂದ ಪ್ರಭಾವಿತವಾಗುತ್ತದೆ ಎನ್ನುವುದಕ್ಕೆ ವಿದ್ಯಾರ್ಥಿಗಳ ಆಸಕ್ತಿಯೇ ಕಾರಣವಾಗಿದೆ.

**ಉದಾಹರಣೆಗೆ :**

*ಮನೆಯ ಮೊದಲ ಪಾಠಶಾಲೆಯಲಿ*
*ಗುಟುಕಿಟ್ಟು ನಭಕೆ ಹಾರಲು ಕಲಿಸಿ*
*ತಪು- ನೆಪ್ಪುಗಳ ಮರೆತು ಕರುಣೆಯಲಿ*
*ಊಟೆಯಂದದಿ ನೆಗೆನೆಗೆದು ಬರುವೆ ಆರದಂದಿ*

(ಪದ್ಯ-೯ ಅಮ್ಮ) – ಕವಿ ಜಂಬಣ್ಣ ಅಮರಚಿಂತ

ಮೂಲತಃ ರಾಯಚೂರಿನವರಾದ ಜಂಬಣ್ಣ ಅವರು ಪ್ರಗತಿಶೀಲ ಚಿಂತನ ಬರಹಗಾರರು. ಇವರ ಈ ಪದ್ಯ ಮಕ್ಕಳಲ್ಲಿ ತಾಯಿಯ ಬಗ್ಗೆ ಇರುವ ಪ್ರೀತಿಯನ್ನು ಇಮ್ಮಡಿಸುವಂತೆ ಮಾಡುತ್ತದೆ. ಗದ್ಯ ಸಾಹಿತ್ಯ ಮತ್ತು ಪದ್ಯ ಸಾಹಿತ್ಯದ ಭಾಷಾ ವ್ಯತ್ಯಾಸಗಳನ್ನು ಗಮನಿಸುವುದಾದರೆ ಒಂದು ವಸ್ತು ವಿಷಯದ ವಿವರಣೆ ಗದ್ಯ ಸಾಹಿತ್ಯದಲ್ಲಿ ಬಳಸಿದರೆ, ಪದ್ಯ ಸಾಹಿತ್ಯದ ಭಾಷೆ ಕಲ್ಪನೆಗೆ, ಊಹೆಗೆ ಮೀರಿದ್ದು, ಮಗು ತನ್ನನ್ನು ತಾನು ಆ ಪದ್ಯದ ಸಾಲುಗಳಲ್ಲಿ ಪ್ರತಿಬಿಂಬಿಸಿಕೊಳ್ಳುತ್ತದೆ.

**ಉದಾಹರಣೆ :**

*ಕೊಳದಲಿರುವ ಆಮೆಗೊಂದು ಆಸೆಯಾಯಿತು*
*ಬಳಿಯಲಿರುವ ಹಂಸಗಳಲಿ ಸಂಗ ಬೆಳೆಯಿತು*
*ಮನದಲಿರುವ ಬಯಕೆಯನ್ನು ಹೇಳತೊಡಗಿತು*
*ಹಕ್ಕಿಯಂತೆ ಬಾನಲೊಮ್ಮೆ ಹಾರಲೆಂದಿತು*

ಏಳನೇ ತರಗತಿ ಜಾಣ ಆಮೆ ಪದ್ಯ-೧೪ (ಭಾಸ್ಕರ ನೆಲ್ಯಾಡಿ)

ದಕ್ಷಿಣ ಕನ್ನಡ ಜಿಲ್ಲೆಯ ನೆಲ್ಯಾಡಿ ಗ್ರಾಮದ ಹಿನ್ನೆಲೆಯಿರುವ ಕವಿಯಾಗಿ ತಮ್ಮನ್ನು ಗುರುತಿಸಿಕೊಂಡ ಭಾಸ್ಕರ ಅವರು ಚಿತ್ರಕಲಾ ಶಿಕ್ಷಕರು. ಚಿತ್ರಕಲಾ ಶಿಕ್ಷಕ ಕವನವನ್ನು ಬರೆದು ಅದು ಇಂದು ಪಠ್ಯದಲ್ಲಿ ಗುರುತಿಸಿಕೊಂಡಿರುವುದು. ಎಲ್ಲಾ ಕ್ಷೇತ್ರದ ವಿಭಿನ್ನ ಪ್ರತಿಭೆಗಳಿಗೆ ಪಠ್ಯಕ್ರಮದ ರಚನೆಯಲ್ಲಿ ಸ್ಥಾನ ನೀಡಿರುವುದನ್ನು ಗುರುತಿಸಬಹುದಾಗಿದೆ. ಈ ಪದ್ಯದಲ್ಲಿ ಕವಿ ಹೇಳಿರುವ ವಿಚಾರಗಳು ನೇರವಾಗಿ ವಿದ್ಯಾರ್ಥಿಗಳ ಮನಸ್ಸಿಗೆ ತಲುಪುವಂತಿವೆ. ಸಂವಾದದ ರೂಪದಲ್ಲಿರುವ ಕವನ ಒಂದು ಹೊಸ ಆಲೋಚನೆಯನ್ನು ಮೂಡಿಸುತ್ತದೆ ಎಂಬುದನ್ನು ಗಮನಿಸಬಹುದು.

**ಪಠ್ಯಗಳಲ್ಲಿನ ನಾಟಕ ಭಾಷಾ ಶೈಲಿ**

ಆದಿಮಾನವ ತನ್ನ ಭಾವನೆಗಳನ್ನು ಸಂಕೇತದ ಮೂಲಕ ಅಭಿನಯಿಸಿಯೇ ತಿಳಿಸಬೇಕಿತ್ತು. ಈ ಅಭಿನಯವೇ ನಾಟಕಕ್ಕೂ ನಾಂದಿಯಾಯಿತು. ಗದ್ಯ ಮತ್ತು ಪದ್ಯ ಬೋಧನೆಗಿಂತಲೂ ನಾಟಕ ಬೋಧನೆ ಮಕ್ಕಳಿಗೆ ಆಕರ್ಷಕವೆನಿಸುತ್ತದೆ. ನಾಟಕ ಓದಿಯೂ ನೋಡಿಯೂ, ಕೇಳಿಯೂ, ಆನಂದಿಸುವ ಸಾಹಿತ್ಯ, ರೂಪಕ, ಭಾಷೆ, ಕತೆ, ಅಭಿನಯ, ರಂಗಸಜ್ಜಿಕೆ, ಸಂಗೀತ, ಚಿತ್ರಕಲೆ, ನೃತ್ಯ ಈ ಎಲ್ಲಾ ಒಂದಲ್ಲ ಒಂದು ಹಂತದಲ್ಲಿ ನಾಟಕದಲ್ಲಿ ಸಮಾವೇಶಗೊಳ್ಳುತ್ತದೆ. ಆದ್ದರಿಂದ ನಾಟಕ ಒಂದು ಸಂಪೂರ್ಣ ಕಲೆಯಾಗಿದೆ.

ಗದ್ಯ, ಪದ್ಯಕ್ಕಿಂತಲೂ ಹೆಚ್ಚು ಪ್ರಭಾವ ಬೀರುವ ಭಾಷಾಶೈಲಿಯನ್ನು ನಾಟಕದಲ್ಲಿ ಗಮನಿಸಬಹುದು. ಪ್ರಸ್ತುತ ಪಠ್ಯದಲ್ಲಿ ಐದು ಮತ್ತು ಏಳನೇ ತರಗತಿಯಲ್ಲಿ ನಾಟಕ ಪ್ರಕಾರವನ್ನು ಅಳವಡಿಸದೇ ಇರುವುದನ್ನು ಗಮನಿಸಲಾಗಿದೆ. ಆರನೇ ತರಗತಿಯ ಪಠ್ಯದಲ್ಲಿ ಎರಡು ನಾಟಕಗಳನ್ನು ಅಳವಡಿಸಿದ್ದಾರೆ. ನಾಟಕಗಳಲ್ಲಿ ಗೀತನಾಟಕ, ಆಧುನಿಕ ನಾಟಕ ಮತ್ತು ಪೌರಾಣಿಕ ನಾಟಕದ ವಿಭಾಗಗಳಿವೆ. ಪ್ರಸ್ತುತ ಪಠ್ಯದಲ್ಲಿ ಅಳವಡಿಸಿರುವ 'ಕೊಡಿ ನನ್ನ ಬಾಲ್ಯವ' (ನಾಟಕ, ಮಾಲತಿ ಪಟ್ಟಣಶೆಟ್ಟಿ, ಸಮಿತಿ ರಚನೆ) ಈ ಎರಡನ್ನೂ ಗಮನಿಸಬಹುದು.

ಆಧುನಿಕ ನಾಟಕ ಪ್ರಕಾರಗಳಲ್ಲಿ ಸಾಮಾಜಿಕ ನಾಟಕವು ವಿದ್ಯಾರ್ಥಿಗಳ ಕಲಿಕೆಯ ಮೇಲೆ ಪ್ರಭಾವ ಬೀರುತ್ತಿದೆ. ಆರನೇ ತರಗತಿಯ ಪಠ್ಯಪುಸ್ತಕದಲ್ಲಿ ಮಾಲತಿ ಪಟ್ಟಣಶೆಟ್ಟಿ ಅವರು ರಚಿಸಿದ "ಕೊಡಿ ನನ್ನ ಬಾಲ್ಯವ" ಎನ್ನುವ ನಾಟಕವನ್ನು ಮಕ್ಕಳ ಭಾವನೆಗಳನ್ನು ಪ್ರೋತ್ಸಾಹಿಸುವುದು ಹಾಗೂ ಉತ್ತರ ಕರ್ನಾಟಕದ ಭಾಷೆಯ ಸೊಗಡನ್ನು ಪರಿಚಯಿಸುವ ನಾಟಕದ ಭಾಷೆ ಆಗಿದೆ.

**ಶಾಲೂ** : ಹಾಂ... ಹಾಂ... ಹಾಂ... ಸಿಕ್ಕೀ... ಸಿಕ್ಕೀ... ಸಿಕ್ಕೀ... ಅವ್ವಾ ಎನ್ ಛಂದವ್ವ ಈ ಪಾತರಗಿತ್ತಿ! ರೆಕ್ಕ್ಯಾನ ಬಣ್ಣೇನು! ಬಣ್ಣದಾಗಿನ ಕಣ್ಣೇನು!! ಆ ಹ ಹ ಹ... ಅ ಹ ಹ ಹ ಹ

*ಪಾತರಗಿತ್ತೀ ಪಕ್ಕಾ, ನೋಡಿದೇನ ಅಕ್ಕಾ*
*ಹಸರು ಹಚ್ಚೀ ಚುಚ್ಚಿ ಮೇಲಕರಷಿಣ ಹಚ್ಚೀ*
*ಏನು ಬಣ್ಣಾ ಬಣ್ಣಾ, ನಡುವೆ ನವಿಲಗಣ್ಣಾ*
*ರೇಶಿಮೆ ಪಕ್ಕ ನಯಾ, ಮುಟ್ಟಲಾರೆ ಭಯಾ*
*ಹೂವಿಗೆ ಹೋತಾವ, ಗಲ್ಲಾ ತಿವೀತಾವ!*
*ಪಾತರಗಿತ್ತೀ ಪಕ್ಕಾ, ಪಾತರಗಿತ್ತೀ ಪಕ್ಕಾ*
*ನೋಡಿದೇನ ಅಕ್ಕ ಅಕ್ಕ ಅಕ್ಕ ಅಕ್ಕ*

**ಅವ್ವ** : (ದೂರದಿಂದ ಸನಿಹ ಬರುತ್ತ) ಶಾಲೂ... ಏ ಶಾಲೂ... ಹೋಮ್ ವರ್ಕ್ ಬಿಟ್ಟು ಎಲ್ಲಿ ಹೋದೆವ್ವಾ, ಒಂದ ಜಾಗದಾಗ ಈಕಿನ್ನ ಹಿಡಿದ ಇಡೋದು ಸಾಧ್ಯ ಇಲ್ಲಾ... ಶಾಲೂ... ಶಾಲೂ...

**ಶಾಲೂ** : (ನಗುತ್ತ) ಅವ್ವಾ.. ಅವ್ವಾ ನೋಡ ಬಾ ಇಲ್ಲೆ... ನನ್ನ ಕೈಯಾಗ ಏನ ಆದ ಅಂತ ನೋಡು... ಪಾತರಗಿತ್ತೀ!! ಆಹಾ ಓಹೋ...

**ಅವ್ವ** : ಪಾತರಗಿತ್ತೀನ? ಅದರಾಗ ಅಷ್ಟ ಸಂಭ್ರಮಾ ಪಡೂವಂಥಾದ್ದೇನದ? ಜಗತ್ತಿನ್ಯಾಗ ಕಾಣದ್ದನ್ನ ಕಂಡಷ್ಟು ಖುಷಿ ಆಗೇದ ನಿನಗ... ಸದಾ ಗಿಡದಾಗ ಇರತೀ... ನೀನು ಒಂದ ಪಾತರಗಿತ್ತೀನ?

ಈ ರೀತಿಯಾಗಿ ಅವರಿಬ್ಬರ ನಡುವಿನ ಸಂಭಾಷಣೆ ಮುಂದುವರೆಯುತ್ತದೆ. ಮಹಾರಾಷ್ಟ್ರದ ಕೊಲ್ಹಾಪುರದಲ್ಲಿ ಜನಿಸಿದ ಲೇಖಕಿ ಮಾಲತಿ ಪಟ್ಟಣಶೆಟ್ಟಿಯವರು ಮೂಲತಃ ಆಂಗ್ಲ ಭಾಷಾ ಪ್ರಾಧ್ಯಾಪಕಿ. ಅವರ ಗಡಿನಾಡ ಪ್ರಭಾವ ಉತ್ತರ ಕರ್ನಾಟಕದ ಭಾಷಾ ಶೈಲಿಯನ್ನು ಯಥಾವತ್ತಾಗಿ ಬಳಸಿರುವುದನ್ನು ಗಮನಿಸಬಹುದು.

ಉತ್ತರ ಕರ್ನಾಟಕದ ಭಾಷಾ ಶೈಲಿಯನ್ನು ಪ್ರಾದೇಶಿಕ ಭಿನ್ನತೆಯುಳ್ಳ ಚಿಕ್ಕಮಗಳೂರು, ಶಿವಮೊಗ್ಗ, ಮೈಸೂರು, ದಕ್ಷಿಣ ಕನ್ನಡ, ಉಡುಪಿ ಮುಂತಾದ ಪ್ರಾದೇಶಿಕ ಹಿನ್ನೆಲೆಯಿರುವ ವಿದ್ಯಾರ್ಥಿಗಳು ಅರ್ಥೈಸಿಕೊಳ್ಳುವುದರಲ್ಲಿ ಸಮಸ್ಯೆಗಳಾಗಬಹುದು. ಕನ್ನಡ ಪದಗಳಿಗೆ ಬದಲಾಗಿ ಇಂಗ್ಲಿಷ್ ಪದಗಳನ್ನು ಬಳಸಿರುವುದನ್ನು ಗಮನಿಸಬಹುದು. ಉದಾಹರಣೆಗೆ: ಹೋಮ್‌ವರ್ಕ್, ಪ್ಲೀಜ್, ಇನೇ ಟೆಸ್ಟ್ ಇತ್ಯಾದಿ.

ಒಟ್ಟಾರೆಯಾಗಿ ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ಐದು, ಆರು ಮತ್ತು ಏಳನೇ ತರಗತಿಯ ಕನ್ನಡ ದ್ವಿತೀಯ ಭಾಷಾ ಪಠ್ಯ ಪುಸ್ತಕಗಳಲ್ಲಿ ಬಳಸಿಕೊಂಡಂತಹ ಕನ್ನಡ ಭಾಷಾ ಸಾಹಿತ್ಯವು ವಿಭಿನ್ನ ಭಾಷೆ, ಧ್ವನಿ, ವ್ಯತ್ಯಾಸವನ್ನು ಗುರುತಿಸುವಂತಹ ಪಠ್ಯಪುಸ್ತಕಗಳಾಗಿವೆ. ವಿದ್ಯಾರ್ಥಿ ಮತ್ತು ಬೋಧಕರ ನಡುವೆ ಒಂದು ಕೊಂಡಿಯಾಗಿ ಪಠ್ಯಗಳು ಕಾರ್ಯನಿರ್ವಹಿಸುತ್ತಿರುವುದನ್ನು ಗಮನಿಸಬಹುದು.

**ಕನ್ನಡ ಭಾಷಾ ಪಠ್ಯಪುಸ್ತಕದ ಇತಿಮಿತಿ**

ಪಠ್ಯಪುಸ್ತಕಗಳು ಓದಿನ ಒಂದು ಕೊಂಡಿ. ಬೋಧಿಸುವವರು, ಬೋಧಿಸುವ ಬಗೆ, ಕಲಿಯುವವರು ಮತ್ತು ಕಲಿಯುವವರ ಕಲಿಕೆಯನ್ನು ಮೌಲ್ಯಮಾಪನ ಮಾಡುವ ಸಾಧನವಾಗಿದೆ. ಕಲಿಕೆ ಎನ್ನುವುದು ಹಲವರು ಒಟ್ಟಾಗಿ ಸೇರಿ ನಡೆಸುವ ಕ್ರಿಯೆಯಾಗಿದೆ. ಆದ್ದರಿಂದ ಪಠ್ಯಕ್ರಮದ ಸ್ವರೂಪ ಮತ್ತು ರಚನೆ ಪ್ರಮುಖ ಅಂಶಗಳಾಗಿ ಪ್ರತಿಬಿಂಬಿಸುತ್ತಿವೆ. ಕಲಿಕಾರ್ಥಿಗಳ ವಯೋಮಾನಕ್ಕೆ ತಕ್ಕಂತೆ ಪಠ್ಯದ ಮಾದಿರಯನ್ನು ವಿನ್ಯಾಸ ಮಾಡಲಾಗಿದೆ. ಪಠ್ಯದಲ್ಲಿ ಅಭ್ಯಾಸ ಚಟುವಟಿಕೆ, ಭಾಷಾಬ್ಯಾಸ, ಭಾಷಾ ಚಟುವಟಿಕೆಗಳು, ಸೈದ್ಧಾಂತಿಕ ವ್ಯಾಕರಣ ಮುಂತಾದ ಅಂಶಗಳನ್ನು ಕಲಿಕಾ ಸಾಮರ್ಥ್ಯಕ್ಕೆ ಅನುಗುಣವಾಗಿ ರಚಿಸಲಾಗಿದೆ. ಕರ್ನಾಟಕ ಸರ್ಕಾರ ಶಿಕ್ಷಣ ಕ್ಷೇತ್ರವನ್ನು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ಪಠ್ಯಪುಸ್ತಕಗಳನ್ನು ವೈಜ್ಞಾನಿಕವಾಗಿ ರಚನೆ ಮಾಡುತ್ತಾ ಬಂದಿದೆ. ಆದರೂ ಸಂಪೂರ್ಣವಾಗಿ ಪಠ್ಯಪುಸ್ತಕಗಳ ಗುರಿ ಮತ್ತು ಉದ್ದೇಶಗಳನ್ನು ಸಾಧಿಸಿವೆಯೇ ಎಂಬುದನ್ನು ವಿಮರ್ಶೆ ಮಾಡಬೇಕಾಗಿದೆ. ಪಠ್ಯಪುಸ್ತಕಗಳ ರಚನೆಯಾಗ ಬೇಕಾಗಿರುವುದು ಬೋಧಕರಿಗೋ, ಕಲಿಕಾರ್ಥಿಗಳಿಗೋ, ರಾಜಕೀಯಕ್ಕೋ ಅಥವಾ ಸರ್ಕಾರಗಳಿಗೋ ಎಂಬ ಪ್ರಶ್ನೆಗೆ ಉತ್ತರವನ್ನು ಹುಡುಕಬೇಕಾಗಿದೆ.

"ಪಠ್ಯಪುಸ್ತಕಗಳು ಮತ್ತು ಸಾಂಸ್ಕೃತಿಕ ರಾಜಕಾರಣ" ಎಂಬ ಆರ್. ಚಲಪತಿ ಅವರ ಪ್ರಕಟಿತ ಸಂಶೋಧನಾ ಪ್ರಬಂಧವನ್ನು ಈ ಮೇಲಿನ ಎಲ್ಲಾ ಪ್ರಶ್ನೆಗಳಿಗೆ ವಿಶ್ಲೇಷಣಾತ್ಮಕ ಮಾದರಿಯಲ್ಲಿ ಉತ್ತರಗಳನ್ನು ಹುಡುಕುವ ಪ್ರಯತ್ನ ಮಾಡಿರುವುದನ್ನು ಗಮನಿಸಬಹುದು. ಕೆ.ವಿ.ನಾರಾಯಣ ಅವರು ಬೆನ್ನುಡಿಯಲ್ಲಿ ಬರೆದ ಅಭಿಪ್ರಾಯದಂತೆ "ಏನನ್ನು ಓದಬೇಕು" ಎಂದು ನಿಗದಿ ಮಾಡಿದಾಗ ಕೆಲವೊಮ್ಮೆ ಗೊತ್ತಿದ್ದು ಮತ್ತೆ ಕೆಲವೊಮ್ಮೆ ಗೊತ್ತಿಲ್ಲದೆಯೂ ಯಜಮಾನಿಕೆಯ ನೆಲೆಗಳು ತಮ್ಮ ಬೇರುಗಳನ್ನು ಗಟ್ಟಿ ಮಾಡಿಕೊಳ್ಳುತ್ತಿರುತ್ತವೆ. ಕಲಿಯುವವರು ಮೊದಲಿನಂತೆ ತಲೆಮಾರುಗಳಿಂದ ಕಲಿಕೆ ಮತ್ತು ತಿಳಿವಿನ ಹಕ್ಕುಗಳನ್ನು ಪಡೆದುಕೊಳ್ಳುವವರ ಕೈಲಿ ಆಗಿಲ್ಲ. ಈಗ ಹಲವು ಮೂಲೆ

ಮುಡುಕುಗಳಿಂದ ಮಕ್ಕಳು ಕಲಿಯುವ ವಲಯಕ್ಕೆ ಬರುತ್ತಿದ್ದಾರೆ. ಆದರೆ ಅವರು ಏನನ್ನು ಕಲಿಯಬೇಕೆಂದು ತಿಳಿದಿಲ್ಲ. ಹೇಳುವವರು ಮಾತ್ರ ಈ ಬದಲಾವಣೆಗೆ ತಾವು ಸಜ್ಜುಗೊಳ್ಳಬೇಕೆಂದು ತಿಳಿದಿಲ್ಲ. ಇದು ತಿಳಿಯುವ ಕೊರತೆಯೆಂದು ಹೇಳಲಾಗದು. ಬೇಕಂತಲೇ ಕಲಿಕೆಯಲ್ಲಿ ನಡೆಯಬೇಕಿದ್ದ ಬದಲಾವಣೆಗಳನ್ನು ಹತ್ತಿಕ್ಕುವುದು ಮತ್ತು ತಾರತಮ್ಯಗಳನ್ನು ಮುಂದುವರೆಸುವುದು ಗುರಿಗಳಾಗಿವೆ. ಇವು ಕೇವಲ ಹೇಳಿಕೆಗಳಲ್ಲಿ ಈ ನಿಬಂಧ ಅದಕ್ಕೆ ತಕ್ಕ ಪುರಾವೆಗಳನ್ನು ನಮ್ಮೆದುರು ತೆರೆಯುತ್ತದೆ.

ಈ ಮೇಲಿನ ಅಭಿಪ್ರಾಯಗಳನ್ನು ಗಮನಿಸಿದಾಗ ಪಠ್ಯಪುಸ್ತಕಗಳ ರಚನೆ ಪ್ರಸ್ತುತ ರಾಜಕೀಯದ ಕೈಗೊಂಬೆಯಾಗಿದ್ದು ಯಾವ ಸರ್ಕಾರ ಅಧಿಕಾರದಲ್ಲಿರುತ್ತದೆಯೋ ಆ ಸರ್ಕಾರ ಪಠ್ಯಕ್ರಮವನ್ನು ನಿರ್ಣಯಿಸುವಂತಾಗಿದೆ. ಆದರೆ ಪಠ್ಯಪುಸ್ತಕ ರಚನೆ ಆಗಬೇಕಾಗಿರುವುದು ವಿಶೇಷ ಭಾಷಾ ತಜ್ಞರಿಂದ, ಸಾಹಿತ್ಯಕಾರರಿಂದ ಮತ್ತು ಬೋಧಕರಿಂದ. ಈ ನಿಟ್ಟಿನಲ್ಲಿ ಸರ್ಕಾರ ಸಮಿತಿಯನ್ನು ರಚಿಸಿ ಕಾರ್ಯನಿರ್ವಹಿಸಬೇಕಾಗಿದೆ.

ಒಟ್ಟಾರೆಯಾಗಿ ಭಾಷಾ ಬೋಧನೆಯಲ್ಲಿ ಕಲಿಕೆಗೆ ಪೂರಕವಾದ ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆಯನ್ನು ಅಧ್ಯಯನ ಮಾಡಲಾಗಿದೆ. ಪಠ್ಯಪುಸ್ತಕಗಳು ಬೆಳೆದು ಬಂದ ಹಿನ್ನಲೆ, ಪಠ್ಯಪುಸ್ತಕಗಳ ವೈಶಿಷ್ಟ್ಯವನ್ನು ವಿವರಿಸಲಾಗಿದೆ. ಆಂಗ್ಲಮಾಧ್ಯಮದಲ್ಲಿ ದ್ವಿತೀಯ ಭಾಷೆಯಾಗಿ ಕನ್ನಡ ಕಲಿಯುವ ವಿದ್ಯಾರ್ಥಿಗಳಿಗೆ ಅಳವಡಿಸಿರುವ ತಿಳಿಕನ್ನಡ ದ್ವಿತೀಯ ಭಾಷಾ ಪಠ್ಯಪುಸ್ತಕ ಎನ್ನುವ ಶೀರ್ಷಿಕೆಯನ್ನು ಒಳಗೊಂಡ ಐದು, ಆರು, ಮತ್ತು ಏಳನೇ ತರಗತಿಯ ಪಠ್ಯಪುಸ್ತಕಗಳ ಸ್ವರೂಪ ಮತ್ತು ರಚನೆಯನ್ನು ಅವಲೋಕನ ಮಾಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಕುಲಕರ್ಣಿ ಕೆ.ಜೆ. ಮತ್ತು ಮಹಾಬಲೇಶ್ವರರಾವ್, ಪಠ್ಯಕ್ರಮ ಕಾರ್ಯಾಚರಣೆಯ ತತ್ವಗಳು, ೨೦೦೭, ಪ್ರದೀಪ ಪ್ರಕಾಶನ, ಗದಗ, ಪು.೨–೯

೨. ಕೊಂಗವಾಡ ಎನ್.ಬಿ, ಭಾಷೆ ಮತ್ತು ಕನ್ನಡ ಬೋಧನೆ, ೨೦೦೨, ವಿದ್ಯಾನಿಧಿ ಪ್ರಕಾಶನ, ಗದಗ, ಪು.೧೩೭–೧೪೭

೩. ಅದೇ ಪು.೧೪೨–೧೪೪

೪. ಅದೇ ಪು.ಸಂ.೧೭೧

೫. ಚಲಪತಿ ಆರ್, ಪಠ್ಯಪುಸ್ತಕಗಳು ಮತ್ತು ಸಾಂಸ್ಕೃತಿಕ ರಾಜಕಾರಣ, ೨೦೧೦, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೬. ತಿಳಿಕನ್ನಡ ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕ, ಪರಿಷ್ಕೃತ, ೫, ೬ ಮತ್ತು ೭ನೇ ತರಗತಿ, ೨೦೧೫, ಕರ್ನಾಟಕ ಪಠ್ಯಪುಸ್ತಕ ಸಂಘ, ಬನಶಂಕರಿ, ಬೆಂಗಳೂರು.

ಅಧ್ಯಾಯ : ಏಳು

# ಸಮಾರೋಪ

ಭಾಷೆ ಒಂದು ಮಾಧ್ಯಮ. ಮಾನವ ತನ್ನ ದೈನಂದಿನ ಬದುಕಿಗೆ ಸೃಷ್ಟಿ ಮಾಡಿಕೊಂಡಿರುವ ಸಂಪರ್ಕ ಸಾಧನವೇ ಭಾಷೆ. ಭಾಷೆಯನ್ನು ಕಲಿಯುವುದು ಹಾಗೂ ಬೋಧಿಸುವುದು ಒಂದು ಪ್ರಕ್ರಿಯೆಯಾಗಿದೆ. ಒಂದು ದೇಶದ ಉನ್ನತಿಯು ಅಲ್ಲಿನ ಶಿಕ್ಷಣ ವ್ಯವಸ್ಥೆ ಮತ್ತು ಶಿಕ್ಷಕರ ಸಮುದಾಯವನ್ನು ಅವಲಂಬಿಸಿರುತ್ತದೆ. ಈ ಪ್ರಕ್ರಿಯೆಯಲ್ಲಿ ಬೋಧನೆ ಮತ್ತು ಕಲಿಕೆ ಮಹತ್ವ ಪೂರ್ಣವಾದ ಅಂಶಗಳಾಗಿವೆ. ಬೋಧನೆಯಲ್ಲಿ ಭಾಷಾ ಬೋಧನೆ ವಿಶಿಷ್ಟವಾದದ್ದು, ಹಾಗೆಯೇ ಭಾಷಾ ಕಲಿಕೆ ಒಂದು ಮಾನಸಿಕ ಕ್ರಿಯೆಯಾಗಿದ್ದು, ವೈಶಿಷ್ಟತೆಯನ್ನು ಪಡೆದುಕೊಂಡಿದೆ. ಹೀಗೆ ಭಾಷಾ ಬೋಧನೆ ಮತ್ತು ಕಲಿಕೆ ಒಂದಕ್ಕೊಂದು ಪೂರಕವಾದ ಅಂಶಗಳಾಗಿವೆ.

ಹೀಗೆ ಭಾಷಾ ಬೋಧಕ– ವಿದ್ಯಾರ್ಥಿ ಮತ್ತು ಪಠ್ಯಪುಸ್ತಕಗಳು ಈ ಮೂರು ಅಂಶಗಳನ್ನು ಪ್ರಮುಖವಾಗಿಟ್ಟುಕೊಂಡು ಅಧ್ಯಯನವನ್ನು ಮಾಡಲಾಗಿದೆ. ಭಾಷೆಯನ್ನು ಕಲಿಸುವ ಶಿಕ್ಷಕರಿಗೆ ತಾವು ಕಲಿಸುವ ಭಾಷೆಯ ಹಿನ್ನೆಲೆ, ಆ ಭಾಷೆಯ ಜಾಯಮಾನ, ವಿಶಿಷ್ಟತೆಯ ಜ್ಞಾನ ಇರಬೇಕು. ಭಾಷೆಯನ್ನು ಕಲಿಸುವಾಗ ಯಾವ ಅಂಶಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸಬೇಕು? ಯಾವ ಹಂತದಲ್ಲಿ ಹೇಗೆ ಬೋಧಿಸಬೇಕು? ಯಾವ ಅಂಶಗಳಿಗೆ ಮಹತ್ವ ಸಲ್ಲಿಸಬೇಕು? ಎಂಬುದನ್ನು ಶಿಕ್ಷಕರು ಮೊದಲೇ ಯೋಚಿಸಿಕೊಂಡಿರಬೇಕು. ಜೊತೆಗೆ ವಿದ್ಯಾರ್ಥಿಗಳ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಹಿನ್ನೆಲೆಯಲ್ಲಿ ಅವರು ದ್ವಿತೀಯ ಭಾಷೆಯನ್ನು ಕಲಿಯುವಾಗ ಎದುರಿಸುವ ಸಮಸ್ಯೆಗಳು ಹಾಗೂ ಬೋಧನಾ ನಿಯಮಗಳನ್ನು ಅರಿತಿರಬೇಕು. ಆದ್ದರಿಂದ ಆಂಗ್ಲ ಮಾಧ್ಯಮದಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆಯ ಅಧ್ಯಯನ ಮಹತ್ವದ್ದಾಗಿದೆ.

ಶಿಕ್ಷಣ ನಡೆದು ಬಂದ ದಾರಿಯನ್ನು ಗಮನಿಸಿದಾಗ ಬೋಧನೆ ಮತ್ತು ಕಲಿಕೆ ದೇಶೀಯ ಪದ್ಧತಿಗಳ ಮೂಲಕವೇ ನೀಡಲಾಗುತ್ತಿತ್ತು. ಆದರೆ ಬದಲಾದ ರಾಜಕೀಯ ಹಿನ್ನೆಲೆಯಲ್ಲಿ ಬ್ರಿಟಿಷರು ದೇಶದಲ್ಲಿ ಅಧಿಕಾರದ ಚುಕ್ಕಾಣಿ ಹಿಡಿದರು. ಆದರೆ ಅವರಿಗೆ ನೂರಾರು ದೇಶೀಯ ಭಾಷೆಗಳ ಮೂಲಕ ಆಡಳಿತ ನಡೆಸುವುದು ಕಷ್ಟಸಾಧ್ಯವಾಯಿತು. ಆಗ ಕ್ರೈಸ್ತ ಮಿಷನರಿಗಳು, ಕನ್ನಡದ ಅನೇಕ ಕಾರ್ಯಗಳನ್ನು ನಡೆಸಿದವು. ಪಠ್ಯಪುಸ್ತಕಗಳನ್ನು ರಚಿಸಿದರು. ಮಂಗಳೂರು ಮತ್ತು ಬಳ್ಳಾರಿಯಲ್ಲಿ ಪತ್ರಿಕೋದ್ಯಮವನ್ನು ಹುಟ್ಟು ಹಾಕಿದರು. ಇವೆಲ್ಲದರಿಂದ ಪ್ರೇರಣೆ ಪಡೆದ ಕರ್ನಾಟಕದ ಕನ್ನಡಿಗರು ಇಂಗ್ಲಿಷನ್ನು ಕಲಿತು ಅನುವಾದಗಳ ಮೂಲಕ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದರು. ಇದೇ ವೇಳೆ ಬಳ್ಳಾರಿಯಲ್ಲಿ ಕನ್ನಡ ಶಾಲೆಗಳಿಗಿಂತಲೂ ಹೆಚ್ಚು ಇಂಗ್ಲೀಷ್ ಮಾಧ್ಯಮದ ಶಾಲೆಗಳು ತಲೆ ಎತ್ತಿದವು. ಹೀಗೆ ಇಂಗ್ಲಿಷ್ ಮಾಧ್ಯಮದಲ್ಲಿ ಓದುತ್ತಿರುವ ಶಾಲಾ ಮಕ್ಕಳು ಪ್ರಥಮ ಭಾಷೆಯಾಗಿ ಕಲಿಯುತ್ತಿದ್ದರೆ, ಸ್ಥಳೀಯ ಭಾಷೆಯಾಗಿರುವಂತಹ ಕನ್ನಡ ಭಾಷೆಯನ್ನು ದ್ವಿತೀಯ ಭಾಷೆಯಾಗಿ ಕಲಿಯುತ್ತಿದ್ದರು. ದ್ವಿ ಭಾಷಾ ಪರಿಸರವಾದ ಬಳ್ಳಾರಿ ನಗರ ಪ್ರದೇಶದಲ್ಲಿ ಕನ್ನಡ ಭಾಷೆಯನ್ನು ಕಲಿಯುವಂತ ಇಂಗ್ಲಿಷ್ ಮಾಧ್ಯಮದ ಮಕ್ಕಳು ಎಷ್ಟರ ಮಟ್ಟಿಗೆ ಕಲಿಯುತ್ತಿದ್ದಾರೆ. ಶಾಲೆಯಲ್ಲಿ ಎಷ್ಟರಮಟ್ಟಿಗೆ ಬೋಧಿಸಲಾಗುತ್ತಿದೆ. ಅವರ ಕಲಿಕಾ ಗುಣಮಟ್ಟ ಏನು? ಎಂಬುದನ್ನು ವಿಶ್ಲೇಷಿಸಲಾಗಿದೆ.

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ ಭಾಷಿಕ ಅಧ್ಯಯನದ ಶೀರ್ಷಿಕೆಯಡಿಯಲ್ಲಿ ಅಧ್ಯಯನವನ್ನು ಪೂರ್ಣಗೊಳಿಸಲಾಗಿದೆ. ಒಟ್ಟು ಏಳು ಅಧ್ಯಾಯಗಳಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಪ್ರತಿ ಅಧ್ಯಾಯವು ತನ್ನದೇ ಆದ ಸ್ವರೂಪವನ್ನು ಒಳಗೊಂಡಿದೆ.

ದ್ವಿತೀಯ ಭಾಷೆ ಕನ್ನಡ ಬೋಧನೆ ಮತ್ತು ಕಲಿಕೆ ಶೀರ್ಷಿಕೆಯ ಅಡಿಯಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪವನ್ನು ಕುರಿತು ವಿವರಿಸಲಾಗಿದೆ. ಪ್ರಸ್ತುತ ಅಧ್ಯಯನದ ಉದ್ದೇಶಗಳು ಬೋಧನೆ ಮತ್ತು ಕಲಿಕಾ ಹಿನ್ನೆಲೆಯಲ್ಲಿ ರೂಪುಗೊಂಡಿರುವುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದಂತೆ ಇದುವರೆಗೂ ನಡೆದ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಈ ಸಮೀಕ್ಷೆಯಲ್ಲಿ ಪಿಎಚ್.ಡಿ ಮಹಾಪ್ರಬಂಧಗಳು, ಎಂ.ಫಿಲ್ ಸಂಪ್ರಬಂಧಗಳು, ಎಂ.ಇಡಿ ಕಿರುಪ್ರಬಂಧಗಳು, ಸಂಶೋಧನಾ ಕೃತಿಗಳು, ಲೇಖನಗಳು, ನಿಯತಕಾಲಿಕೆಗಳು ಹಾಗೂ ನಮ್ಮ ಕನ್ನಡ ಸಂಚಿಕೆಗಳು, ಶಿಕ್ಷಣ ವಾರ್ತೆಗಳು ಎಂದು ವರ್ಗೀಕರಿಸಿಕೊಳ್ಳುವುದರ

ಮೂಲಕ ಅಧ್ಯಯನಕ್ಕೆ ಪೂರಕವಾಗಿ ನಡೆದ ಅಧ್ಯಯನಗಳನ್ನು ಕುರಿತು ಚರ್ಚಿಸಲಾಗಿದೆ. ಈ ಎಲ್ಲ ಅಧ್ಯಯನಗಳಿಗಿಂತ ಪ್ರಸ್ತುತ ಅಧ್ಯಯನ ಹೇಗೆ ಭಿನ್ನವಾಗಿದೆ ಎಂಬುದನ್ನು ವಿಶ್ಲೇಷಿಸಲಾಗಿದೆ.

ಭಾಷಾ ಬೋಧನೆ ಮತ್ತು ಕಲಿಕೆಯ ಸ್ವರೂಪದ ಚಾರಿತ್ರಿಕ ನೋಟ ಎನ್ನುವ ಮೂರನೆಯ ಅಧ್ಯಾಯದಲ್ಲಿ ವೇದಗಳ ಕಾಲದ ಶಿಕ್ಷಣ ಪದ್ಧತಿ, ಬೌದ್ಧರ ಕಾಲದ ಶಿಕ್ಷಣ ಪದ್ಧತಿ, ಹೀಗೆ ಬ್ರಿಟಿಷರ ಕಾಲದ ಶಿಕ್ಷಣ ಬೋಧನೆ, ಕಲಿಕಾ ಪ್ರಕ್ರಿಯೆಗಳನ್ನು ಅವುಗಳ ವೈಶಿಷ್ಟ್ಯ ಚಾರಿತ್ರಿಕ ನೋಟವನ್ನು ಅಧ್ಯಯನ ಮಾಡಲಾಗಿದೆ. ಸ್ವಾತಂತ್ರ್ಯಪೂರ್ವ ಮತ್ತು ಸ್ವಾತಂತ್ರ್ಯೋತ್ತರ ನಂತರದ ಶಿಕ್ಷಣದ ಚಾರಿತ್ರಿಕ ಹಿನ್ನೆಲೆಯನ್ನು ಹಾಗೂ ಮಾಧ್ಯಮದ ಕುರಿತಾದ ಚಿಂತನೆಗಳನ್ನು ವಿವರಿಸಲಾಗಿದೆ.

ಬೋಧನಾ ವಿಧಾನ ಸಂಕೀರ್ಣವಾದುದು. ಏಕೆಂದರೆ ಇದು ಕೇವಲ ಶೈಕ್ಷಣಿಕ ಸಂದರ್ಭವನ್ನು ಮಾತ್ರವಲ್ಲದೆ ವಿಸ್ತಾರವಾದ ಸಾಮಾಜಿಕ ಸನ್ನಿವೇಶವನ್ನು ಒಳಗೊಳ್ಳುತ್ತದೆ ಹಾಗೂ ಪ್ರಭಾವಿತವಾಗುತ್ತದೆ. ಹೀಗಿರುವಾಗ ಬೋಧನಾ ಕ್ರಮದ ಸಿದ್ಧಾಂತಗಳು ಹಾಗೂ ವಾಸ್ತವ ಸ್ಥಿತಿಗಳ ನಡುವೆ ಅಗಾಧ ಕಂದರ ಬೀಳುತ್ತಿದೆ. ಈ ಕಂದರವನ್ನು ತುಂಬುವ ಹೊಣೆ ಸೀಮಿತ ಸಂಪನ್ಮೂಲಗಳನ್ನು ಪಡೆದ ಶಿಕ್ಷಕರ ಮೇಲೆ ಬೀಳುತ್ತದೆ. ಯೋಜನೆ ಒದಗಿಸಿದ ಪರಿಕರಗಳು ಶಿಕ್ಷಕನಿಗೆ ತರಗತಿಯಲ್ಲಿ ಎಷ್ಟರ ಮಟ್ಟಿಗೆ ನೆರವಾಗಬಲ್ಲದು ಎಂಬದನ್ನು ಅಧ್ಯಯನವು ಒಳಗೊಂಡಿದೆ.

ಅಧ್ಯಾಯ ನಾಲ್ಕರಲ್ಲಿ ಭಾಷಾ ಬೋಧನಾ ಸಮಸ್ಯೆಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ. ಭಾಷಾ ಬೋಧನೆಯನ್ನು ಸಾಮಾನ್ಯ ಕಲಿಕೆಯ ಚೌಕಟ್ಟಿನಲ್ಲಿ ಇರಿಸುತ್ತಿರುವುದು ಇನ್ನೊಂದು ಸಮಸ್ಯೆ. ಸಾಮಾನ್ಯ ಕಲಿಕೆಯ ತಂತ್ರಗಳು ಅನ್ವಯಗೊಳ್ಳುವ ಕ್ರಮವನ್ನೇ ಭಾಷಾ ಕಲಿಕೆಯಲ್ಲೂ ಅನುಸರಿಸಲಾಗುತ್ತಿದೆ. ಹೀಗಾಗಿ ಭಾಷೆಗೆ ಇರುವ ಸ್ವಾಯತ್ತ ಕಲಿಕಾ ಸಾಮರ್ಥ್ಯವನ್ನು ವ್ಯವಸ್ಥಿತವಾಗಿ ಬಳಸಲಾಗುತ್ತಿಲ್ಲ. ಬೋಧನೆ ಮತ್ತು ಕಲಿಕೆಗೆ ಮೌಲ್ಯಮಾಪಕನ ಅವಶ್ಯಕತೆ ಇದೆ. ಪ್ರಮಾಣೀಕರಣಗೊಂಡ ಮೌಲ್ಯಮಾಪನ ವಿಧಾನಗಳು ಒಂದು ಕಡೆ. ಮೌಲ್ಯಮಾಪನವು ವಿದ್ಯಾರ್ಥಿಯ ಕಲಿಕೆಯ ಮಟ್ಟ ಹಾಗೂ ಸಾಮರ್ಥ್ಯಗಳನ್ನು ಓರೆಗೆ ಹಚ್ಚುವಂತೆ ಪಠ್ಯ ಮತ್ತು ಬೋಧನಾಕ್ರಮಗಳ ಉಪಯುಕ್ತತೆಯನ್ನು ಪರೀಕ್ಷೆಗೆ ಒಡ್ಡುತ್ತದೆ. ಆದ್ದರಿಂದ ಭಾಷಾ ಯೋಜಕರೂ ಕಲಿಯಬೇಕಾದದ್ದು ಬಹಳ ಇದೆ ಎಂಬ ಬೋಧಕರ ಅಭಿಪ್ರಾಯಗಳನ್ನು ಸಂಗ್ರಹಿಸಿ ವಿಶ್ಲೇಷಣೆ ಮಾಡಲಾಗಿದೆ.

ಶಿಕ್ಷಣದಲ್ಲಿ ಪಠ್ಯಮೂಲ ಸಮಸ್ಯೆಯೂ ಕೂಡ ಒಂದಾಗಿದ್ದು, ವಿದ್ಯಾರ್ಥಿಗಳಿಗೆ ಯಾವ ರೀತಿಯ ಪಠ್ಯ ಇರಬೇಕೆಂಬುದರ ಬಗ್ಗೆ ಅನೇಕ ಗೊಂದಗಳಿವೆ. ಇಂದಿನ ಪರಿಸ್ಥಿತಿಯಲ್ಲಿ ರಾಜಕೀಯವು ಪ್ರವೇಶ ಮಾಡಿ ಪಠ್ಯಕ್ರಮವನ್ನು ರೂಪಿಸುತ್ತಿದೆ. ಒಂದು ನಿರ್ದಿಷ್ಟ ವಿಷಯಗಳನ್ನು ಪರಿಣಿತರು ವ್ಯವಸ್ಥಿತ ಮತ್ತು ಕ್ರಮಬದ್ಧವಾಗಿ ಸಂಗ್ರಹಿಸಿ ಸಿದ್ಧಪಡಿಸಿರುವ ಹೊತ್ತಿಗೆಯನ್ನು ಪಠ್ಯಪುಸ್ತಕ ಎನ್ನುತ್ತಾರೆ. ವಿದ್ಯಾರ್ಥಿಗಳಲ್ಲಿ ಓದುವ ಮತ್ತು ಬರೆಯುವ ಸಮಸ್ಯೆಗಳಿಗೆ ಪಠ್ಯಪುಸ್ತಕವೂ ಒಂದು ಕಾರಣವಾಗಬಹುದು. ಪಠ್ಯಕ್ರಮವು ಮನೋವೈಜ್ಞಾನಿಕ ತತ್ವಗಳ ಹಿನ್ನೆಲೆಯಲ್ಲಿ ರಚನೆಯಾಗಬೇಕು. ಅದರಲ್ಲಿ ಹಲವು ಆಂತರಿಕ ಮತ್ತು ಬಾಹ್ಯ ದೋಷಗಳಿರುವುದು ಕಂಡು ಬರುತ್ತದೆ. ಪ್ರಾದೇಶಿಕತೆ ಮಹತ್ವ ಇಲ್ಲದಿರುವುದು ಪಠ್ಯವಸ್ತುವನ್ನು ಹಲವು ವರ್ಷಗಳಾದರೂ ಬದಲಾಯಿಸದೇ ಇರುವುದು ಸಹ ಕೆಲವೊಮ್ಮೆ ಶಿಕ್ಷಕರ ಮತ್ತು ವಿದ್ಯಾರ್ಥಿಗಳಿಗೆ ಸಮಸ್ಯೆಗಳು ಎದುರಾಗುತ್ತವೆ. ಪಠ್ಯಪುಸ್ತಕಗಳನ್ನು ರಚಿಸುವ ಸಂದರ್ಭದಲ್ಲಿ ಕೆಲವು ಸಮಸ್ಯೆಗಳನ್ನು ನಿವಾರಿಸಿಕೊಂಡು ಪಠ್ಯಪುಸ್ತಕವನ್ನು ರಚಿಸಿದರೆ ಪಠ್ಯಮೂಲ ಸಮಸ್ಯೆಗಳಿಂದಾಗುವ ತಪ್ಪುಗಳನ್ನು ತಡೆಗಟ್ಟಲು ಸಾಧ್ಯವಾಗುತ್ತದೆ ಎನ್ನುವುದು ಶಿಕ್ಷಕರ ಅಭಿಪ್ರಾಯವಾಗಿದೆ.

ಬೋಧನಾ ವಿಧಾನದಲ್ಲಿಯೂ ಹಲವಾರು ಸಮಸ್ಯೆಗಳಿದ್ದು, ಅವುಗಳಲ್ಲಿ ಬೋಧಕನು ಸಾಂಪ್ರದಾಯಿಕ ಬೋಧನಾ ವಿಧಾನಗಳನ್ನು ಬಿಟ್ಟು ಆಧುನಿಕ ಬೋಧನಾ ವಿಧಾನಗಳನ್ನು ಬಳಸಿಕೊಂಡು ಹೆಚ್ಚು ಹೆಚ್ಚು ಅಧ್ಯಯನ ಮಾಡಿ ಬೋಧನಾ ವಿಷಯದಲ್ಲಿ ತರಬೇತಿಯನ್ನು ಪಡೆದುಕೊಂಡು ವ್ಯವಸ್ಥಿತವಾಗಿ ಬೋಧನೆಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡರೆ ಬೋಧನಾ ಕಲಿಕಾ ಪ್ರಕ್ರಿಯೆ ಪರಿಣಾಮಕಾರಿಯಾಗಲು ಸಾಧ್ಯವಿದೆ. ಪರೀಕ್ಷೆ ಹಾಗೂ ಮೌಲ್ಯಮಾಪನ ಸಮಸ್ಯೆಗಳನ್ನು ಸಹ ಆಂಗ್ಲ ಮಾಧ್ಯಮದ ಶಾಲೆಗಳಲ್ಲಿ ಕನ್ನಡ ಕಲಿಯುವ ವಿದ್ಯಾರ್ಥಿಗಳು ಮತ್ತು ಬೋಧಕರು ಎದುರಿಸುತ್ತಿದ್ದಾರೆ. ಭಾಷಾ ಬೋಧನೆಯ ಪ್ರಮುಖ ಕೌಶಲಗಳಾದ ಓದುಗಾರಿಕೆ ಮತ್ತು ಬರವಣಿಗೆಯ ಸಾಮರ್ಥ್ಯಗಳನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಪ್ರಯತ್ನಗಳು ಸಾಗಬೇಕಿದೆ ಎನ್ನುವುದನ್ನು ಅಧ್ಯಯನದ ಮೂಲಕ ಚರ್ಚಿಸಲಾಗಿದೆ.

ಹೊಸ ಪರೀಕ್ಷಾ ಪದ್ಧತಿಗಳನ್ನು ಆವಿಷ್ಕರಿಸಿ, ಅವುಗಳನ್ನು ಶಿಕ್ಷಣದ ಪ್ರಕ್ರಿಯೆಯಲ್ಲಿ ಅಳವಡಿಸಬೇಕಾಗಿದ್ದು ಭಾಷಾ ಬೋಧನೆಯ ಪ್ರಮುಖ ಕೌಶಲಗಳಾದ ಓದುವಿಕೆ ಮತ್ತು ಬರವಣಿಗೆಯ ಸಾಮರ್ಥ್ಯಗಳನ್ನು ಅಭಿವೃದ್ಧಿಪಡಿಸುವ ಅಗತ್ಯವಿದೆ. ಮಕ್ಕಳ ಕಲಿಕೆಯಲ್ಲಿ ಉಂಟಾಗುವ ಸಮಸ್ಯೆಗಳಿಗೆ ಮತ್ತೊಂದು ಕಾರಣ ಎಂದರೆ ಶಿಕ್ಷಕರ ಹಾಗೂ ವಿದ್ಯಾರ್ಥಿಗಳ ಭಾಷಿಕ ಸಮಸ್ಯೆಗಳು. ಶಿಕ್ಷಕರು ಮತ್ತು ವಿದ್ಯಾರ್ಥಿಗಳು ವಿವಿಧ ಭಾಷಿಕ ಸಮುದಾಯದಿಂದ

ಬಂದಿರುತ್ತಾರೆ. ಈ ಹಿನ್ನೆಲೆಯಲ್ಲಿ ತರಗತಿಯಲ್ಲಿ ಕನ್ನಡವನ್ನು ಬೋಧಿಸುವಾಗ ಶಿಕ್ಷಕರು ಹಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುದು ತಿಳಿಯುತ್ತದೆ. ಇದಕ್ಕೆ ಸೂಕ್ತ ಪರಿಹಾರೋಪಾಯಗಳನ್ನು ಕಂಡುಕೊಳ್ಳುವ ಪ್ರಯತ್ನ ಬೋಧಕರಿಂದ ಆಗಬೇಕಾಗಿದೆ. ವಿದ್ಯಾರ್ಥಿಗಳಲ್ಲಿ ಕಲಿಕಾ ಸಾಮರ್ಥ್ಯವನ್ನು ಬೆಳೆಸುವಲ್ಲಿ ಶಿಕ್ಷಕನ ಪಾತ್ರ ಪ್ರಧಾನವಾದುದು. ಶಿಕ್ಷಕನು ತನ್ನ ವೃತ್ತಿಯನ್ನು ಗೌರವಿಸಬೇಕು. ಶಿಕ್ಷಕ ನಿಷ್ಠೆಯಿಂದ ತನ್ನ ಕರ್ತವ್ಯವನ್ನು ಮಾಡಿದಾಗ ಮಗುವಿನ ಅಭಿವೃದ್ಧಿ ಸಾಧ್ಯವಾಗುತ್ತದೆ. ಒಬ್ಬ ಶಿಕ್ಷಕ ತನ್ನ ಕರ್ತವ್ಯವನ್ನು ಸರಿಯಾದ ರೀತಿಯಲ್ಲಿ ನಿರ್ವಹಿಸಬೇಕಾದರೆ ಶಿಕ್ಷಕನಿಗೆ ಯಾವುದೇ ರೀತಿಯಲ್ಲಿ ಸಾಮಾಜಿಕ, ಆರ್ಥಿಕ ಸಮಸ್ಯೆಗಳು ಇರಕೂಡದು. ಒಂದು ವೇಳೆ ಇದ್ದರೆ ಆತನು ತರಗತಿಯಲ್ಲಿ ಸಮರ್ಪಕವಾಗಿ ಮಕ್ಕಳಿಗೆ ವಿದ್ಯೆಯನ್ನು ಕಲಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಶಿಕ್ಷಕರ ಸಮಾಜೋ–ಆರ್ಥಿಕ ಸಮಸ್ಯೆಗಳು ಬೋಧನೆಗೆ ಹೇಗೆ ತೊಡಕುಂಟು ಮಾಡುತ್ತಿವೆ ಎನ್ನುವುದನ್ನು ಅಧ್ಯಾಯ ನಾಲ್ಕರಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಆಂಗ್ಲ ಮಾಧ್ಯಮದಲ್ಲಿ ಪ್ರಾಥಮಿಕ ಹಂತವನ್ನು ಮುಗಿಸಿ ಹಿರಿಯ ಪ್ರಾಥಮಿಕ ಹಂತಕ್ಕೆ ಬಂದ ಮಗು ಕನ್ನಡ ಭಾಷೆಯನ್ನು ಕಲಿಯುವ ಸಂದರ್ಭದಲ್ಲಿ ಅನ್ಯ ಭಾಷೆಯ ಪ್ರಭಾವ, ಬೋಧನಾ ಮಾಧ್ಯಮದ ಪ್ರಭಾವ ಹಾಗೂ ಆ ಪ್ರದೇಶದ ಪ್ರಭಾವ ಬೀರುತ್ತದೆ. ಇಂತಹ ಭಾಷಾ ಸಮಸ್ಯೆಗಳನ್ನು ಸವಾಲಾಗಿ ತೆಗೆದುಕೊಂಡು ದ್ವಿತೀಯ ಭಾಷೆಯಾಗಿ ಕನ್ನಡ ಕಲಿಯುವ ವಿದ್ಯಾರ್ಥಿಗಳಲ್ಲಿರುವ ಓದುಗಾರಿಕೆ, ಬರವಣಿಗೆಯ ಸಮಸ್ಯೆಗಳನ್ನು ಕುರಿತು ಅಧ್ಯಯನದಲ್ಲಿ ವಿವರಿಸಲಾಗಿದೆ. ಕಲಿಕಾರ್ಥಿಗಳಿಗೆ ಓದುಗಾರಿಕೆ ಮತ್ತು ಬರವಣಿಗೆಗೆ ಸಂಬಂಧಿಸಿದಂತೆ ಪ್ರಶ್ನಾವಳಿಗಳನ್ನು ನೀಡಿ ಪ್ರಬಂಧವನ್ನು ಬರೆಯಿಸಿ, ಲಿಖಿತ ಮತ್ತು ಧ್ವನಿ ಸುರಳಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಿಕೊಳ್ಳಲಾಗಿದೆ. ಸಂಗ್ರಹಿಸಿದ ಮಾಹಿತಿಯನ್ನು ಅಕಾರಾದಿಯಾಗಿ ನೀಡಿದ ಪದಗಳ ಮೂಲಕ ವಿಶ್ಲೇಷಣೆ ಮಾಡಿ ಅಧ್ಯಾಯ ಐದರಲ್ಲಿ ವಿವರಿಸಲಾಗಿದೆ.

ಶಿಕ್ಷಣ ಪ್ರಕ್ರಿಯೆಗೆ ಚಾಲನಾತ್ಮಕ ಶಕ್ತಿ ನೀಡುವುದೇ ಪಠ್ಯ ಪುಸ್ತಕ. ಇದು ಶೈಕ್ಷಣಿಕವಾಗಿ ಬೋಧನಾ ಉದ್ದೇಶಗಳನ್ನು ಈಡೇರಿಸುವ ಸಾಧನವಾಗಿದೆ. ಪಠ್ಯಪುಸ್ತಕಗಳು ಬೋಧನೆಗೂ ಮತ್ತು ಕಲಿಕೆಗೂ ಒಂದು ಕೊಂಡಿಯಂತೆ ಕಾರ್ಯನಿರ್ವಹಿಸುತ್ತವೆ. ಪಠ್ಯಪುಸ್ತಕಗಳ ಹಿನ್ನೆಲೆ, ಪಠ್ಯಪುಸ್ತಕದ ಮಹತ್ವ, ಲಕ್ಷಣಗಳನ್ನು ವಿವರಿಸಲಾಗಿದೆ. ತಿಳಿ ಕನ್ನಡ ಎಂಬ ಶೀರ್ಷಿಕೆಯ ಐದು, ಆರು ಮತ್ತು ಏಳನೇ ತರಗತಿಯ ಕನ್ನಡ ಪಠ್ಯಪುಸ್ತಕಗಳ ಸ್ವರೂಪ ಮತ್ತು ಬಳಕೆಯಲ್ಲಿರುವ ಸಮಸ್ಯೆಗಳೇನು ಎಂಬುದರ ಕುರಿತು ಮಾಹಿತಿಯನ್ನು ನೀಡುವುದರ ಮೂಲಕ ಅಧ್ಯಾಯ ಆರರಲ್ಲಿ ಚರ್ಚಿಸಲಾಗಿದೆ.

ಹೀಗೆ ಭಾಷಾ ಬೋಧನೆ-ಕಲಿಕೆ ಪಠ್ಯಪುಸ್ತಕದ ಅಂಶಗಳನ್ನು ಪ್ರಮುಖ ವಾಗಿಟ್ಟುಕೊಂಡು ಅಧ್ಯಯನವನ್ನು ರೂಪಿಸಲಾಗಿದೆ. ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಕಲಿಯುತ್ತಿರುವ ವಿದ್ಯಾರ್ಥಿಗಳಲ್ಲಿ ಕಲಿಕೆಯ ಸಮಸ್ಯೆ ಇದೆಯೇ ಅಥವಾ ಅನ್ಯ ಮಾತೃಭಾಷೆಯ ಮೂಲದಿಂದ ಬಂದ ಬೋಧಕರಲ್ಲಿ ಭಾಷೆಯ ಸಮಸ್ಯೆ ಇದೆಯೇ ಎಂಬುದನ್ನು ತಿಳಿದುಕೊಳ್ಳಲು ದ್ವಿತೀಯ ಭಾಷಾ ಪಠ್ಯಪುಸ್ತಕಗಳು ಪ್ರಸ್ತುತ ಅಧ್ಯಯನಕ್ಕೆ ಸಹಕಾರಿಯಾಗಿವೆ. 'ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ: ಭಾಷಿಕ ಅಧ್ಯಯನ' ಎಂಬ ಶೀರ್ಷಿಕೆಯ ಅಧ್ಯಯನವು ಏಳು ಅಧ್ಯಾಯಗಳಲ್ಲಿ ವಿಸ್ತೃತವಾಗಿ ವಿಶ್ಲೇಷಣೆಗೆ ಒಳಗೊಂಡಿದೆ. ಭಾಷಾ ಮಾಧ್ಯಮ ಕಲಿಕೆಯ ಮೇಲೆ ಹೇಗೆ ಪ್ರಭಾವ ಬೀರುತ್ತಿದೆ ಎಂಬುದನ್ನು ಸೂಚಿಸುತ್ತದೆ. ಈ ದೃಷ್ಟಿಯಿಂದ ಪ್ರಸ್ತುತ ಅಧ್ಯಯನ ಮಹತ್ವವೆನಿಸುತ್ತದೆ.

**ಅಧ್ಯಯನದ ಫಲಿತಗಳು**

- ವಿದ್ಯಾರ್ಥಿಗಳು ಓದುವಿಕೆಯ ಸಂದರ್ಭದಲ್ಲಿ ಸ್ವರ, ವ್ಯಂಜನ, ಗುಣಿತಾಕ್ಷರ, ಒತ್ತಕ್ಷರಗಳನ್ನು ಉಚ್ಚಾರಣೆ ಮಾಡುವಾಗ ಅಲ್ಪಪ್ರಾಣ ಮತ್ತು ಮಹಾಪ್ರಾಣದ ಧ್ವನಿ ವ್ಯತ್ಯಾಸ ಗ್ರಹಿಸದೆ ಸಮಸ್ಯೆ ಎದುರಿಸುತ್ತಿರುವುದು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.
- ಕನ್ನಡವನ್ನು ದ್ವಿತೀಯ ಭಾಷೆಯನ್ನಾಗಿ ಕಲಿಯುತ್ತಿರುವ ಮಕ್ಕಳು ಕನ್ನಡೇತರ ಮಾತೃ ಭಾಷೆಯನ್ನು ಹೊಂದಿರುವುದರಿಂದ ತಮ್ಮ ಪ್ರಾದೇಶಿಕ ಪರಿಸರದಲ್ಲಿ ಹೇಗೆ ಮಾತನಾಡುತ್ತಾರೋ ಹಾಗೆಯೇ ಧ್ವನಿ ವ್ಯತ್ಯಾಸಗಳನ್ನು ಮಾಡುವುದನ್ನು ಗುರುತಿಸಲಾಗಿದೆ.
- ವಿದ್ಯಾರ್ಥಿಗಳು ಪ್ರಥಮ ಭಾಷೆಗೆ ನೀಡಿದಷ್ಟು ಆದ್ಯತೆ ದ್ವಿತೀಯ ಭಾಷೆಗೆ ನೀಡದಿರುವುದು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.
- ಬೋಧನಾ ಸಂದರ್ಭದಲ್ಲಿ ಶಿಕ್ಷಕರು ಕನ್ನಡ ಭಾಷಾ ಪಠ್ಯಪುಸ್ತಕಗಳಲ್ಲಿನ ಕೆಲವೊಂದು ಅಂಶಗಳನ್ನು ಬೋಧಿಸುವುದಕ್ಕೆ ತೊಂದರೆ ಆಗುತ್ತಿರುವುದು ಬೋಧಕರು ನೀಡಿರುವ ಅಭಿಪ್ರಾಯದಿಂದ ಸ್ಪಷ್ಟವಾಗಿದೆ.
- ಪರೀಕ್ಷಾ ಮತ್ತು ಮೌಲ್ಯಮಾಪನಕ್ಕೆ ಸಂಬಂಧಿಸಿದಂತೆ ಬೋಧಕರು ಸವಾಲುಗಳನ್ನು ಎದುರಿಸುತ್ತಿರುವುದು ಕಂಡು ಬಂದಿದ್ದು, ನಿರಂತರ ಮತ್ತು ವ್ಯಾಪಕ ಮೌಲ್ಯಮಾಪನ

(ಸಿಸಿಇ) ಪದ್ಧತಿಯೂ ಇನ್ನೊಂದು ಕಾರಣವಾಗಿದೆ. ಇದು ಸಂಪೂರ್ಣವಾಗಿ ಅನುಷ್ಠಾನವಾಗುತ್ತಿಲ್ಲ. ಅದರಲ್ಲಿ ವಿದ್ಯಾರ್ಥಿಗಳಲ್ಲಿನ ಕನ್ನಡ ಭಾಷೆಯ ಬರೆವಣಿಗೆಯ ದೋಷಗಳು ಎದ್ದು ಕಾಣುತ್ತಿವೆ. ಓದುವಿಕೆಯ ಸಂದರ್ಭದಲ್ಲಿ ವಿದ್ಯಾರ್ಥಿಗಳು ತಪ್ಪಾಗಿ ಉಚ್ಚಾರಣೆ ಅಥವಾ ವ್ಯತ್ಯಾಸದ ಓದುವಿಕೆ, ಧ್ವನಿ ವ್ಯತ್ಯಾಸ, ನಾಲಗೆ ತೊಡರುವುದು, ಪ್ರತ್ಯಯಗಳು, ಲಿಂಗ, ಮತ್ತು ವಚನಗಳ ಬಗ್ಗೆ ಸರಿಯಾದ ತಿಳುವಳಿಕೆ ಇಲ್ಲದಿರುವುದು ಅಧ್ಯಯನದ ಮೂಲಕ ತಿಳಿದು ಬಂದಿದೆ.

- ವಿದ್ಯಾರ್ಥಿಗಳು ಬರೆವಣಿಗೆಯ ಸಂದರ್ಭದಲ್ಲಿ ಒತ್ತಕ್ಷರಗಳನ್ನು ಲೋಪಮಾಡಿ ಬರೆಯುತ್ತಾರೆ. ಉದಾಹರಣೆಗೆ ಬುದ್ಧಿವಂತ ಪದವನ್ನು 'ಬುದಿವಂತ,' ನನ್ನ ಪದವನ್ನು 'ನನ' ಎಂದು, ಹೋಗುತ್ತಾರೆ. ಪದವನ್ನು 'ಹೊಗುತರೆ' ಎಂದು ಬರೆದಿರುವುದನ್ನು ಗಮನಿಸಲಾಗಿದೆ. ಹೀಗೆ ಒತ್ತಕ್ಷರಗಳನ್ನು ಲೋಪ ಮಾಡಿ ಬರೆಯುವ ಸಮಸ್ಯೆಯನ್ನು ಎದುರಿಸುತ್ತಿರುವುದು ಅಧ್ಯಯನದ ಮೂಲಕ ಸ್ಪಷ್ಟವಾಗಿದೆ.

- ವಿದ್ಯಾರ್ಥಿಗಳು ಕನ್ನಡದಲ್ಲಿ ವಾಕ್ಯರಚನೆ ಮಾಡುವಾಗ ಕರ್ತೃ, ಕರ್ಮ, ಕ್ರಿಯಾ ಪದಗಳನ್ನು ಗಮನಿಸದೇ ಆಂಗ್ಲ ಭಾಷೆಯ ವಾಕ್ಯ ರಚನೆಯ ನಿಯಮಗಳನ್ನೇ ಅಳವಡಿಸಿಕೊಂಡು ಅಪೂರ್ಣ ವಾಕ್ಯ ರಚನೆ ಮಾಡಿರುವುದನ್ನು ಗಮನಿಸಲಾಗಿದೆ.

- ದ್ವಿತೀಯ ಭಾಷೆಗಾಗಿ ರೂಪಿಸಿರುವ ಕನ್ನಡ ಪಠ್ಯಪುಸ್ತಕಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ದ್ವಿತೀಯ ಭಾಷೆಯ ಪಠ್ಯಪುಸ್ತಕವನ್ನು ರೂಪಿಸುವಂತಹ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಅರ್ಥವಾಗುವಂತಹ ಸರಳವಾದ ಭಾಷೆಯಲ್ಲಿ ಸಾಹಿತ್ಯವನ್ನು ಅಳವಡಿಸದಿರುವುದನ್ನು ಗಮನಿಸಲಾಗಿದೆ. ಒತ್ತಕ್ಷರಗಳು, ವ್ಯಾಕರಣಾಂಶಗಳು ಹೆಚ್ಚಾಗಿರುವ ಪಠ್ಯವನ್ನು ಅಳವಡಿಸಿರುವುದರಿಂದ ವಿದ್ಯಾರ್ಥಿಗಳ ಕಲಿಕೆಗೆ ತೊಡಕಾಗಿದೆ ಎಂಬುದು ಅಧ್ಯಯನದಿಂದ ಸ್ಪಷ್ಟವಾಗಿದೆ.

- ಪ್ರಚಲಿತ ಕನ್ನಡ ಭಾಷಾ ಪಠ್ಯಪುಸ್ತಕಗಳ ವಿಷಯದ ಆಯ್ಕೆ ಮತ್ತು ಸಂಘಟನೆ, ವಿಷಯ ನಿರೂಪಣೆ, ಕಲಿಕಾ ಉದ್ದೇಶಗಳು ವಿದ್ಯಾರ್ಥಿಗಳ ಪರವಾಗಿಲ್ಲ ಎಂಬ ಅಂಶವನ್ನು ಶಿಕ್ಷಕರು ಪ್ರಶ್ನಾವಳಿಯಲ್ಲಿ ಅಭಿಪ್ರಾಯ ನೀಡಿರುವುದು ಅಧ್ಯಯನದ ಮೂಲಕ ದೃಢಪಟ್ಟಿದೆ.

- ಪ್ರಥಮ ಭಾಷೆಯನ್ನು ಬೋಧಿಸುವಂತಹ ಶಿಕ್ಷಕರಿಗೆ ದೊರೆಯುವ ತರಬೇತಿಗಳು, ದ್ವಿತೀಯ ಭಾಷೆಯಾಗಿ ಕನ್ನಡವನ್ನು ಬೋಧಿಸುವಂತಹ ಶಿಕ್ಷಕರಿಗೆ ದೊರೆಯುತ್ತಿಲ್ಲ.

ಆಂಗ್ಲ ಮಾಧ್ಯಮದ ಶಾಲೆಗಳೆಲ್ಲವೂ ಖಾಸಗಿ ಶಾಲೆಗಳೇ ಆಗಿರುವುದರಿಂದ ಇಲ್ಲಿ ಸರಿಯಾದ ತರಬೇತಿಗಳ ಆಯೋಜನೆ ಆಗುತ್ತಿಲ್ಲ ಎನ್ನುವುದು ಬೋಧಕರು ನೀಡಿರುವ ಅಭಿಪ್ರಾಯದಿಂದ ಸ್ಪಷ್ಟವಾಗಿದೆ.

- ದ್ವಿತೀಯ ಭಾಷೆಯಾಗಿ ಕನ್ನಡ ಭಾಷೆಯನ್ನು ಆಂಗ್ಲ ಮಾಧ್ಯಮದಲ್ಲಿ ಬೋಧನೆ ಮಾಡುವುದು ಕಷ್ಟಕರವಾಗಿದೆ. ಪ್ರಥಮ ಭಾಷೆಯ ಮಕ್ಕಳಿಗಿಂತ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯುತ್ತಿರುವ ವಿದ್ಯಾರ್ಥಿಗಳ ಓದುವಿಕೆ ಮತ್ತು ಬರೆವಣಿಗೆಯಲ್ಲಿ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎಂಬುವುದು ಅಧ್ಯಯನದ ಮೂಲಕ ಸ್ಪಷ್ಟವಾಗಿದೆ.
- ಪ್ರಸ್ತುತದಲ್ಲಿ ಮೌಲ್ಯಮಾಪನ ಮಾಡುವ ವಿಧಾನದಲ್ಲಿ ಬೋಧಕರು ತಮ್ಮದೇ ಆದ ವಿಧಾನಗಳನ್ನು ಅಳವಡಿಸಿಕೊಂಡಿದ್ದಾರೆ. ಮೌಲ್ಯಮಾಪನ ಮಾಡುವಾಗ ಬರವಣಿಗೆಯ ದೋಷಗಳನ್ನು ಗಮನಿಸದೇ ಮೌಲ್ಯಮಾಪನ ಮಾಡುತ್ತಿರುವುದು ಅಧ್ಯಯನದಿಂದ ಕಂಡುಕೊಳ್ಳಲಾಗಿದೆ.

**ಸಲಹೆಗಳು**

- ➢ ಕನ್ನಡವನ್ನು ದ್ವಿತೀಯ ಭಾಷೆಯಾಗಿ ಬೋಧಿಸುವಂತಹ ಭಾಷಾ ಶಿಕ್ಷಕರ ಬೋಧನಾ ವಿಧಾನದಲ್ಲಿ ಬದಲಾವಣೆಗಳಾಗಬೇಕು. ಚಟುವಟಿಕೆ ಆಧಾರಿತವಾದ ಬೋಧನಾ ವಿಧಾನಗಳನ್ನು ರೂಪಿಸುವಂತೆ ಶಿಕ್ಷಣ ಇಲಾಖೆ ಬೆಂಬಲಿಸಬೇಕು.
- ➢ ಬೋಧನೆಯನ್ನು ಹೊರತುಪಡಿಸಿ ಶಿಕ್ಷಕರನ್ನು ಸರ್ಕಾರವು ಮತ್ತಿತರೆ ಯಾವುದೇ ಕಾರ್ಯಯೋಜನೆಗಳಿಗೆ ಬಳಸಿಕೊಳ್ಳದಂತೆ ಕ್ರಮ ವಹಿಸಬೇಕು. ಬಹುತೇಕ ಖಾಸಗಿ ಅನುದಾನಿತ, ಅನುದಾನ ರಹಿತ ಆಂಗ್ಲ ಮಾಧ್ಯಮದ ಶಾಲೆಗಳಲ್ಲಿ ಅರ್ಹ ಕನ್ನಡ ಶಿಕ್ಷಕರು ಇಲ್ಲದಿರುವುದು ಸಹ ವಿದ್ಯಾರ್ಥಿಗಳ ಕಲಿಕಾ ಸಾಮರ್ಥ್ಯ ಕಡಿಮೆಯಾಗಲು ಕಾರಣವಾಗಿದ್ದು, ಸರ್ಕಾರವು ನಿಗದಿಪಡಿಸಿದಂತಹ ಅರ್ಹ ವಿದ್ಯಾರ್ಹತೆಯನ್ನು ಹೊಂದಿದ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳಬೇಕು.
- ➢ ಕೆಲವು ಶಾಲೆಗಳಲ್ಲಿ ಇಂಗ್ಲೀಷ್ ಲಾಂಗ್ವೇಜ್ ಲ್ಯಾಬ್ ಮಾಡಿದ ಮಾದರಿಯಲ್ಲಿಯೇ ಕನ್ನಡ ಭಾಷಾ ಪ್ರಯೋಗಾಲಯವನ್ನು ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿ ಸ್ಮಾರ್ಟ್ ಕ್ಲಾಸ್‌ಗಳನ್ನು ರೂಪಿಸುವಂತೆ ಕ್ರಮ ವಹಿಸಬೇಕು.
- ➢ ತರಗತಿ ಕಲಿಕೆಯನ್ನು ಓರೆಗೆ ಹಚ್ಚಲು ಮತ್ತು ಭಾಷೆಯ ಮೂಲ ಕಲ್ಪನೆಗಳನ್ನು ಸರಳವಾಗಿ ತಿಳಿಯಲು ಪ್ರಯೋಗಾಲಯ ಕಲಿಕೆ ಪ್ರೇರಣೆ ನೀಡುತ್ತದೆ. ಆದ್ದರಿಂದ ಭಾಷಾ ಪ್ರಯೋಗಾಲಯಗಳನ್ನು ತೆರೆಯಲು ಸರ್ಕಾರ ಕ್ರಮ ವಹಿಸಬೇಕಾಗಿದೆ.

- ಪಠ್ಯಪುಸ್ತಕಗಳ ರಚನೆಯ ಸ್ವರೂಪದಲ್ಲಿ ಆಧುನಿಕ, ವೈಜ್ಞಾನಿಕ ವಿಧಾನಗಳನ್ನು ಅಳವಡಿಸುವಂತೆ ಶಿಕ್ಷಣ ಇಲಾಖೆ ಗಮನ ವಹಿಸಬೇಕು.
- ಮೌಲ್ಯಾಧಾರಿತ ಕಲಿಕೆಯ ಜೊತೆಗೆ ಭಾಷಾ ಆಟಗಳನ್ನು ಪಠ್ಯದಲ್ಲಿ ಅಳವಡಿಸುವುದು ಮತ್ತು ಮಗು ಕೇಂದ್ರಿತ ಪಠ್ಯ ರಚನೆ ಮಾಡುವ ಅಗತ್ಯವಿದೆ.
- ಅನ್ಯ ವಿಷಯಗಳನ್ನು ಬೋಧಿಸುವಂತಹ ಸಂದರ್ಭಕ್ಕೂ ಮತ್ತು ಕನ್ನಡ ವಿಷಯವನ್ನು ಬೋಧಿಸುವಂತಹ ಸಂದರ್ಭಕ್ಕೂ ಬೇರೆ ಬೇರೆ ವಿಧಾನಗಳನ್ನು ಅಳವಡಿಸಿಕೊಳ್ಳಬೇಕು. ಹಾಗೆಯೇ ವಿದ್ಯಾರ್ಥಿಗಳ ಕಲಿಕೆಯ ಪ್ರಗತಿ ಕುರಿತು ಪೋಷಕರ ಸಭೆಯನ್ನು ಕರೆದು ಕನ್ನಡ ಭಾಷೆಯ ಪ್ರಾಮುಖ್ಯತೆಯ ಕುರಿತು ಅರಿವನ್ನು ನೀಡಬೇಕು.
- ಜಾಗತೀಕರಣದ ಸಂದರ್ಭದಲ್ಲಿ ಇಂಗ್ಲಿಷ್ ಮಾಧ್ಯಮ ಕಲಿಕೆ ಅನಿವಾರ್ಯವಾದರೂ ರಾಜ್ಯ ಭಾಷೆಯಾಗಿ ಕನ್ನಡವನ್ನು ಕಲಿಯುವುದು ಅಗತ್ಯ ಮತ್ತು ಅನಿವಾರ್ಯ ಎನ್ನುವ ಮನೋಭಾವನೆಯನ್ನು ಮೂಡಿಸಬೇಕು.
- ಆಂಗ್ಲ ಮಾಧ್ಯಮ ಶಾಲೆಗಳ ಆಂತರಿಕ ಗುಣಮಟ್ಟ ಸಬಲೀಕರಣವಾಗಬೇಕು.
- ಮಾರ್ಗದರ್ಶನ, ತರಬೇತಿ ಮತ್ತು ಅನುಪಾಲನೆಗೆ ಪೂರಕವಾದ ಬೆಂಬಲದ ವ್ಯವಸ್ಥೆ ಇರಬೇಕು.
- ಭಾಷಾ ಶಿಕ್ಷಕರು ಸಕ್ರಿಯವಾಗಿ ಕಲಿಕಾ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡು ವೃತ್ತಿ ನೈಪುಣ್ಯತೆಯನ್ನು ವೃದ್ಧಿಸಿಕೊಳ್ಳಬೇಕಿದೆ.
- ಭಾಷಾ ಕಲಿಕಾ ಅಧಿನಿಯಮ ೨೦೧೫ನ್ನು ಕಡ್ಡಾಯವಾಗಿ ಜಾರಿಗೊಳಿಸುವುದು. ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಕನ್ನಡ ಕಲಿಕೆ ಕಾಯ್ದೆ ಮತ್ತು ನಿಯಮಗಳನ್ನು ಕಡ್ಡಾಯವಾಗಿ ಅನುಷ್ಠಾನ ಮಾಡುವುದು.
- ಕೇಂದ್ರೀಯ ವಿದ್ಯಾಲಯ ಶಾಲೆಗಳಲ್ಲಿ ಪ್ರಾದೇಶಿಕ ಭಿನ್ನತೆಯ ಅನುಸಾರ ಪ್ರಾದೇಶಿಕ ಭಾಷೆಯನ್ನು ಕಲಿಸಲು ಕಡ್ಡಾಯಗೊಳಿಸಬೇಕು.

## ಪರಾಮರ್ಶನ ಗ್ರಂಥಗಳು


೧. ಅಂಗಡಿ ಎಸ್.ಎಸ್, **ಭಾಷಾ ಕ್ಷೇತ್ರಕಾರ್ಯ,** ೧೯೯೬, ಸಮಾಜ ಪುಸ್ತಕಾಲಯ, ಧಾರವಾಡ.

೨. ಅನಂತನಾರಾಯಣ ಎಚ್.ಎಸ್. (ಸಂ.), ಬಸವರಾಜಕೊಡಗುಂಟಿ (ಲೇ.), **ಭಾಷಾ ವಿಶ್ಲೇಷಣೆ,** ೨೦೧೦, ಬಂಡಾರ ಪ್ರಕಾಶನ, ಮಸ್ಕಿ.

೩. ಅನುಸೂಯ ವಿ. ಪರಗಿ, **ಮಾತೃಭಾಷೆ ಕನ್ನಡ ತತ್ವ ಮತ್ತು ಬೋಧನಾ ಮಾರ್ಗ,** ೨೦೦೫, ವಿವೇಕ ಪ್ರಕಾಶನ, ಚಿಕ್ಕಬಳ್ಳಾಪುರ.

೪. ಅಶೋಕಕುಮಾರ ರಂಜೇರೆ, **ಭಾಷೆ ಮತ್ತು ಶಿಕ್ಷಣ,** ೨೦೦೫, ನಿಧಿ ಪ್ರಕಾಶನ, ಹೊಸಪೇಟೆ.

೫. ಅಶೋಕಕುಮಾರ ರಂಜೇರೆ, **ಭಾಷೆ ಸಮಾಜ ಶಿಕ್ಷಣ,** ೨೦೧೧, ಪಲ್ಲವ ಪ್ರಕಾಶನ, ಚನ್ನಪಟ್ಟಣ.

೬. ಅಶೋಕಕುಮಾರ್ ರಂಜೇರೆ, ಮಹದೇವಯ್ಯ ಪಿ., ಸಾಂಬಮೂರ್ತಿ, ವೀರೇಶ ಬಡಿಗೇರ (ಸಂ), **ಆಡಳಿತ ಕನ್ನಡ,** ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭. ಆಚಾರ್ಯ ಕೆ.ಪಿ., **ಇಂಗ್ಲೀಷ್–ಕನ್ನಡ ಭಾಷಾವಿಜ್ಞಾನ ಕೋಶ,** ೨೦೦೩, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೮. ಓಬಳೇಶಘಟ್ಟಿ ಆರ್., **ಭಾರತೀಯ ಶಿಕ್ಷಣ ಮತ್ತು ಪ್ರಚಲಿತ ಸಮಸ್ಯೆಗಳು,** ೧೯೯೨, ಶಿವಗಂಗ ಪ್ರಕಾಶನ, ತೋರಣಘಟ್ಟ.

೯. ಓಬಳೇಶಘಟ್ಟಿ ಆರ್., **ಭಾಷೆ ಮತ್ತು ಕನ್ನಡ ಭಾಷಾ ಬೋಧನೆ,** ೨೦೦೪, ವಿದ್ಯಾನಿಧಿ ಪ್ರಕಾಶನ, ಗದಗ.

೧೦. ಕಡಿವಾಳ ಜೆ.ಎ., **ಪ್ರಾಥಮಿಕ ಶಾಲಾಮಕ್ಕಳ ವರ್ತನಾ ಸಮಸ್ಯೆಗಳು,** ೧೯೯೦, ಧಾರವಾಡ, ಡೆಪ್ಯೂಟಿ ಚನ್ನಬಸಪ್ಪ ಪ್ರಾಥಮಿಕ ಶಿಕ್ಷಣ ಪ್ರತಿಷ್ಠಾನ, ಧಾರವಾಡ.

೧೧. ಕರೂರು ಎನ್.ಜಿ, **ಶಿಕ್ಷಣ ಮಾರ್ಗ,** ೨೦೧೧, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೧೨. ಕಲಬುರ್ಗಿ ಎಂ.ಎಂ., **ಕನ್ನಡ ನಾಮವಿಜ್ಞಾನ,** ೧೯೮೯, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೩. ಕಾರ್ಲೋಸ್. ಎಸ್., **ರಾಚನಿಕವಾದ ಮತ್ತು ನಿರಚನಾವಾದ,** ೨೦೦೦, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು.

೧೪. ಕಾಶೀನಾಥ್ ಎಚ್.ಎಂ ಮತ್ತು ಇತರರು, **ಬೋಧನಾ ಮಾದರಿಗಳು,** ೧೯೯೦, ಡೆಪ್ಯೂಟಿ ಚನ್ನಬಸಪ್ಪ ಪ್ರಾಥಮಿಕ ಶಿಕ್ಷಣ ಪ್ರತಿಷ್ಠಾನ, ಧಾರವಾಡ.

೧೫. ಕೀರ್ತಿನಾಥ ಕುರ್ತಕೋಟಿ, **ಭಾಷೆ ಮತ್ತು ಸಂಸ್ಕೃತಿ,** ೨೦೦೮, ಕುರ್ತಕೋಟಿ ಮೆಮೋರಿಯಲ್ ಟ್ರಸ್ಟ್, ಧಾರವಾಡ.

೧೬. ಕೃಷ್ಣ ಪರಮೇಶ್ವರಭಟ್ಟ ಮತ್ತು ಸಿ.ನಾಗಭೂಷಣ, **ಕನ್ನಡ: ರಚನೆ ಮತ್ತು ಬಳಕೆ,** ೨೦೦೫, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೭. ಕೃಷ್ಣಪರಮೇಶ್ವರಭಟ್ಟ, **ಭಾಷೆ ಮತ್ತು ಸಾಮಾಜಿಕ ಸಂದರ್ಭ,** ೨೦೧೩, ಅಭಿನವ ಪ್ರಕಾಶನ, ಬೆಂಗಳೂರು.

೧೮. ಕೃಷ್ಣಪ್ಪ ಎಸ್., **ಬೋಧನಾ ನಿಯಮಗಳು ಮತ್ತು ಶಿಕ್ಷಣ ಸಮಸ್ಯೆಗಳು.** ೧೯೮೩, ಡಿ.ವಿ.ಕೆ ಮೂರ್ತಿ ಪ್ರಕಾಶನ, ಮೈಸೂರು.

೧೯. ಕೃಷ್ಣಯ್ಯ, ಎಂ.ಎಚ್, **ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ,** ೧೯೯೩, ಸುವಿದ್ಯಾ ಪ್ರಕಾಶನ, ಬೆಂಗಳೂರು.

೨೦. ಕುಲಕರ್ಣಿ ಕೆ.ಜಿ, **ನೂತನ ಶಿಕ್ಷಣ ಶಾಸ್ತ್ರ ಭಾಗ-೨,** ೧೯೮೯, ವಿದ್ಯಾನಿಧಿ ಪ್ರಕಾಶನ, ಗದಗ.

೨೧. ಕುಶಾಲಪ್ಪಗೌಡ ಕೆ., **ಕನ್ನಡ ಸಂಕ್ಷಿಪ್ತ ವ್ಯಾಕರಣ,** ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೨. ಕೆಂಪೇಗೌಡ ಕೆ., **ಭಾಷೆ ಮತ್ತು ಭಾಷಾ ವಿಜ್ಞಾನ,** ೧೯೮೩, ಭಾರತೀ ಪ್ರಕಾಶನ, ಮೈಸೂರು.

೨೩. ಕೇಶವಶರ್ಮ, **ರಚನೆ –ನಿರಚನೆ,** ೨೦೦೦, ಅಭಿನವ ಪ್ರಕಾಶನ, ಬೆಂಗಳೂರು.

೨೪. ಕೊಂಗವಾಡ ಎಸ್.ಬಿ., **ಭಾಷೆ ಮತ್ತು ಕನ್ನಡ ಬೋಧನೆ,** ೨೦೦೨, ವಿದ್ಯಾನಿಧಿ ಪ್ರಕಾಶನ, ಗದಗ.

೨೫. ಗಂಗಾನಾಯಕ್ ಕೆ.ಎನ್., (ಪ್ರ.ಸಂ), **ಭಾಷಾವಿಜ್ಞಾನ–೧, (ಭಾಷಾ ಮತ್ತು ಭಾಷಾ ಪರಿವಾರಗಳು),** ೨೦೧೧, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೬. ಚಂದ್ರಾಚಾರ್ ಎಚ್.ಎಂ, ಮತ್ತು ರಾಜಶೇಖರಯ್ಯ ಕೆ.ಎನ್., **ಶಿಕ್ಷಣ ಶಾಸ್ತ್ರ–ಶಿಕ್ಷಣದ ಪ್ರಕ್ರಿಯೆಗಳು ಮತ್ತು ಒಲವುಗಳು,** ೨೦೦೫, ಅಶ್ವಿನಿ ಪ್ರಕಾಶನ, ರಾಣಿಬೆನ್ನೂರು.

೨೭. ಚಿದಾನಂದಮೂರ್ತಿ ಎಂ., **ಭಾಷಾವಿಜ್ಞಾನ ಮತ್ತು ಛಂದಸ್ಸು,** ೨೦೦೨, ಸ್ವಪ್ನ ಬುಕ್‌ಹೌಸ್, ಬೆಂಗಳೂರು.

೨೮. ಜೋತ್ಸ್ನ ಕಾಮತ್, **ಎಜುಕೇಶನ್ ಇನ್ ಇಂಡಿಯಾ ಥ್ರೊ ದಿ ಏಜಸ್,** ೧೯೮೮, ಕರ್ನಾಟಕ ಸಂಘ, ಬಾಂಬೆ.

೨೯. ತಿರುಮಲೇಶ್, ಕೆ.ವಿ, **ನಮ್ಮ ಕನ್ನಡ,** ಅಭಿನವ ಪ್ರಕಾಶನ, ಬೆಂಗಳೂರು.

೩೦. ನರಸಿಂಹಚಾರ್ಯ ಆರ್., **ಹಿಸ್ಟರಿ ಆಫ್ ಕನ್ನಡ ಲಾಂಗ್ವೆಜ್,** ೧೯೯೦, ಏಷಿಯನ್ ಎಜುಕೇಶನ್ ಸರ್ವೀಸ್ ಪಬ್ಲಿಕೇಷನ್, ನ್ಯೂ ಡೆಲ್ಲಿ.

೩೧. ನಾರಾಯಣ ಕೆ.ವಿ., **ಕನ್ನಡ ಜಗತ್ತು ಅರ್ಧ ಶತಮಾನ,** ೨೦೦೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೨. ನಾರಾಯಣ ಕೆ.ವಿ., **ಭಾಷಾ ವಿಶ್ವಕೋಶ–೧,** ೨೦೦೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೩. ನಾರಾಯಣ ಕೆ.ವಿ., **ದ್ವಿಭಾಷಿಕತೆ,** ೧೯೯೮, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೪. ನಾರಾಯಣ ಕೆ.ವಿ., **ಮತ್ತೆ ಭಾಷೆಯ ಸುತ್ತಮುತ್ತ,** ೨೦೦೧, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೫. ನಾರಾಯಣ ಕೆ.ವಿ., **ಕನ್ನಡ ಶೈಲಿ ಕೈಪಿಡಿ,** ೧೯೯೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೭. ನಾರಾಯಣಭಟ್ಟ ಎ.ಆರ್., **ಶಿಕ್ಷಣ ಮಾಧ್ಯಮ ಸಮಗ್ರ ಚಿಂತನ,** ೧೯೯೩, ಗೀತಾ ಕುಟೀರ, ಬೆಂಗಳೂರು.

೩೮. ನಾಯಕ್ ಜೆ.ಪಿ., **ಭಾರತದಲ್ಲಿ ಪ್ರಾಥಮಿಕ ಶಿಕ್ಷಣ: ಈಡೇರಬೇಕಾದ ಭರವಸೆ,** ಅನು: ಮಹಾಬಲೇಶ್ವರ ರಾವ್, ೧೯೯೦, ಗೀತಾಬುಕ್‌ಹೌಸ್, ಬೆಂಗಳೂರು.

೩೯. ಪುರುಷೋತ್ತಮ ಜಿ., **ಶಾಲೆಯಲ್ಲಿ ಹಿಂದುಳಿಯುವಿಕೆ** (೨೦೧೨), ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೦. ಪಂಡಿತ ಸಿ.ಕೃಷ್ಣ., **ಶಾಲೆಗಳಲ್ಲಿ ಕನ್ನಡ ಬೋಧನೆ,** ೧೯೯೦, ಗೀತಾಬುಕ್ ಹೌಸ್, ಮೈಸೂರು.

೪೧. ಪಾಂಡುರಂಗ ಬಾಬು ಡಿ., **ನುಡಿನೋಟ,** ೨೦೦೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೨. ಪುರುಷೋತ್ತಮ ಬಿಳಿಮಲೆ, **ಕಲಿಕೆಯ ತೊಂದರೆಗಳು,** ೧೯೯೯, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೩. ಬಿಳಿಗಿರಿ ಎಚ್.ಎಸ್., **ವರ್ಣನಾತ್ಮಕ ವ್ಯಾಕರಣ,** ೨೦೦೮, ಪ್ರಸಾರಾಂಗ, ಬೆಂಗಳೂರು.

೪೪. ಬೇದ್ರೆ ಮಂಜುನಾಥ್, **ಆಡಿ ಕಲಿಯೋಣ ಕನ್ನಡ,** ೨೦೧೧, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೪೫. ಭಟ್ ಜಿ.ಐ., **ಪಠ್ಯಕ್ರಮ ತತ್ವಗಳು ಮತ್ತು ಯೋಜನೆ,** ೨೦೦೦, ಪದ್ಮ ಪ್ರಕಾಶನ, ಹೊನ್ನಾವರ.

೪೬. ಭರತ್ ಭೂಷಣ್, **ಶಿಕ್ಷಣದ ಆಧಾರಗಳು,** ೧೯೮೯, ವಿಧ್ಯಾನಿಧಿ ಪ್ರಕಾಶನ, ಗದಗ.

೪೭. ಮಹಾದೇವಯ್ಯ ಪಿ. **ಕನ್ನಡ ಬಳಕೆ ಸಾಮಾಜಿಕ ವಿನ್ಯಾಸ,** ೨೦೦೬, ವಿಜಯಲಕ್ಷ್ಮಿ ಪ್ರಕಾಶನ, ಮೈಸೂರು.

೪೮. ಮಹಾದೇವಯ್ಯ ಪಿ., **ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು,** ೨೦೦೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೯. ಮಹಾಬಲೇಶ್ವರರಾವ್, **ಬಹುಮುಖ ಶಿಕ್ಷಣ, ಶೈಕ್ಷಣಿಕ ಲೇಖನಗಳ ಸಂಗ್ರಹ,** ೧೯೯೨, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೦. ಮಹಾಬಲೇಶ್ವರ ರಾವ್, **ಪ್ರಾಥಮಿಕ ಶಾಲೆಗಳಲ್ಲಿ ಕನ್ನಡ ಬೋಧನೆ,** ೧೯೯೩, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೧. ಮಹಾಬಲೇಶ್ವರರಾವ್, **ಪ್ರಾಥಮಿಕ ಶಿಕ್ಷಣ: ಸಮಸ್ಯೆಗಳು ಸಲಹೆಗಳು,** ೧೯೯೯, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೨. ರಹಮತ್ ತರೀಕೆರೆ, **ಬಹುಭಾಷಿಕತೆ,** ೧೯೯೯, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ರಾಘವೇಂದ್ರ ಲ. **ಶಿಕ್ಷಣಶಾಸ್ತ್ರ ಕೈಪಿಡಿ,** ಶ್ರೀರಾಘವೇಂದ್ರ ಪ್ರಕಾಶನ, ಬೆಂಗಳೂರು.

೫೪. ರಾಮಚಂದ್ರ ಸಿ.ಎಸ್., **ಕನ್ನಡ ಭಾಷಾಲೋಚನ,** ೨೦೦೪, ಮಾಂಗಿರಿ ಪ್ರಕಾಶನ, ಮೈಸೂರು.

೫೫. ರಾಜಶೇಖರ(ವೇಮ), **ಬಳ್ಳಾರಿ ಜಿಲ್ಲೆಯ ಶೈಕ್ಷಣಿಕ ಸೌಲಭ್ಯಗಳು,** ೧೯೯೪, ಶ್ರೀಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ಹೂವಿನಹಡಗಲಿ

೫೬. ರಾಜೇಶ್ವರಿ ಮಹೇಶ್ವರಯ್ಯ, **ಆಧುನಿಕ ವರ್ಣನಾತ್ಮಕ ಭಾಷಾ ವಿಜ್ಞಾನ,** ೨೦೦೩, ಸಮಾಜ ಪುಸ್ತಕಾಲಯ, ಧಾರವಾಡ.

೫೭. ರುದ್ರಮುನಿ ಈ. ಮತ್ತು ಅನಂತರಾಮು ಬಿ.ಸಿ., **ಭಾರತದಲ್ಲಿ ಶಿಕ್ಷಣದ ಉದಯ,** ೨೦೦೬(ಐದನೇ ಮುದ್ರಣ), ಶ್ರೀಲಕ್ಷ್ಮೀ ಪ್ರಕಾಶನ, ಚಿತ್ರದುರ್ಗ.

೫೮. ಲಲಿತಾಂಬ ವೃಷಭೇಂದ್ರಸ್ವಾಮಿ, **ಮಕ್ಕಳ ಶಿಕ್ಷಣ ಚಿಂತನೆಗಳು,** ೧೯೯೭, ಮಕ್ಕಳ ಸಾಹಿತ್ಯಿಕ ಪ್ರಕಾಶನ, ಧಾರವಾಡ.

೫೯. ಲಿಂಗದೇವರು ಹಳೆಮನೆ, **ಕನ್ನಡಕಲಿ,** ೨೦೦೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೦. ವೀಣಾ ಎಸ್.ಜಾಲಾದಿ, **ಭಾರತೀಯ ಸಮಾಜದಲ್ಲಿ ಶಿಕ್ಷಣ,** ೨೦೦೬, ಶ್ರೀಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗ.

೬೧. ಶ್ರೀಕಂಠಯ್ಯ ತಿ.ನಂ., **ಕನ್ನಡ ಮಾಧ್ಯಮ ವ್ಯಾಕರಣ,** ೨೦೦೬, ಗೀತಾಬುಕ್ ಹೌಸ್, ಮೈಸೂರು.

೬೨. ಶಂಕರಭಟ್ಟ ಡಿ.ಎನ್., **ಕನ್ನಡ ಭಾಷೆಯ ಕಲ್ಪಿತ ಚರಿತ್ರೆ,** ೧೯೯೫, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೩. ಶಂಕರಭಟ್ಟ ಡಿ.ಎನ್., **ಕನ್ನಡಕ್ಕೆ ಬೇಕು ಕನ್ನಡದ್ದೇ ವ್ಯಾಕರಣ,** ೨೦೦೧, ಭಾಷಾ ಪ್ರಕಾಶನ, ಮೈಸೂರು.

೬೪. ಶಂಕರಭಟ್ಟ, ಡಿ.ಎನ್., **ಕನ್ನಡ ಬರಹವನ್ನು ಸರಿಪಡಿಸೋಣ,** ೨೦೦೫, ಭಾಷಾ ಪ್ರಕಾಶನ, ಮೈಸೂರು.

೬೫. ಶಂಕರಭಟ್ಟ ಡಿ.ಎನ್., **ಕನ್ನಡ ನುಡಿಯ ಬಗೆಗೆ ಚಿಂತನೆ,** ೨೦೦೬, ಕನ್ನಡ ಮತ್ತು ಸಂಸ್ಕೃತ ಇಲಾಖೆ, ಬೆಂಗಳೂರು.

೬೬. ಶಂಕರಭಟ್ಟ ಡಿ.ಎನ್., **ಕನ್ನಡ ನುಡಿ ನಡೆದು ಬಂದ ದಾರಿ,** ೨೦೦೭, ಭಾಷಾ ಪ್ರಕಾಶನ, ಹೆಗ್ಗೋಡು.

೬೭. ಶ್ರೀಧರ್ ಎಸ್.ಎನ್., **ಇಂದಿನ ಕನ್ನಡ: ರಚನೆ ಮತ್ತು ಬಳಕೆ,** ೨೦೦೯, ಅಭಿನವ ಪ್ರಕಾಶನ, ಬೆಂಗಳೂರು.

೬೮. **ಭಾಷೆ ಮತ್ತು ಬುದ್ಧಿವಂತಿಕೆ,** ೨೦೧೨, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೬೯. ಸುರೇಶ್. ಕೆ.ಎಂ., **ಕಲಿಕೆ ಮತ್ತು ಬೋಧನೆಯ ಮನೋವಿಜ್ಞಾನ,** ೨೦೦೬, ಸುಮುಖ ಪ್ರಕಾಶನ, ಬೆಂಗಳೂರು.

೭೦. ಸಂಗಮೇಶ ಸವದತ್ತಿಮಠ, **ಭಾಷಾ ಲೇಖ,** ೧೯೯೯, ರೂಪರಶ್ಮಿ ಪ್ರಕಾಶನ, ಗುಲಬರ್ಗಾ.

೭೧. ಸಾಂಬಮೂರ್ತಿ, **ದಿನದಿನ ೨,** ೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೨. ಸಾಂಬಮೂರ್ತಿ, **ಭಾಷೆ ಮತ್ತು ಅಶಾಬ್ದಿಕ ಸಂವಹನ,** ೨೦೦೪, ಸಿ.ವಿ.ಜಿ, ಪಬ್ಲಿಕೇಷನ್, ಬೆಂಗಳೂರು.

೭೩. ಸಾಂಬಮೂರ್ತಿ, **ಕನ್ನಡ ಕ್ರಿಯಾರಚನೆ-ಬಗೆಗಳು,** ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೭೪. ಸಾ.ಶಿ.ಮರುಳಯ್ಯ, **ಕನ್ನಡ ಭಾಷಾಲೋಕ ಮತ್ತು ಪೂರಕ ಸಾಹಿತ್ಯ,** ೨೦೦೭, ಸ್ವಪ್ನ ಬುಕ್ ಹೌಸ್, ಬೆಂಗಳೂರು.

೭೫. ಸುಬ್ಬಣ್ಣ ಕೆ.ವಿ., **ಕವಿರಾಜಮಾರ್ಗ ಮತ್ತು ಕನ್ನಡ ಜಗತ್ತು,** ೨೦೦೯, ಅಕ್ಷರ ಪ್ರಕಾಶನ, ಹೆಗ್ಗೋಡು.

೭೬. ಸೋಮಶೇಖರಗೌಡ, **ಇಂದಿನ ಕನ್ನಡ ಭಾಷಾ ಬಳಕೆ,** ೧೯೮೧, ವೆಂಕಣ್ಣಯ್ಯ ಪ್ರತಿಷ್ಠಾನ, ಮೈಸೂರು.

೭೭. ವಿಲ್ಯಂ ಮಾಡ್ತ, **ಅನ್ಯಭಾಷಾಬೋಧನೆ,** ೧೯೭೯, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

**ಪಿಎಚ್.ಡಿ ಮಹಾಪ್ರಬಂಧಗಳು**

೧. ಗಿರಿಜಮ್ಮ ಎಂ.ವಿ. **"ಮಕ್ಕಳಲ್ಲಿ ಕನ್ನಡ ಭಾಷಾ ಕಲಿಕೆ"** ೨೦೦೭, ಮೈಸೂರು ವಿಶ್ವವಿದ್ಯಾಲಯ, ಮೈಸೂರು

೨. ಚಲಪತಿ ಆರ್., **ಪಠ್ಯಪುಸ್ತಕಗಳು ಮತ್ತು ಸಾಂಸ್ಕೃತಿಕ ರಾಜಕಾರಣ ಸಾಮಾಜಿಕ ಹೊಣೆಗಾರಿಕೆಯ ತೊಡಕುಗಳು,** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ನಂದ ಇಟಕರ್ ಎನ್.ಆರ್. **ಒಂದನೇ ತರಗತಿಯಿಂದ ಐದನೇ ತರಗತಿಯವರೆಗಿನ ಕನ್ನಡ ಪಠ್ಯಪುಸ್ತಕದಲ್ಲಿಯ ಪದಗಳ ಅಧ್ಯಯನ,** ೨೦೦೫, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೪. ನಾಗರಾಜ ಚಿಂತ್ರಪಳ್ಳಿ, **ಕನ್ನಡ ಕಲಿಕೆಯ ಸಮಸ್ಯೆಗಳು: ಒಂದು ಅಧ್ಯಯನ (ಬಳ್ಳಾರಿ ಜಿಲ್ಲೆಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲಾ ಮಕ್ಕಳನ್ನು ಅನುಲಕ್ಷಿಸಿ),** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫. ಪ್ರಕಾಶ್ ಬಿ. **ದಕ್ಷಿಣ ಕನ್ನಡ ಪ್ರಾಥಮಿಕ ಮತ್ತು ಶಿಕ್ಷಣದ ಕನ್ನಡ ಪಠ್ಯಪುಸ್ತಕಗಳ ರಾಚನಿಕ ಸಾಹಿತ್ಯದ ಮತ್ತು ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ,** ೨೦೧೦, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೬. ಪಾರ್ವತಮ್ಮ ಜಿ.ಹೆಚ್. **ಕಿರಿಯ ಪ್ರಾಥಮಿಕ ಶಾಲಾ ಶಿಕ್ಷಣದ ಮೂಲಕ ಮೂಲಭೂತ ಗ್ರಹಿಕೆಗಳ ಮತ್ತು ಕೌಶಲಗಳ ಸಾಧನೆ,** ೨೦೧೦, ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೭. ಭೀಮಣ್ಣ ಮೇಟಿ, **ಕನ್ನಡ ಭಾಷೆಯ ಕಲಿಕೆಯ ಸಮಸ್ಯೆಗಳು,** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೮. ಮಂಜುಳ ಎನ್.ಕೆ., **ಮಕ್ಕಳಲ್ಲಿ ವಾಕ್ಯ ರಚನಾ ನಿಯಮಗಳ ಬೆಳವಣಿಗೆ,** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ

೯. ವಾಗೀಶ ಎನ್.ಎಂ., **ಪ್ರಾಥಮಿಕ ಹಂತರದ ಕನ್ನಡ ಭಾಷಾ ಪಠ್ಯಪುಸ್ತಕಗಳ ಭಾಷಿಕ ಮತ್ತು ಶೈಕ್ಷಣಿಕ ಅಧ್ಯಯನ,** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦. ವೀರಾಕ್ಷಿ, **'ಕರ್ನಾಟಕದಲ್ಲಿ ಭಾಷಾ ಶಿಕ್ಷಣ ಮತ್ತು ಮಾಧ್ಯಮದ ವಾಗ್ವಾದಗಳು' (ಪ್ರಾಥಮಿಕ ಶಿಕ್ಷಣದ ಕನ್ನಡ ಮಾಧ್ಯಮವನ್ನು ಅನುಲಕ್ಷಿಸಿ)** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧. ಸೋಮಕ್ಕ ಎಂ. **ಲಂಬಾಣಿ ಮಕ್ಕಳ ಕನ್ನಡ ಕಲಿಕೆಯ ಸಮಸ್ಯೆಗಳು,** ೨೦೦೭, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಎಂ.ಫಿಲ್. ಪ್ರಬಂಧಗಳು**

೧. ಓಂಪ್ರಕಾಶ್, **ಬಳ್ಳಾರಿ ವ್ಯಾವಹಾರಿಕ ಕನ್ನಡ ಉಚ್ಚಾರಣೆ ಮತ್ತು ಧ್ವನಿ ನಿಯಮಗಳು,** ೨೦೧೧, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ನಾರಾಯಣ ಡಿ.ಎಸ್., **ಇಂಗ್ಲೀಷ್ ಕನ್ನಡ ಸಂಬಂಧ ಕುರಿತ ಚಿಂತನೆಗಳು,** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಬಸವರಾಜ ಕೋಡಗುಂಟಿ, **ಮಕ್ಕಳ ಭಾಷೆ ಒಂದು ಅಧ್ಯಯನ,** ೨೦೦೯, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೪. ಸಿದ್ದಲಿಂಗಪ್ಪ ಎನ್., **ಪ್ರೌಢ ಶಾಲಾ ಮಕ್ಕಳ ಕನ್ನಡ ಬಳಕೆಯಲ್ಲಿ ಕಾಗುಣಿತ ದೋಷಗಳು,** ೨೦೧೦, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಎಂ.ಇಡಿ. ಕಿರು ಪ್ರಬಂಧಗಳು**

೧. ಕಲಾವತಿ ಬಿ. **ಏಳನೇ ತರಗತಿಯ ವಿದ್ಯಾರ್ಥಿಗಳು ಕನ್ನಡದಲ್ಲಿ ಲೇಖನ ಚಿಹ್ನೆಗಳನ್ನು ಬಳಸುವಾಗ ಮಾಡುವ ದೋಷಗಳು : ಒಂದು ತೌಲನಿಕ ಅಧ್ಯಯನ,** ೨೦೦೭, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೨. ಪುಷ್ಪಾವತಿ ಎಸ್.ಕೆ., **ಐದನೆ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಓದುಗಾರಿಕೆಯಲ್ಲಿ ಮಾಡುವ ದೋಷಗಳ ತೌಲನಿಕ ಅಧ್ಯಯನ,** ೨೦೦೮, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೩. ಬಣಕಾರ ಮಮತ, **ರಾಣೆಬೆನ್ನೂರು ತಾಲ್ಲೂಕಿನ ೫ನೇ ತರಗತಿ ವಿದ್ಯಾರ್ಥಿಗಳ ಕನ್ನಡ ಭಾಷೆಯ ವಾಚನ ಸಾಮರ್ಥ್ಯದ ದೋಷಗಳಿಗೆ ಸಂಬಂಧಿಸಿದ ಕಾರಣಗಳ ಅಧ್ಯಯನ,** ೨೦೦೬, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೪. ಮೃತ್ಯುಂಜಯ ಕೆ. **ಪ್ರಾಥಮಿಕ ಆಂಗ್ಲ ಮಾಧ್ಯಮ ಶಾಲಾ ಮಕ್ಕಳ ಕನ್ನಡ ಭಾಷೆಯ ಓದುಗಾರಿಕೆಯಲ್ಲಿ ದೋಷಗಳು ಕುರಿತು ಒಂದು ವಿಶ್ಲೇಷಣಾತ್ಮಕ ಅಧ್ಯಯನ,** ೨೦೦೭, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೫. ಮೀನಾ, **೭ನೇ ತರಗತಿಯ ಕನ್ನಡ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡ ಬರವಣಿಗೆಯಲ್ಲಿ ಮಾಡುವ ಕಾಗುಣಿತ ದೋಷಗಳ ಅಧ್ಯಯನ ಮತ್ತು ನಿವಾರಣೋಪಾಯಗಳ ಮೌಲ್ಯ ನಿರ್ಧಾರ,** ೨೦೦೫, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

೬ ರವೀಂದ್ರ ಕರ್ಜಗಿ, **ಏಳನೇ ತರಗತಿಯ ಕನ್ನಡ ಮಾಧ್ಯಮ ಮತ್ತು ಆಂಗ್ಲ ಮಾಧ್ಯಮ ವಿದ್ಯಾರ್ಥಿಗಳು ಕನ್ನಡದ ಸಂಯುಕ್ತಾಕ್ಷರ ಪದಗಳಲ್ಲಿ ಮಾಡುವ ಸ್ಖಾಲಿತ್ಯಗಳ ತೌಲನಿಕ ಅಧ್ಯಯನ,** ೨೦೦೭, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ.

**ನಮ್ಮ ಕನ್ನಡ- ಹೊನ್ನ ಸಂಚಿಕೆ**

೧. ಅಶೋಕಕುಮಾರ ರಂಜೇರೆ (ಸಂ), **ನಮ್ಮ ಕನ್ನಡ,** ಕನ್ನಡ ಭಾಷಾಧ್ಯಾಯನ ವಿಭಾಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨. ಪಾಂಡುರಂಗ ಬಾಬು (ಸಂ) ಮಂಜುಳ ಎನ್.ಕೆ.(ಲೇ.), **ನಮ್ಮ ಕನ್ನಡ: ಬಳ್ಳಾರಿ ಜಿಲ್ಲೆಯ ಕನ್ನಡದ ಮೇಲೆ ತೆಲುಗಿನ ಪ್ರಭಾವ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶಿಕ್ಷಣ ಇಲಾಖೆಯ ಸಂಚಿಕೆಗಳು**

೧. ಕರ್ನಾಟಕ ಸರಕಾರ, **ಶಿಕ್ಷಣ ವಾರ್ತೆ,** ೨೦೧೩, ಸಾರ್ವಜನಿಕ ಶಿಕ್ಷಣ ಇಲಾಖೆ, ಸಂಚಿಕೆ-೦೨, ೦೩, ೦೪, ೦೫, ಮತ್ತು ೦೬.

**ಪತ್ರಿಕೆಗಳು**

೧. ಅನಂತಮೂರ್ತಿ ಯು.ಆರ್., **ಗ್ರಹಿಕೆಗೆ ಇಂಗ್ಲಿಷ್ ವಿಷಯ ಜ್ಞಾನಕ್ಕೆ ಕನ್ನಡ,** ಪ್ರಜಾವಾಣಿಯ ಶಿಕ್ಷಣ ವಿಶೇಷ ಸಂಚಿಕೆ(೨೧-೭-೨೦೧೨).

೨. ಕುಮಾರ ಟಿ.ಎಂ., **ಪಠ್ಯಕ್ರಮ ಹತ್ತೆಂಟು ಮಜಲು ಹಲವು ಗೋಜಲು,** ವಿಜಯ ಕರ್ನಾಟಕ ಸಂಚಿಕೆ.

೩. ಚಂದ್ರಶೇಖರ್ ಎಚ್.ಬಿ., **ಕಲಿಕೆ: ಇಲ್ಲಿದೆ ರಹದಾರಿ,** ಪ್ರಜಾವಾಣಿಯ ಸಪ್ತಾಹಿಕ(೭-೧೦-೨೦೧೩).

೪. ಚಂದ್ರಶೇಖರ್ ಎಚ್.ಬಿ, **ಮಗು ಕೇಂದ್ರಿತ ಶಿಕ್ಷಣ ನೀಡುವತ್ತ....** ಪ್ರಜಾವಾಣಿಯ ಸಂಗತ ಎಂಬ ಅಂಕಣ (೧೩-೦೨-೨೦೧೪).

೫. ಚನ್ನಬಸಪ್ಪ ರೊಟ್ಟಿ **'ಪೋಷಕರ ಸಭೆ ಏನು ಎತ್ತ?** ಪ್ರಜಾವಾಣಿಯ ಶಿಕ್ಷಣ ವಿಶೇಷ ಸಂಚಿಕೆ (೩೧-೦೮-೨೦೧೫).

೬. ಜಯದೇವ ಜಿ.ಎಸ್., **ಸರಕಾರಿ ಶಾಲೆಗಳನ್ನು ಉಳಿಸಲು ಗುಣಮಟ್ಟದ ಶಿಕ್ಷಣವೇ ಪರಿಹಾರ,** ಪ್ರಜಾವಾಣಿಯ ಶಿಕ್ಷಣ ವಿಶೇಷ ಸಂಚಿಕೆ(೨೨-೧೨-೨೦೧೧).

೭. ನವೀನಕುಮಾರ ಎಂ., **ಗುಣಮಟ್ಟದ ಶಿಕ್ಷಣ ಹೊಸ ಸವಾಲು,** ಪ್ರಜಾವಾಣಿಯ ಶಿಕ್ಷಣ ವಿಶೇಷ ಸಂಚಿಕೆ (೩೦-೧-೨೦೧೨).

೮. ನಿರಂಜನಾರಾಧ್ಯ ವಿ.ಪಿ., **ಮಾತೃ ಭಾಷೆ ಉಳಿಸುವ ಹಾಲು,** ಪ್ರಜಾವಾಣಿಯ ಶಿಕ್ಷಣ ವಿಶೇಷ ಸಂಚಿಕೆ

೯. ಪದ್ಮನಾಭಭಟ್ **ಕಲಿ-ಕಲಿಸುವ ತರಬೇತಿ,** ಪ್ರಜಾವಾಣಿಯ ಶಿಕ್ಷಣ ವಿಶೇಷಾಂಕ(೨೪-೧೧-೨೦೧೪).

೧೦. ಪರಮೇಶ್ವರ ಭಟ್, **(ಪ್ರಶ್ನೆ: ವಿದ್ಯಾರ್ಥಿ-ಬೋಧಕ),** ಪ್ರಜಾವಾಣಿಯ ಶಿಕ್ಷಣ ವಿಶೇಷ ಸಂಚಿಕೆ (೨೩-೧೦-೨೦೧೦).

೧೧. ಪ್ರದೀಪ್ ಕುಮಾರ್ ವಿ., **ಪರಿಣಾಮಕಾರಿ ಸಂವಹನ ಹೇಗೆ?,** ಪ್ರಜಾವಾಣಿಯ ಸಪ್ತಾಹಿಕ (೭-೧೦-೨೦೧೩).

೧೨. ಪ್ರಶಾಂತ ಎಚ್.ಡಿ., **ಶಾಲಾ ಶಿಕ್ಷಣ ಪರಿಣಾಮಕಾರಿ,** ಬೋಧನಾ ಸಮಯ, ೨೦೦೬, ಪ್ರಜಾವಾಣಿ.

೧೩. ಬೇಂದ್ರೆ ಮಂಜುನಾಥ, **ಕಾರ್ಡ್‌ಬಳಸಿ ಓದಿಸುವ ಆಟ,** ಪ್ರಜಾವಾಣಿ, ೨೦೦೮, ಆ.೨೬

೧೪. ಮೇಟಿ ಮಲ್ಲಿಕಾರ್ಜುನ, **ಇಂಗ್ಲಿಷ್ ಎಂಬ ಚಿತ್ರದ ಕಬ್ಬು!,** ಪ್ರಜಾವಾಣಿಯ(೨೩-೦೩-೨೦೦೫.

೧೫. ರಘು ಎನ್., **ಮನೆಮಾತು ಉಚ್ಚಾರಣಾ ದೋಷ,** ಶಿಕ್ಷಣ ಮಾರ್ಗದರ್ಶಿ ವಿಶೇಷಾಂಕ(೧೯-೫-೨೦೧೪).

೧೬. ವೆಂಕಟಸುಬ್ಬಯ್ಯ ಜಿ., **ಕನ್ನಡ ಶಬ್ದ ಸಂಪತ್ತು ವಿನಾಶ ತಡೆ ನಮ್ಮೆಲ್ಲರ ಜವಾಬ್ದಾರಿ,** ಪತ್ರಿಕಾ ಸಂವಾದ.

೧೭. ಸಾ.ದು. ಶಿವಮಲ್ಲಯ್ಯ ಸಾಸಲಾಪೂರ, **ಮಕ್ಕಳಿಗೆ ಬೇಕು ಭಾಷಾ ಕೌಶಲ್ಯ,** ಪ್ರಜಾವಾಣಿಯ ವಿಶೇಷ ಸಂಚಿಕೆ ( ೨೧-೫-೨೦೧೬).

**ನಿಯತಕಾಲಿಕೆಗಳು**

೧. ಕಡಕೋಳ ವೈ.ಬಿ., ಶಿಕ್ಷಣ ಶಿಲ್ಪಿ ನಿಯತಕಾಲಿಕೆ (ಮೇ-೨೦೧೭), **ಮಕ್ಕಳ ಶೈಕ್ಷಣಿಕ ಪ್ರಗತಿಯಲ್ಲಿ ಶಿಕ್ಷಕರ ಪಾತ್ರ**

೨. ಕಮಲ ವಿ.ಮುಕುಂದ, **'ಇವತ್ತು ಶಾಲೆಯಲ್ಲಿ ನೀನೇನು ಪ್ರಶ್ನೆ ಕೇಳಿದೆ?,'** ೨೦೧೭, ಅಜಿಮ್ ಪ್ರೇಮ್‌ಜೀ ಪೌಂಡೇಶನ್, ಬೆಂಗಳೂರು.

೩. ಕೋ.ವೆಂ.ರಾಮಕೃಷ್ಣೇಗೌಡ, ಶಿಕ್ಷಣ ಶಿಲ್ಪಿ ನಿಯತಕಾಲಿಕೆ (ನವೆಂಬರ್-೨೦೧೬) **ಸಂಘರ್ಷದಿಂದ ಉತ್ಕರ್ಷಕ್ಕೇರಿದ ಕನ್ನಡ.**

೪. ಮನೋಹರ್, ಶಿಕ್ಷಣ ಶಿಲ್ಪಿ ನಿಯತಕಾಲಿಕೆ (ಮಾರ್ಚ್-೨೦೧೭) **ಯಶಸ್ವಿ ಶೈಕ್ಷಣಿಕ ಸಮ್ಮಿಲನ, ಬದುಕಲು ಅನ್ನ ನೀಡುವ ಭಾಷೆ ಬೆಳೆಯುತ್ತದೆ**

೫. ಶಿಕ್ಷಣ ಶಿಲ್ಪಿ (ಡಿಸೆಂಬರ್-೨೦೧೬), **ಪಠ್ಯಕ್ಷೇತ್ರಗಳು, ಶಾಲಾ ಹಂತಗಳು ಮತ್ತು ಮೌಲ್ಯಮಾಪನ,**

# ಪ್ರಶ್ನಾವಳಿ

## ಶಿಕ್ಷಕರಿಗಾಗಿ ಪ್ರಶ್ನಾವಳಿ

**ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ ಭಾಷಿಕ ಅಧ್ಯಯನ**

**(ಬಳ್ಳಾರಿ ನಗರ ಪ್ರದೇಶವನ್ನು ಅನುಲಕ್ಷಿಸಿ)**

**A study of language: Kannada Teaching and learning in English Medium Schools**

**(With Reference to Bellary City)**

**ಸೂಚನೆಗಳು:**

ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಬೋಧನೆ ಮತ್ತು ಕಲಿಕೆ : ಭಾಷಿಕ ಅಧ್ಯಯನ ವಿಷಯವಾಗಿ ನಿಮ್ಮ ಅಮೂಲ್ಯವಾದ ತೀರ್ಮಾನವನ್ನು ಕೋರಲಾಗಿದೆ. ಈ ಅಧ್ಯಯನದ ಮೂಲ ಉದ್ದೇಶ ದ್ವಿತೀಯ ಭಾಷೆ ಕನ್ನಡ ಬೋಧನೆಗೆ ಸಂಬಂಧಿಸಿದಂತೆ ಪಠ್ಯಪುಸ್ತಕ, ಪಠ್ಯಕ್ರಮ, ತರಗತಿ, ಬೋಧನಾ ವಿಧಾನಗಳು, ಪರೀಕ್ಷೆ ಮತ್ತು ಮೌಲ್ಯಮಾಪನ ಹಾಗೂ ಶಿಕ್ಷಕರ ತರಬೇತಿ ಮುಂತಾದವುಗಳನ್ನು ಅಧ್ಯಯನ ಮಾಡುವುದಾಗಿದೆ. ದಯವಿಟ್ಟು ಕೊಟ್ಟಿರುವ ಪ್ರಶ್ನೆಗಳ ಮುಖಾಂತರ ಅವಶ್ಯಕ ಮಾಹಿತಿಯನ್ನು ಒದಗಿಸಲು ಕೋರಲಾಗಿದೆ.

ಎಲ್ಲಾ ಮಾಹಿತಿಯನ್ನು ಸಂಶೋಧನೆಯ ಉದ್ದೇಶಕ್ಕಾಗಿ ಮಾತ್ರ ಬಳಸಲಾಗುವುದು, ಆದ್ದರಿಂದ ದಯವಿಟ್ಟು ಸ್ಪಂದಿಸಲು ಕೋರಿದೆ.

ಪ್ರಶ್ನಾವಳಿಯ ಬಲಬದಿಗೆ ಹೌದು ಮತ್ತು ಇಲ್ಲ ಎಂಬ ಕೆಲವು ಉತ್ತರಗಳನ್ನು ನೀಡಲಾಗಿದೆ. ನಿಮ್ಮ ಸಲಹೆಯ ಪ್ರಶ್ನೆಗೆ ಅನುಕೂಲವಿದ್ದಲ್ಲಿ 'ಹೌದು' ಉತ್ತರಕ್ಕೆ ದುಂಡು ಸುತ್ತಲು, ತಪ್ಪಿದ್ದಲ್ಲಿ 'ಇಲ್ಲ' ಉತ್ತರಕ್ಕೆ ದುಂಡು ಸುತ್ತಲು ತಿಳಸಲಾಗಿದೆ.

1) ವೈಯಕ್ತಿಕ ಮಾಹಿತಿ

2) ಶೈಕ್ಷಣಿಕ ಮಾಹಿತಿ

**1) ವೈಯಕ್ತಿಕ ಮಾಹಿತಿ**

1. ಶಿಕ್ಷಕರ ಹೆಸರು : ------------------------------
2. ಲಿಂಗ : ಪುರುಷ ◯ ಮಹಿಳೆ ◯
3. ವಯಸ್ಸು : 25 ವರ್ಷಕ್ಕಿಂತ ಕಡಿಮೆ ◯
   26 ರಿಂದ 30 ವರ್ಷ ◯
   31 ರಿಂದ 40 ವರ್ಷ ◯
   41 ರಿಂದ 50 ವರ್ಷ ◯

51 ವರ್ಷಕ್ಕಿಂತ ಮೇಲ್ಪಟ್ಟ ◯

4. ವೈವಾಹಿಕ ಸ್ಥಿತಿ : ವಿವಾಹಿತ/ತೆ ◯ ಅವಿವಾಹಿತ/ತೆ ◯

5. ಶಾಲೆಯ ಆಡಳಿತ ಮಂಡಳಿಯ ನಮೂನೆ : ___________________________

6. ಶಾಲೆಯ ಹೆಸರು ಮತ್ತು ವಿಳಾಸ : ________________________________

7. ಸ್ವ ವಿಳಾಸ :_________________________________

8. ಶೈಕ್ಷಣಿಕ ವಿದ್ಯಾರ್ಹತೆ (ಬಿ.ಎ/ ಎಮ್.ಎ. ಪಿ.ಎಚ್.ಡಿ) ____________

9. ವೃತ್ತಿಪರ ತರಬೇತಿ (ಡಿ.ಇಡಿ/ ಬಿ.ಇಡಿ/ ಎಮ್.ಇಡಿ) _____________

10. ಇತರೆ ವಿದ್ಯಾರ್ಹತೆ ಏನಾದರೂ ಇದ್ದಲ್ಲಿ ________________

11. ಕನ್ನಡ ಭಾಷಾ ಬೋಧನೆಯಲ್ಲಿ ಪಡೆದ ಅನುಭವ :

- 5 ವರ್ಷಗಳಿಗಿಂತ ಕಡಿಮೆ ◯
- 5 ರಿಂದ 10 ವರ್ಷ ◯
- 10 ರಿಂದ 15 ವರ್ಷ ◯
- 20 ವರ್ಷಕ್ಕಿಂತ ಹೆಚ್ಚು ◯

12. ವಾರ್ಷಿಕ ಆದಾಯ (ರೂಗಳಲ್ಲಿ) :

- 20000 ರೂ. ಕಡಿಮೆ ◯
- 20000 ರೂ ರಿಂದ 60000 ◯
- 60000 ರೂ ರಿಂದ 80000 ◯
- 80000 ರೂ ಮೇಲ್ಪಟ್ಟು ◯

13. ಪ್ರಸ್ತುತ ನಿರ್ವಹಿಸುತ್ತಿರುವ ಕರ್ತವ್ಯಗಳು

ಬೋಧನೆ ◯ ಸಂಪನ್ಮೂಲವ್ಯಕ್ತಿ ◯ ಮೇಲ್ವಿಚಾರಣೆ/ ಅಧಿಕೃತ ತಪಾಸಣೆ ◯

ಆಡಳಿತನಿರ್ವಹಣೆ ◯ ಪಠ್ಯಪುಸ್ತಕ ರಚನಾಸಮಿತಿಯಸದಸ್ಯರು ◯

14. ಪ್ರವೃತ್ತಿಗಳು / ಇತರೆ ಆಸಕ್ತಿಗಳು :

ಅ) ಪ್ರವೃತ್ತಿಗಳು/ ಆಸಕ್ತಿಗಳು : _________ __________ __________

ಆ) ನೀವು ವೃತ್ತಿ ಪತ್ರಿಕೆಗಳು, ಮಾಸ ಪತ್ರಿಕೆಗಳು, ಮತ್ತು ಪುಸ್ತಕಗಳನ್ನು ಓದುವಿರಾ ?

ಹೌದು ◯ ಇಲ್ಲ ◯

| | ಪ್ರಾದೇಶಿಕ ಭಾಷೆ | ಕನ್ನಡ ಭಾಷೆ | ಆಂಗ್ಲ ಭಾಷೆ |
|---|---|---|---|
| • ವೃತ್ತ ಪತ್ರಿಕೆಗಳು | ◯ | ◯ | ◯ |
| • ಮಾಸ ಪತ್ರಿಕೆಗಳು | ◯ | ◯ | ◯ |

- ಪುಸ್ತಕಗಳು

ಇ) ನೀವು ಆಕಾಶವಾಣಿ ಆಲಿಸುವಿರಾ?

ಹೌದು ಇಲ್ಲ

ಹೌದಾದರೆ ಯಾವ ಭಾಷೆಯಲ್ಲಿ?

ಪ್ರಾದೇಶಿಕ ಭಾಷೆ ಕನ್ನಡ ಭಾಷೆ ಆಂಗ್ಲ ಭಾಷೆ

ಇತರೆ ________________

ಈ) ನೀವು ದೂರದರ್ಶನ ವೀಕ್ಷಿಸುವಿರಾ ?

ಹೌದು ಇಲ್ಲ

ಹೌದಾದರೆ ಯಾವ ಭಾಷೆಯಲ್ಲಿ

ಪ್ರಾದೇಶಿಕ ಭಾಷೆ ಕನ್ನಡ ಭಾಷೆ ಆಂಗ್ಲ ಭಾಷೆ

ಇತರೆ ________________

ಉ) ನೀವು ಚಲನ ಚಿತ್ರಗಳನ್ನು ವೀಕ್ಷಿಸುವಿರಾ ?

ಹೌದು ಇಲ್ಲ

ಹೌದಾದರೆ ಯಾವ ಭಾಷೆಯಲ್ಲಿ?

ಪ್ರಾದೇಶಿಕ ಭಾಷೆ ಕನ್ನಡ ಭಾಷೆ ಆಂಗ್ಲ ಭಾಷೆ

ಇತರೆ ________________

15. ನಿಮಗೆ ತಿಳಿದಿರುವ ಭಾಷೆಗಳು :

| ಭಾಷೆಗಳು | ಮಾತನಾಡಲು | ಓದಲು | ಬರೆಯಲು |
|---|---|---|---|
| 1) ______________ | | | |
| 2) ______________ | | | |
| 3) ______________ | | | |
| 4) ______________ | | | |

**II) ಶೈಕ್ಷಣಿಕ ಮಾಹಿತಿ**

**I. ಒಂದು ಭಾಷೆಯಾಗಿ ಕನ್ನಡವನ್ನು ಬೋಧಿಸುವ ಅಗತ್ಯತೆ :**

1) ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಕನ್ನಡ ಭಾಷಾ ಭೋಧನೆಯ ಅಗತ್ಯತೆ ಇದೆಯೇ ?

ಹೌದು ಇಲ್ಲ

2) ಕನ್ನಡವನ್ನು ಕಡ್ಡಾಯವಾಗಿ ಒಂದು ಭಾಷೆಯಾಗಿ ಬೋಧಿಸಬೇಕೆ?

ಹೌದು  ಇಲ್ಲ 

3) ಯಾವ ಉದ್ದೇಶಗಳು ಈಡೇರಿಕೆಗಾಗಿ ಕನ್ನಡವನ್ನು ಬೋಧಿಸಬೇಕು.

----------------------------------------------------------------

----------------------------------------------------------------

----------------------------------------------------------------

**II. ಕನ್ನಡ ಮತ್ತು ತರಗತಿ :**

1) ನೀವು ಯಾವ ತರಗತಿಗೆ ಕನ್ನಡವನ್ನು ಬೋಧಿಸುತ್ತಿದ್ದೀರಿ ?

5ನೇ ತರಗತಿ 6ನೇ ತರಗತಿ 7ನೇ ತರಗತಿ

2) ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ಯಾವ ತರಗತಿಯಿಂದ ಪ್ರಾರಂಭಿಸಬೇಕು ?

1ನೇ ತರಗತಿಯಿಂದ 2ನೇ ತರಗತಿಯಿಂದ 3ನೇ ತರಗತಿಯಿಂದ

**III. ಬೋಧನಾ ಅವಧಿಗಳು ಮತ್ತು ಕನ್ನಡ :**

1) ವಾರಕ್ಕೆ ಎಷ್ಟು ಅವಧಿಗಳು ಈ ಕೆಳಗಿನ ತರಗತಿಗಳಗೆ ಕನ್ನಡವನ್ನು ಬೋಧಿಸುತ್ತಿರುವಿರಿ ?

5ನೇ ತರಗತಿ _____ ಅವಧಿಗಳು

6ನೇ ತರಗತಿ _____ ಅವಧಿಗಳು

7ನೇ ತರಗತಿ _____ ಅವಧಿಗಳು

2) ಕನ್ನಡ ಬೋಧನೆಗೆ ನಿಗಧಿಪಡಿಸಿದ ಅವಧಿಗಳು ಸೂಕ್ತವಾಗಿವೆ ಎಂದು ನೀವು ಭಾವಿಸುವಿರಾ?

ಹೌದು ಇಲ್ಲ

3) ಇಲ್ಲವೆಂದಾದಲ್ಲಿ ವಾರದಲ್ಲಿ ಎಷ್ಟು ಅವಧಿಗಳನ್ನು ಕನ್ನಡ ಬೋಧಿಸಲು ನಿಗಧಿಪಡಿಸಬೇಕು ?

5ನೇ ತರಗತಿ _____ ಅವಧಿಗಳು

6ನೇ ತರಗತಿ _____ ಅವಧಿಗಳು

7ನೇ ತರಗತಿ _____ ಅವಧಿಗಳು

**IV. ಕನ್ನಡದ ಪ್ರಸ್ತುತ ಸ್ಥಿತಿ :**

ಮಕ್ಕಳಲ್ಲಿ ಕನ್ನಡ ಭಾಷಾ ಸ್ಥಿತಿ ಹೀಗಿದೆ.

→ ಅರ್ಥಮಾಡಿಕೊಳ್ಳುತ್ತಾರೆ ಮಾತನಾಡುವುದಿಲ್ಲ

→ ಅರ್ಥಮಾಡಿಕೊಂಡು ಮಾತನಾಡುತ್ತಾರೆ

→ ಓದಲು ಬರುತ್ತದೆ ಬರೆಯಲು ಬರುತ್ತದೆ

→ ಓದಲು ಬರುವುದಿಲ್ಲ ಬರೆಯಲು ಬರುವುದಿಲ್ಲ

**V. ಕನ್ನಡದ ಕುರಿತಾಗಿರುವ ಮನೋಭಾವ ಮತ್ತು ಅಭಿಪ್ರೇರಣೆ :**

1) ನಿಮ್ಮ ವೀಕ್ಷಣೆಯಲ್ಲಿ ಹಿರಿಯ ಪ್ರಾಥಮಿಕ ಹಂತದಲ್ಲಿ ಕನ್ನಡಭಾಷೆ ಕುರಿತಾಗಿ ವಿದ್ಯಾರ್ಥಿಗಳ ಮನೋಭಾವ ಹೇಗಿದೆ ?

ಧನಾತ್ಮಾಕ ◯ ಋಣಾತ್ಮಕ ◯ ತಟಸ್ಥ ◯

2) ವಿದ್ಯಾರ್ಥಿಗಳು ಕನ್ನಡ ಕಲಿಯಲು ಆಸಕ್ತರಾಗಿದ್ದಾರೆಯೇ ?

ಹೆಚ್ಚು ಆಸಕ್ತರು ◯ ಸ್ವಲ್ಪಮಟ್ಟಿಗೆ ◯ ಆಸಕ್ತಿ ◯

ಇಲ್ಲ/ಅನಾಸಕ್ತರು ◯

3) ನಿಮ್ಮ ವಿದ್ಯಾರ್ಥಿಗಳು ಕನ್ನಡವನ್ನು ಕಲಿಯಲು ಸ್ವ ಅಭಿಪ್ರೇರಿತ ರಾಗುತ್ತಾರೆಯೆ?

ಹೌದು ◯ ಇಲ್ಲ

4) ಹೌದಾದಲ್ಲ ಈ ಕೆಳಗಿನ ಯಾವ ಅಂಶಗಳಿಂದ ಅಭಿಪ್ರೇರಿತರಾಗುತ್ತಿದ್ದಾರೆ ?

- ಪೋಷಕರು ಮತ್ತು ಕುಟುಂಬ ಸದಸ್ಯರಿಂದ ◯
- ಪುಸ್ತಕಗಳಿಂದ, ರೇಡಿಯೋ, ದೂರದರ್ಶನದಿಂದ ◯
- ಶಿಕ್ಷಕರು ಮತ್ತು ಸಹ ಪಾಠಿಗಳಿಂದ
- ಆಂಗ್ಲ ಮಾಧ್ಯಮದ ವಿದ್ಯಾರ್ಥಿಗಳನ್ನು ಕನ್ನಡ ಕಲಿಯುವಂತೆ ಪ್ರೇರೇಪಿಸಲು ಸಾಧ್ಯವಿದೆಯೇ?

  ಹೌದು ◯ ಇಲ್ಲ ◯ ಹೌದಾದರೆ, ಹೇಗೆ

  ----------------------------------------------

**VI. a) ಕನ್ನಡ ಭಾಷೆಯ ಪಠ್ಯಕ್ರಮ ಮತ್ತು ಸಂಪನ್ಮೂಲಗಳು**

1) ಹಿರಿಯ ಪ್ರಾಥಮಿಕ ಹಂತಕ್ಕೆ ನಿಗಧಿಪಡಿಸಿದ ಪಠ್ಯಪುಸ್ತಕ ಮತ್ತು ಸಂಪನ್ಮೂಲ ಪುಸ್ತಕಗಳ ಕುರಿತು ನಿಮ್ಮ ಅಭಿಪ್ರಾಯ ವೇನು?

----------------------------------------------

----------------------------------------------

2) ಪಠ್ಯ ಪುಸ್ತಕಗಳು ತೃಪ್ತಿದಾಯಕವಾಗಿವೆಯೇ

ಹೌದು ◯ ಇಲ್ಲ ◯

ವಿವರಣೆ ನೀಡಿ

----------------------------------------------

----------------------------------------------

3) ಬೋಧಿಸಲು ತುಂಬಾ ಕಠಿಣಮಟ್ಟದವು

ಹೌದು ◯ ಇಲ್ಲ ◯ ವಿವರಣೆನೀಡಿ

----------------------------------------------

----------------------------------------------

4) ಬೋಧಿಸಲು ಅವು ಪರಿಣಮ ಕಾರಿಯಾಗಿವೆಯೇ ?

ಹೌದು ◯ ಇಲ್ಲ ◯

ವಿವರಣೆನೀಡಿ

-----------------------------------------------------------

-----------------------------------------------------------

5) ಕನ್ನಡ ಬೋಧಕರಿಗೆ ಖಚಿತವಾದ ಮಾರ್ಗದರ್ಶನ ಮತ್ತು ಕೌಶಲ್ಯಗಳನ್ನೊಳಗೊಂಡ ತವುಗಳೇ ಹೌದು ◯ ಇಲ್ಲ ◯

6) ಹೆಚ್ಚು ಪಾಠಗಳರುವುದರಿಂದ ನಿಗಧಿತ ವೇಳೆಯಲ್ಲ ಪೂರ್ಣಗೊಳಸುವುದು ಕಷ್ಟ

ಹೌದು ◯ ಇಲ್ಲ ◯

7) ಪಠ್ಯಪುಸ್ತಕದಲ್ಲಿರುವ ಬೋಧನಾಂಶಗಳು ಅಸ್ಪಷ್ಟವಾಗಿದೆ.

ಹೌದು ◯ ಇಲ್ಲ ◯

8) ಭಾಷಾಭ್ಯಾಸ ಚಟುವಟಿಕೆಗಳು ಸೂಕ್ತವಾಗಿವೆಯೇ?

ಹೌದು ◯ ಇಲ್ಲ ◯

ಹೌದೆಂದಾದರೆ

-----------------------------------------------------------

9) ಅವು ಆಸಕ್ತದಾಯಕ ವಾಗಿದ್ದು ವಿದ್ಯಾರ್ಥಿಗಳಗೆ ಖಚಿತ ಮತ್ತು ಅರ್ಥಪೂರ್ಣ ಅಭ್ಯಾಸ ಮಾಡಲು ಸಹಾಯಕವಾಗಿವೆಯೇ ?

ಹೌದು ◯ ಇಲ್ಲ ◯

10) ವಿದ್ಯಾರ್ಥಿಗಳಲ್ಲ ಸೃಜನಶೀಲತೆಯನ್ನು ಬೆಳಸುತ್ತಿವೆಯೇ?

ಹೌದು ◯ ಇಲ್ಲ ◯

11) ಬೋಧನೆಸಂಬಂಧಿಸಿದ ಪಠ್ಯಕ್ಕೆ ಪೂರಕವಾದ ದೃಶ್‌ಶ್ರವಣೋಪ್ರಕರಣಗಳ ಲಭ್ಯತೆ ಇದೆಯೇ

ಹೌದು ◯ ಇಲ್ಲ ◯

**VI. b) ಕನ್ನಡ ಭಾಷಾ ಪಠ್ಯಪುಸ್ತಕ ಕುರಿತಾಗಿ ನಿಮ್ಮ ಅಭಿಪ್ರಾಯವೇನು ?**

- ಕನ್ನಡ ಭಾಷಾ ಪಠ್ಯಪುಸ್ತಕದ ವಿಷಯದ ಆಯ್ಕೆ ಮತ್ತು ಸಂಘಟನೆ ಸೂಕ್ತವಾಗಿವೆಯೇ

ಹೌದು ◯ ಇಲ್ಲ ◯

- ಕನ್ನಡ ಭಾಷಾ ಪಠ್ಯಪುಸ್ತಕದ ವಿಷಯ ನಿರೂಪಣೆ ಸಮರ್ಪಕವಾಗಿದೆಯೇ

ಹೌದು ◯ ಇಲ್ಲ ◯

- ಕನ್ನಡ ಭಾಷಾ ಪಠ್ಯಪುಸ್ತಕದ ನೀಡಿರುವ ದುಷ್ಟಾಂತಗಳು ಸಮಂಜಸವಾಗಿವೆಯೇ

- ಭಾಷಾಭ್ಯಾಸಗಳು ಪಠ್ಯಕ್ರಮದಲ್ಲಿ ನಿಗಧಿಪಡಿಸಿದ ವಿವಿಧ ಕಲಿಕಾ ಉದ್ದೇಶಗಳನ್ನು ಪೂರೈಸುವಂತಿವೆಯೇ?
- ಪಠ್ಯ ಪುಸ್ತಕದ ಬಾಹ್ಯ ಅಂಶಗಳು ಸಮಂಜಸ ವಾಗಿವೆಯೆ?
  - ಪಠ್ಯಪುಸ್ತಕದ ಗಾತ್ರ ◯
  - ಪಠ್ಯಪುಸ್ತಕದ ಮುಖಪುಟ ◯
  - ಪಠ್ಯಪುಸ್ತಕದ ಗುಣಮಟ್ಟ ◯
  - ಕಾಗದದ ಗುಣಮಟ್ಟ ◯
  - ಮುದ್ರಣ ದೋಷಗಳು ◯
- ನೀವು ಕನ್ನಡ ಮಾಧ್ಯಮದ ಪ್ರಥಮ ಭಾಷಾ ಪಠ್ಯಪುಸ್ತಕವನ್ನು ಗಮನಿಸಿರುವಿರಾ ?

  ಹೌದು ◯ ಇಲ್ಲ ◯
- ಹೌದಾದರೆ ಕನ್ನಡ ಪ್ರಥಮ ಭಾಷಾ ಪಠ್ಯಪುಸ್ತಕ ಮತ್ತು ದ್ವಿತೀಯ ಭಾಷಾ ಕನ್ನಡ ಪಠ್ಯಪುಸ್ತಕದ ಭಿನ್ನತೆಗಳನ್ನು ಗುರ್ತಿಸಿರಿ

  ---------------------------------------

**VII. ಕನ್ನಡ ಭಾಷಾ ಬೋಧನಾ ವಿಧಾನ**

1) ಕನ್ನಡ ಭಾಷಾ ಸಂಪನ್ಮೂಲ ಪುಸ್ತಕಗಳನ್ನು, ಬೋಧನಾ ವಿಧಾನಗಳನ್ನು ನಿಮ್ಮ ಬೋಧನೆಯ ಸಂದರ್ಭದಲ್ಲಿ ಬಳಸಿದ್ದೀರಾ ?

- ಹೌದು ಬಹಳಷ್ಟು ಸಂದರ್ಭದಲ್ಲಿ ◯
- ಹೌದು, ಆದರೆ ಕೆಲವೊಂದು ಬದಲಾವಣೆಗಳನ್ನು ಮಾಡಿಕೊಂಡನಂತರ ◯

  ಅವುಗಳೆಂದರೆ

  ---------------------------------------------------
- ಇಲ್ಲ, ಅವು ಹೆಚ್ಚು ಪ್ರಾಯೋಗಿಕವಾಗಿಲ್ಲ ನನ್ನತರಗತಿಗೆ ಅವುಗಳ ಅಗತ್ಯತೆ ಇಲ್ಲ ◯

  ಕೆಲವೊಂದು ಉದಾಹರಣೆಗಳನ್ನು ನೀಡಿ

  ---------------------------------

2) ಕನ್ನಡ ತರಗತಿಯಲ್ಲಿ ಬಳಸುವ ಬೋಧನಾ ತಂತಗಳು ಮತ್ತು ಚಟುವಟಿಕೆಗಳು ಯಾವುವು?

   ---------------------------------------------------

3) ನೀವು ಕನ್ನಡ ಬೋಧನೆ ಮಾಡುವಾಗಿ ಯಾವ ಬೋಧನಾ ವಿಧಾನವನ್ನು ಅನುಸರಿಸುತ್ತೀರಿ?

-------------------------------------------------------

4) ನಿಮಗೆ ಯಾವ ತರಹದ ಬೋಧನಾ ವಿಧಾನ ತುಂಬಾ ಇಷ್ಟ ?

-------------------------------------------------------

-------------------------------------------------------

5) ನಿಮಗೆ ಯಾವ ಭಾಷಾ ಬೋಧನಾ ವಿಧಾನ ತುಂಬಾ ಸಮಂಜಸ ವೆನಿಸುತ್ತದು?

-------------------------------------------------------

6) ನೀವು ಕನ್ನಡವನ್ನು ಬೋಧಿಸುವಾಗ ಆಕಾಶವಾಣಿ ಟೇಪರೆಕಾರ್ಡರ್ ದೂರದರ್ಶನ, ಸಿ.ಡಿ. ಮತ್ತು ಅಂತರ್ಜಾಲ ಇನ್ನಿತರ ಮಾಧ್ಯಮಗಳನ್ನು ಬಳಕೆ ಮಾಡುತ್ತೀರಾ?

ಹೌದು ◯ ಇಲ್ಲ ◯

ಹೌದಾದರೆ ವಿವರಿಸಿ

-------------------------------------------------------

-------------------------------------------------------

7) ಕನ್ನಡ ತರಗತಿಯಲ್ಲಿ ನೀವು ಸಂಪೂರ್ಣ ಕನ್ನಡವನ್ನೇ ಮಾತನಾಡುತ್ತೀರಾ ?

ಹೌದು ◯ ಇಲ್ಲ ◯

ಇಲ್ಲವೆಂದಾದರೆ ವಿವರಿಸಿ

-------------------------------------------------------

-------------------------------------------------------

8) ವಿದ್ಯಾರ್ಥಿಗಳು ಸಂಪೂರ್ಣವಾಗಿ ಕನ್ನಡಲ್ಲೇ ವ್ಯವಹರಿಸುವರೇ?

ಹೌದು ◯ ಇಲ್ಲ ◯

ಇಲ್ಲವೆಂದಾದರೆ ವಿವರಿಸಿ

-------------------------------------------------------

-------------------------------------------------------

9) ನಿಮ್ಮ ವಿದ್ಯಾರ್ಥಿಗಳಿಗೆ ಭಾಷಾ ಕೌಶಲಗಳನ್ನು ಹೇಗೆ ಬೋಧಿಸುತ್ತೀರಿ?

-------------------------------------------------------

-------------------------------------------------------

10) ನೀವು ಕನ್ನಡವನ್ನು ಬೋಧಿಸುವ ಸಂದರ್ಭದಲ್ಲಿ ಯಾವರೀತಿಯ ಸಮಸ್ಯೆಗಳನ್ನು ಎದುರಿಸುತ್ತಿದ್ದೀರಿ?

→ ಪಠ್ಯ ಮೂಲಸಮಸ್ಯೆಗಳು ◯

→ ಬೋಧನಾವಿಧಾನಗಳ ಸಮಸ್ಯೆಗಳು ◯

→ ಭಾಷಿಕ ಸಮಸ್ಯೆಗಳು ◯

→ ಬೋಧನೋಪಕರಣಗಳು ◯

→ ತರಬೇತಿಗಳ ಕೊರತೆ ◯

→ ಮೌಲ್ಯಮಾಪನ ◯

11) ನಿಮ್ಮ ಶಾಲೆಯಲ್ಲಿ ಕನ್ನಡ ಭಾಷಾ ಪ್ರಯೋಗಾಲಯ ವಿದೆಯೇ?

ಹೌದು ◯ ಇಲ್ಲ ◯

ಹೌದಾದರೆ ನೀವು ಅದನ್ನು ಹೇಗೆ ಬಳಸುತ್ತಿದ್ದೀರಿ

---------------------------------------------------------------

---------------------------------------------------------------

ಕನ್ನಡಭಾಷಾ ಶಿಕ್ಷಕರಾಗಿ ನಿಮ್ಮ ಮೇಲಾಧಿಕಾರಿಗಳಿಂದ ಯಾವ ರೀತಿಯ ಸಲಹೆ ಮತ್ತು ಸಹಾಯವನ್ನು ಬಯಸುತ್ತೀರಿ?

---------------------------------------------------------------

**VIII. ಕನ್ನಡ ಭಾಷಾ ತರಬೇತಿಗಳು:**

1) ಆಂಗ್ಲ ಮಾಧ್ಯಮದಲ್ಲಿ ಕನ್ನಡವನ್ನು ಬೋಧಿಸಲು ಸೇವಾನಿರತ ತರಬೇತಿಗಳನ್ನು ಪಡೆಯುವುದರಿಂದ ಉಪಯುಕ್ತತೆ ಇದೆಯೇ?

ಹೌದು ◯ ಇಲ್ಲ ◯

2) ಯಾವ ಕ್ಷೇತ್ರಕ್ಕೆ ಸಂಬಂಧಿಸಿದಂತೆ ತರಬೇತಿಗಳನ್ನು ನೀಡ ಬೇಕೆಂಬುದು ನಿಮ್ಮ ಅಭಿಪ್ರಾಯ.

---------------------------------------------------------------

---------------------------------------------------------------

3) ನೀವು ಕನ್ನಡ ಭಾಷಾ ಬೋಧನೆ ವಿಷಯಕ್ಕೆ ಸಂಬಂಧಿಸಿದಂತೆ ತರಬೇತಿಗಳನ್ನು ಪಡೆದಿರುವಿರೇ?

ಹೌದು ◯ ಇಲ್ಲ ◯

- ಹೌದಾದರೆ ಮಾಹಿತಿಗಳನ್ನು ನೀಡಿರಿ :
- ತರಬೇತಿಯ ಹೆಸರು :

  ----------------------------------

- ವರ್ಷ :

  ----------------------------------

- ಅವಧಿ :

  ----------------------------------

- ತರಬೇತಿನಿರ್ವಹಿಸಿದ ಸಂಸ್ಥೆಯ ಹೆಸರು :

  ----------------------------------

- ಆ ತರಬೇತಿಯ ಅನುಭವ :

  ----------------------------------

